# ಶಿಕ್ಷಣಶಾಸ್ತ್ರ

ಪ್ರೊ. ರ್‍ಯಾಂಗ್ಲರ್ ಕಟ್ಟಿ ಪಾಂಡುರಂಗರಾಯರು, ಎಮ್. ಎ.
ಇವರ ಮುನ್ನುಡಿಯೊಡನೆ

अनिर्वेदः श्रियोमूलमनिर्वेदः परं सुखम् ।
( रामायण )

ಶ್ರೀನಿವಾಸ ಗುರಾಚಾರ್ಯ ಬೈಚವಾಳ, ಎಮ್. ಎ.

೧೯೪೨



ಕಾಣದ ಕೈಯಾಗಿ ಯಾವಾಗಲೂ ನನ್ನನ್ನು ಪ್ರೇರಿಸುತ್ತಿರುವ
ಶಿಕ್ಷಣಪ್ರೇಮಿಗಳೂ ಪೂಜ್ಯ ತಂದೆಯವರೂ
ದಿವಂಗತರೂ ಆದ

**ಶ್ರೀಮಾನ್ ಗುರಾಚಾರ್ಯ ತಿಮ್ಮಣಾಚಾರ್ಯ ಬೈಚವಾಳ**

ಇವರ ಅಡಿದಾವರೆಗಳಲ್ಲಿ ಈ ನನ್ನ ಕೃತಿಯನ್ನು
ಅರ್ಪಿಸಿದ್ದೇನೆ.

# ಮುನ್ನುಡಿ

ಶಿಕ್ಷಣವು ಒಂದು ಶಾಸ್ತ್ರ. ಅದು ಬಹು ಮಹತ್ತ್ವದ ವಿಷಯ. ಒಂದು ನಾಡಿನ ಆಗು ಹೋಗುಗಳು ಅಲ್ಲಿಯ ಶಿಕ್ಷಣವನ್ನವಲಂಬಿಸಿ ಇರುವುವೆಂಬುದು ನಿರ್ವಿವಾದದ ಸಂಗತಿ. ರಾಷ್ಟ್ರನಿರ್ಮಾಣಕಾರ್ಯದಲ್ಲಿ ಶಿಕ್ಷಣಕ್ಕೆ ಮಹತ್ತ್ವದ ಸ್ಥಾನಮಾನಗಳಿವೆ. ಇದನ್ನು ತಿಳಿದುಕೊಂಡು ನಮ್ಮ ಜನರು ಈ ವಿಷಯದಲ್ಲಿ ಇತ್ತೀಚೆಗೆ ವಿಶೇಷ ಆಸಕ್ತಿಯನ್ನು ತೋರಿಸತೊಡಗಿದ್ದಾರೆ. "ಶಿಕ್ಷಣಶಾಸ್ತ್ರ"ದ ಬರೆಹಗಾರರು ಪಾಶ್ಚಾತ್ಯ ತಜ್ಞರ ಗ್ರಂಥಗಳನ್ನೂ ಭಾರತೀಯ ತಜ್ಞರ ಅಭಿಪ್ರಾಯಗಳನ್ನೂ ಆಳವಾಗಿ ಅಭ್ಯಸಿಸಲೇಬೇಕಾಗುವುದು. ಹೀಗೆ ಮಾಡಿ ಬರೆದ ಗ್ರಂಥಗಳೇ ಹೆಚ್ಚು ಉಪಯುಕ್ತ; ಹೆಚ್ಚು ಅಗತ್ಯ ; ಕನ್ನಡ ಭಾಷೆಯಲ್ಲಿಯಂತೂ ಅತ್ಯಗತ್ಯ. ಈ ದೃಷ್ಟಿಯಿಂದ ಶ್ರೀ. ಬೈಚವಾಳರು ಮಾಡಿರುವ ಪ್ರಯತ್ನವು ಪ್ರಶಂಸಾರ್ಹವಿದೆ.

ಶಿಕ್ಷಣಶಾಸ್ತ್ರದ ಜ್ಞಾನವು ಬರಿಯ ಶಿಕ್ಷಕ ವರ್ಗದವರಿಗಷ್ಟೇ ಅಲ್ಲದೆ ಮಿಕ್ಕವರಿಗೂ—ತಾಯ್ತಂದೆಗಳಿಗೂ ಇನ್ನುಳಿದ ಪಾಲಕರಿಗೂ ಸಾಮಾನ್ಯವಾಗಿ ಸಮಾಜದ ಎಲ್ಲ ಪ್ರೌಢ ವ್ಯಕ್ತಿಗಳಿಗೂ—ಬೇಕೇಬೇಕು. ಏಕೆಂದರೆ, ಮಾನವನ ಶಿಕ್ಷಣಕ್ಕೆ ಅವನ ಶೈಶವಾವಸ್ಥೆಯಿಂದಲೇ ಪ್ರಾರಂಭವಾಗುವುದು. '**ಕೊಮಿನಿಯಸ**' ಎಂಬ ೧೭ನೆಯ ಶತಮಾನದಲ್ಲಿ ಆಗಿಹೋದ ಶಿಕ್ಷಣ ತಜ್ಞನ ಅಭಿಪ್ರಾಯದಲ್ಲಿ "ಶಿಶುವಿನ ಮೊತ್ತಮೊದಲನೆಯ ಶಿಕ್ಷಣವು ಅದರ ತಾಯಿಯ ತೊಡೆಯ ಮೇಲೆ." ಈ ತತ್ತ್ವವನ್ನೇ ಇತ್ತೀಚಿನ ತಜ್ಞರೂ ಎತ್ತಿ ಹಿಡಿದಿದ್ದಾರೆ. ಸಮಾಜವೂ ಶಿಕ್ಷಣದ ಘಟಕವಾಗಿದೆ.

ಶ್ರೀಮಾನ್ ಬೈಚವಾಳರು ತಮ್ಮ ಪ್ರಸ್ತುತ ಗ್ರಂಥದಲ್ಲಿ ಶಿಕ್ಷಣದ ವಿಷಯವಾಗಿ ಅನೇಕ ಮಹತ್ತ್ವದ ಪ್ರಶ್ನೆಗಳನ್ನು ಎತ್ತಿ ಚರ್ಚಿಸಿದ್ದಾರೆ. ಅವರು ತಮ್ಮ ಅಭ್ಯಾಸದಿಂದ ಪಡೆದ ಜ್ಞಾನವನ್ನು ಅನುಭವದ ಒರೆಗಲ್ಲಿಗೆ ಹಚ್ಚಿ ತಮಗೆ ಯೋಗ್ಯವೆಂದು ಕಂಡುದನ್ನು ಜನರ ಮುಂದೆ ಇರಿಸಿದ್ದಾರೆ.

ಮೇಲಾಗಿ, ಅವರು ಎತ್ತಿರುವ ಪ್ರಶ್ನೆಗಳು, ಉತ್ತರಕೊಡುವ ರೀತಿ, ತಳೆದಿರುವ ಧೋರಣೆ, ತಿಳುಹಿಸಿರುವ ಕ್ರಮದ ಸರಳತೆ, ಬರೆದ ಕನ್ನಡ— ಇವೆಲ್ಲವೂ ಓದುಗರ ಮನಸ್ಸನ್ನು ಹಿಡಿಯುವಂತಿವೆ. ಈ ತಿಳಿಗನ್ನಡದ ಗ್ರಂಥವು ಸಾಮಾನ್ಯವಾಗಿ ಎಲ್ಲ ಕನ್ನಡಿಗರಿಗೂ, ಮುಖ್ಯವಾಗಿ ಶಿಕ್ಷಕ ಶಿಕ್ಷಣಾಲಯಗಳಲ್ಲಿ (ಟ್ರೇನಿಂಗ್ ಸ್ಕೂಲು, ಕಾಲೇಜಗಳಲ್ಲಿ) ಕಲಿಯುವ ವಿದ್ಯಾರ್ಥಿಗಳಿಗೂ ಉಪಯುಕ್ತವಾಗುವುದೆಂಬ ಭರವಸೆ ನನಗಿದೆ.

ಶ್ರೀಮಾನ್ ಬೈಚವಾಳರು ಮಾಡಿರುವ ಈ ಪ್ರಯತ್ನಕ್ಕಾಗಿ ಅವರಿಗೆ ನನ್ನ ಅಭಿನಂದನೆಗಳು.

ಮಾಧ್ಯಮಿಕ ಶಿಕ್ಷಕರ ಕಾಲೇಜ,<br>
ಬೆಳಗಾವಿ<br>
ತಾ. ೬-೩-೧೯೪೨.

ಪಿ. ಎಸ್. ಕಟ್ಟಿ,<br>
ಪ್ರಿನ್ಸಿಪಾಲ.

# ನಿವೇದನೆ

ಧಾರವಾಡದಲ್ಲಿಯ ಮಾಧ್ಯಮಿಕ ಶಾಲೆಯಿಂದ ಶಿಕ್ಷಕರ ಶಿಕ್ಷಣ ವಿದ್ಯಾಲಯಕ್ಕೆ ಕಳೆದ ವರುಷದಲ್ಲಿ ನನಗೆ ವರ್ಗವಾಯಿತು. ಇಲ್ಲಿ ಶಿಕ್ಷಣ ಶಾಸ್ತ್ರವನ್ನು ಕಲಿಸುವ ಸುಯೋಗವು ನನಗೊದಗಿತು. ಶಿಕ್ಷಣಶಾಸ್ತ್ರ ವನ್ನು ಕುರಿತು ಆಂಗ್ಲಭಾಷೆಯಲ್ಲಿರುವ ಗ್ರಂಥಗಳನ್ನು ಅಭ್ಯಸಿಸಿ ಕೆಲವು ಕಾಲ ಕಲಿಸಬೇಕಾಯಿತು. ಶಿಕ್ಷಣವು ಈಗ ಶಾಸ್ತ್ರವಾಗಿಯೂ ಕಲೆ ಯಾಗಿಯೂ ಬೆಳೆದುಬಂದುದರಿಂದ ಅದರಲ್ಲಿ ಹೊಸ–ಹೊಸವಾದ ಪ್ರಯೋಗಗಳೂ ನೂತನ–ಪದ್ಧತಿಗಳೂ ಬಳಕೆಯಲ್ಲಿ ಬರುತ್ತಿವೆ. ಅವೆಲ್ಲಕ್ಕೂ ಸರಿಹೋಗುವ ಪದಗಳನ್ನು ಕನ್ನಡದಲ್ಲಿ ಪಡೆಯುವುದು ಕಠಿನ ವಾಗಿ ಕಂಡಿತು. ಕನ್ನಡದಲ್ಲಿ ಶಿಕ್ಷಣವಿಷಯಕ ಗ್ರಂಥಗಳೂ ತೀರ ವಿರಳ. ಇದ್ದವುಗಳನ್ನೇ ಪರಿಕಿಸಿ ನೋಡಿದರೂ ಆಂಗ್ಲಶಬ್ದಗಳಿಗೆ ಸರಿ ಯಾದ ಅರ್ಥವನ್ನು ಕೊಡುವಂತಹ ಪದಗಳು ಕನ್ನಡದಲ್ಲಿ ನನಗೆ ದೊರೆಯಲಿಲ್ಲ. ಕನ್ನಡದಲ್ಲಿ ಶಿಕ್ಷಣದ ವಿಷಯವಾಗಿರುವ ವಿಶಿಷ್ಟವಾದ ಆಂಗ್ಲಶಬ್ದಗಳಿಗೆ ಸರಿಯಾದ ಪದಗಳನ್ನು ಅವಶ್ಯವಿದ್ದರೆ ನಿರ್ಮಿಸಬೇಕೆಂಬ ಇಷ್ಟೆಯಾಯಿತು. ಶಿಕ್ಷಣ ವಿಷಯದ ವಿಚಾರಗಳನ್ನು ಸರಿಯಾಗಿ ವ್ಯಕ್ತ ಪಡಿಸುವ ಮಾತುಗಳನ್ನು ಕನ್ನಡದಲ್ಲಿ ತರಬೇಕೆಂಬ ಬಯಕೆಯೂ ಹುಟ್ಟಿತು. ಅಲ್ಲದೆ ಕನ್ನಡದಲ್ಲಿಯ ಶಿಕ್ಷಣವಿಷಯಕ ಗ್ರಂಥಗಳ ಕೊರತೆಯೂ ನನ್ನನ್ನು ಪೀಡಿಸಿತು. ಆದುದರಿಂದ ನನ್ನ ತೊಂದರೆಯನ್ನು ನಮ್ಮ ಸಂಸ್ಥೆಯ ಮುಖ್ಯೋಪಾಧ್ಯಾಯರಾದ ಶ್ರೀಯುತ ತೊರಗಲ್ಲ ಹನುಮಂತರಾಯರಿಗೂ ಇವರಿಗೆ ಸಹಾಯಕರಾದ ಉಮಚಿ ಮುಚ್ಚರಾಯ ರಿಗೂ ನಿವೇದಿಸಿದೆನು. ಇವರು "ಕನ್ನಡದಲ್ಲಿ ಶಿಕ್ಷಣಶಾಸ್ತ್ರವನ್ನು ಕುರಿತು ಒಂದು ಗ್ರಂಥವನ್ನು ನೀವೇ ಬರೆಯಿರಿ." ಎಂದು ನನ್ನನ್ನು ಪ್ರೇರಿಸಿದರು. ಇವರ ಪ್ರೇರಣೆಯ ಫಲವೇ **ಶಿಕ್ಷಣಶಾಸ್ತ್ರ**ವೆಂಬ ಈ ಗ್ರಂಥವಾಗಿದೆ. ಇವರಿಬ್ಬರಿಗೂ ನನ್ನ ಹೃತ್ಪೂರ್ವಕ ವಂದನೆಗಳು.

ಬೆಳಗಾವಿಯಲ್ಲಿರುವ ಮಾಧ್ಯಮಿಕಶಿಕ್ಷಕ ಶಿಕ್ಷಣ ವಿದ್ಯಾಲಯದ ಪ್ರಧಾನೋಪಾಧ್ಯಾಯರಾದ ರ್‍ಯಾಂಗ್ಲರ್ ಕಟ್ಟಿ ಪಾಂಡುರಂಗರಾಯರು

ಈ ಪುಸ್ತಕಕ್ಕೆ ಮುನ್ನುಡಿಯನ್ನು ಬರೆದುಕೊಟ್ಟು ಅದರಬೆಲೆಯನ್ನು ಹೆಚ್ಚಿಸಿ ನನ್ನನ್ನು ಅಮ್ಮಿತಿಯಾಗಿ ಪ್ರೋತ್ಸಾಹಿಸಿದರು. ಇವರಿಗೆ ನಾನೆಷ್ಟು ಧನ್ಯವಾದಗಳನ್ನರ್ಪಿಸಿದರೂ ಕಡಮೆಯೆ.

ಈ ಕಾರ್ಯದಲ್ಲಿ ನನಗೆ ವಿಶೇಷವಾಗಿ ಸಲಹೆ-ಸಹಕಾರಗಳನ್ನು ಕೊಟ್ಟು ನೆರವಾದವರು— ಶ್ರೀಮಾನ್ ತಟ್ಟಿ ಶಾಮರಾಯರು, ಪ್ರೊ. ಆರ್. ವ್ಹಿ. ಜಾಗಿರದಾರರು, ಎಮ್. ಎ. (ಲಂಡನ್), ಪಂಡಿತ ಮ. ಪ್ರ. ಪೂಜಾರ, ಶ್ರೀ. ನಾ. ವೆ. ಕುರಟಿ, ಶ್ರೀ. ಗುರುನಾಥ ಜೋಶಿ ಅವರು. ಇವರುಗಳಲ್ಲದೆ ಶ್ರೀಯುತ ಪೋತದಾರ ರಂಗರಾಯರು, ಕೆ. ಬಿ. ತೇರಗಾಂವಕರ, ರಾಮಚಂದ್ರ ಬೆಳಗಾಂವಕರ, ವ್ಹಿ. ಕೆ. ಹೋಳಿಕಟ್ಟಿ, ಮುಜುಮದಾರ ನರಸಿಂಗರಾಯರು— ನನಗೆ ನಾನಾವಿಧವಾಗಿ ನೆರವಾದರು. ಇವರೆಲ್ಲರ ಉಪಕಾರವನ್ನು ನಾನು ಮನಃಪೂರ್ವಕವಾಗಿ ಸ್ಮರಿಸುವೆನು.

ಈ ಪುಸ್ತಕವನ್ನು ಬರೆಯಲು ನನಗೆ ಸಹಾಯಕವಾದ ಗ್ರಂಥಗಳ ಲೇಖಕರಿಗೂ ನಾನು ಧನ್ಯವಾದಗಳನ್ನು ಅರ್ಪಿಸುವುದು ನನ್ನ ಧರ್ಮ ವೆಂದು ಭಾವಿಸಿದ್ದೇನೆ. ಅದಕ್ಕೋಸ್ಕರ ಅವರೆಲ್ಲರಿಗೂ ನನ್ನ ಕೃತಜ್ಞತೆಯ ಅಭಿನಂದನೆಗಳು.

ಧಾರವಾಡದ ಕರ್ನಾಟಕ ಪ್ರಿಂಟಿಂಗ್ ವರ್ಕ್ಸದ ಒಡೆಯರಾದ ಶ್ರೀಮಾನ್ ಪಿ. ಯ. ಜತಾರ ಅವರು ಅಲ್ಪಾವಧಿಯಲ್ಲಿಯೆ ಅಂದವಾಗಿ ಪುಸ್ತಕವನ್ನು ಅಚ್ಚುಹಾಕಿಕೊಟ್ಟುದಕ್ಕಾಗಿ ಮತ್ತು ರಾಮಾಶ್ರಯ ಬುಕ್ ಡಿಪೋದ ಒಡೆಯರಾದ ಶ್ರೀ. ಅಕಳವಾಡಿಯವರು ಪ್ರಕಾಶಕರಾಗಲು ಒಪ್ಪಿದುದಕ್ಕಾಗಿ ಅವರನ್ನು ಮನಃಪೂರ್ವಕವಾಗಿ ಅಭಿನಂದಿಸುತ್ತೇನೆ.

**ಶ್ರೀನಿವಾಸ ಗುರಾಚಾರ್ಯ ಬೈಚವಾಳ.**

# ಪರಿವಿಡಿ

# CONTENTS

# ಶಿಕ್ಷಣಶಾಸ್ತ್ರ

೧

## ಶಿಕ್ಷಣದ ಸ್ವರೂಪವೂ ಉದ್ದೇಶವೂ.

ಶಿಕ್ಷಣವೆಂದರೇನು? ಈ ಪ್ರಶ್ನೆಯ ಉತ್ತರವು—ಎಂದರೆ ಶಿಕ್ಷಣದ ಸ್ವರೂಪವು—ಬಹು ವ್ಯಾಪಕವಾಗಿರುವುದು. ಶಿಕ್ಷಣವು ಎಲ್ಲಿ ಹುಟ್ಟಿತು, ಹೇಗೆ ಬೆಳೆಯಿತು ಎಂಬುದನ್ನು ಕೂಡ ಹೇಳಲು ಸಾಧ್ಯವಿಲ್ಲ. ಅದು ಕೊನೆಯನ್ನಂತೂ ಇಂದಿಗೂ ಮುಟ್ಟಿಲ್ಲ; ಬೆಳೆಯುತ್ತಲೇ ಇದೆ. ಶಿಕ್ಷಣದ ಕ್ಷೇತ್ರವು ಅಷ್ಟು ವ್ಯಾಪಕವೂ ಅಪಾರವೂ ಆಗಿದೆ.

ವಸ್ತುತಃ ಕೂಸು ಗರ್ಭಾಶಯದಲ್ಲಿರುವಾಗಲೇ ಅದರ ಮೇಲೆ ಶೈಕ್ಷಣಿಕಪರಿಣಾಮವು ನಡೆಯುತ್ತಲಿರುವುದು. ಮಗುವು ಹುಟ್ಟಿದಾಗಲೆ ಶಿಕ್ಷಣಕ್ಕೆ ಪ್ರಾರಂಭವಾಗುವುದು. ಸಾಯುವ ವರೆಗೂ ಕ್ಷಣಕ್ಷಣಕ್ಕೆ ಮಾನವಪ್ರಾಣಿಯು ಶಿಕ್ಷಣವನ್ನು ಹೊಂದುತ್ತಲೇ ಇರುವನು ಎಂಬುದನ್ನು ಯಾರೂ ವಿರೋಧಿಸಿಲ್ಲ; ಖಂಡಿಸಿಲ್ಲ; ಎಂದ ಬಳಿಕ ಶಿಕ್ಷಣವು ಹೇಗೆ ಅನಂತವಾಗಿರುವುದೆಂಬುದನ್ನು ನಾವು ಊಹಿಸಬಹುದು. ಶಿಕ್ಷಣವೆಂದ ರೇನೆಂಬುದನ್ನು ವಿವರಿಸಿ ಹೇಳಲು ಬಹುಜನರು ಬಹುವಿಧದಿಂದ ಯತ್ನಿಸಿದ್ದಾರೆ. ಅವರವರ ದೃಷ್ಟಿಯಿಂದ ಆ ಎಲ್ಲ ಉತ್ತರಗಳೂ ಸಮರ್ಪಕವಾಗಿವೆಯೆಂದು ತೋರಿದರೂ ಒಬ್ಬರ ಮಾತು ಇನ್ನೊಬ್ಬರ ಮಾತಿಗೆ ಸಂಪೂರ್ಣವಾಗಿ ಹೊಂದಿಕೆಯಾಗುವಂತಿಲ್ಲ. ಇದು ಒಂದು ಸಮಸ್ಯೆಯೆಂದು ಇಟ್ಟುಕೊಂಡರೆ, ಅದರ ಉತ್ತರವನ್ನು ಬಹು ಜನ ವಿದ್ವಾಂಸರು ಮಾರ್ಮಿಕವಾಗಿ ಬಿಡಿಸಿರುವುದನ್ನು ನಾವು ನೋಡಬಹುದು. ಮುಂದೆ ಕೊಟ್ಟಿರುವ ಅಂಥ ಕೆಲವು ವಿವರಣೆಗಳನ್ನು ಓದಿದರೆ, ಈ ಸಮಸ್ಯೆಯು ಬಹು ಮಹತ್ತ್ವವುಳ್ಳದ್ದೂ ಬಹು ವ್ಯಾಪಕವಾದದ್ದೂ ಅತ್ಯಂತ

ವಿಶಾಲದೃಷ್ಟಿಯುಳ್ಳದ್ದೂ ಆಗಿದೆಯೆಂಬುದು ಸಹಜವಾಗಿ ಕಂಡಬರುವುದು. ಅವನ್ನೆಲ್ಲ ಓದಿ ಕೊನೆಗೆ ನಮಗೇನು ಗೊತ್ತಾಗುವುದೆಂಬುದನ್ನು ನೋಡೋಣ. ಹಾಗೆ ಓದುತ್ತ ಸಾಗುವಾಗ ನಮ್ಮ ದಾರಿಗೆ ಕವಲೊಡೆಯಬಾರದೆಂದು ಒಂದು ಸಾಮಾನ್ಯ ಸಂಗತಿಯನ್ನು ಮೊದಲೇ ಹೇಳುವುದು ಒಳಿತಲ್ಲವೆ? ಶಿಕ್ಷಣವು ಒಂದು ಸಾಂಸ್ಕೃತಿಕ ಸಮಸ್ಯೆಯು; ಮಾನವಪ್ರಾಣಿಯು ಸಂಸ್ಕೃತಿಯನ್ನು ಹೇಗೆ ಹೊಂದುವುದೆಂಬುದರ ವಿವೇಚನೆಯು ಈ ಸಮಸ್ಯೆಯಲ್ಲಿ ಅಡಕವಾಗಿದೆ. ಈ ದೃಷ್ಟಿಯಿಂದ ನಾವು ಶಿಕ್ಷಣವೆಂದರೇನೆಂಬುದನ್ನು ವಿವೇಚಿಸುವುದಾದರೆ ಮಾನವನ ಮನಸ್ಸು, ಶರೀರ, ಆತ್ಮ ಇವಕ್ಕೆ ತಕ್ಕ ಸಂಸ್ಕಾರಗಳನ್ನು ಒದಗಿಸಿ ಅವನ್ನು ಉನ್ನತ ಸ್ಥಿತಿಗೆ ಒಯ್ಯುವುದಕ್ಕೆ ಶಿಕ್ಷಣವು ಬೇಕು, ಅಥವಾ ಶಿಕ್ಷಣದಿಂದಲೇ ಮಾನವನ ಉನ್ನತಿಯಾಗುವುದು, ಎಂದು ಹೇಳಬಹುದು. ಅರ್ಥಾತ್ ಮಾನವನ ಉನ್ನತಿಗೆ ಕಾರಣವಾಗುವಂತಹ ಸಂಸ್ಕಾರಗಳನ್ನು ಒದಗಿಸುವುದೇ ಶಿಕ್ಷಣ, 'ಶಿಕ್ಷಣದ ಧ್ಯೇಯ' ಎಂದು ಇನ್ನೊಂದು ವಿಧವಾಗಿಯೂ ಹೇಳಬಹುದು.

ಒಬ್ಬ ಹಳೆಯಕಾಲದ ಶಿಕ್ಷಕನನ್ನು ನೀವು "ಶಿಕ್ಷಣವೆಂದರೇನು?" ಎಂದು ಕೇಳಿದರೆ ಅವನು "ಓದು, ಬರೆಹ, ಗಣಿತ ಮುಂತಾದ ಹಲಕೆಲವು ವಿಷಯಗಳನ್ನು ವಿದ್ಯಾರ್ಥಿಗಳಿಗೆ ಕಲಿಸುವುದು" ಎಂದು ತಟ್ಟನೆ ಹೇಳಿಬಿಡಬಹುದು. ಇದು ಶಿಕ್ಷಣದ ಬಾಲ ವ್ಯಾಖ್ಯೆಯಾಗಬಹುದು.

(೧) "ಅಜ್ಞಾನದ ಕತ್ತಲೆಯಲ್ಲಿ ದಾರಿಗಾಣದೆ ತೊಳಲುತ್ತಿರುವ ಮಾನವನ ಮನಸ್ಸಿಗೆ ಜ್ಞಾನದ ಬೆಳಕನ್ನು ತೋರಿಸಿ ಅದು ಯೋಗ್ಯ ದಾರಿಯಲ್ಲಿ ಸಾಗುವಂತೆ ಮಾಡುವುದೇ ಶಿಕ್ಷಣದ ಗುರಿ. ಹೀಗೆ ಬೆಳಕನ್ನು ತೋರಿಸುವವರು ಯಾರು? ಒಬ್ಬ ಜೀವಿಯು ಇನ್ನೊಬ್ಬ ಜೀವಿಯ ಜೀವಕ್ಕೆ ಈ ಬೆಳಕನ್ನು ತೋರಿಸುವನು. ಎಂದರೆ ತನ್ನ ಜೀವನದ ಸತ್ತ್ವವನ್ನು ಅವನ ಜೀವನದಲ್ಲಿ ಬೀರುವನು. ಈ ಕೃತಿಯು ಚೈತನ್ಯಪ್ರೇರಿತವಾಗಿ ಸಾಗುವುದು. ಈ ಮಾತನ್ನು ಶಿಕ್ಷಕ, ವಿದ್ಯಾರ್ಥಿ, ಇವರಿಗೆ ಹೊಂದಿಸಿ ಹೇಳುವುದಾದರೆ ಶಿಕ್ಷಕನು ತನ್ನ ಜೀವನದ ಸತ್ತ್ವವನ್ನು ವಿದ್ಯಾರ್ಥಿಯ

ಜೀವಕ್ಕೆ ನೀಡುವನು. ಎಂದರೆ ತನ್ನಲ್ಲಿರುವ ಸ್ಫೂರ್ತಿಯನ್ನು ತನ್ನ ವಿದ್ಯಾರ್ಥಿಯಲ್ಲಿ ಒಡಮೂಡಿಸುವನು. ಇದೇ ಶಿಕ್ಷಣ."

**ಎಡ್ವರ್ಡ ಥ್ರಿಂಗ್** ಎಂಬ ಶಿಕ್ಷಣಶಾಸ್ತ್ರಜ್ಞನ ದೃಷ್ಟಿಗೆ ಶಿಕ್ಷಣದ ಸ್ವರೂಪವು ಈ ಬಗೆಯಾಗಿ ಕಾಣಿಸಿತು.

(೨) "ಹುಟ್ಟಿದಂದಿನಿಂದ ಸಾಯುವ ವರೆಗೂ ಜೀವನವು ಸಾಗುತ್ತಹೋದಂತೆ ಅದರ ಜೊತೆಯಲ್ಲಿಯೇ ಶಿಕ್ಷಣವು ಸಾಗುತ್ತಿರುವುದು." ಶಿಕ್ಷಣವು ಮಕ್ಕಳಿಗೆ ಸಂಸಾರ-ರಥವನ್ನು ವೈಯಕ್ತಿಕವಾಗಿಯೂ ಸಾಮೂಹಿಕವಾಗಿಯೂ ಸಾಗಿಸುವುದಕ್ಕೆ ತಕ್ಕ ಯೋಗ್ಯತೆಯನ್ನು ಕೊಡುವುದು. ಮಕ್ಕಳ ಶಿಕ್ಷಣವು ಅವರು ಕೈಕೊಳ್ಳುವ ವ್ಯವಸಾಯ, ಪ್ರಾಪಂಚಿಕ ಜೀವನ, ಸ್ನೇಹಸಂಬಂಧ, ಶರೀರಸಂಬಂಧ, ತಾಯ್ತಂದೆಗಳು—ಮುಂತಾದವುಗಳನ್ನು ಅವಲಂಬಿಸುವುದು. ಈ ರೀತಿಯಿಂದ **ರೇಮಂಟ** ಎಂಬ ತಜ್ಞನು ಶಿಕ್ಷಣದ ವ್ಯಾಪಕಸ್ವರೂಪವನ್ನು ವಿವರಿಸುವನು.

(೩) "ಸತ್ಯ, ಪ್ರಾಮಾಣಿಕತೆ, ಭೂತದಯೆ, ಸ್ವಾರ್ಥತ್ಯಾಗ, ಸ್ವಾವಲಂಬನ, ಸಾಮಾಜಿಕ ಸುಖಜೀವನ, ಪ್ರೇಮ ಮೊದಲಾದ ಉದಾತ್ತ ಧ್ಯೇಯಗಳನ್ನು ಸಾಧಿಸಲು ಬಯಸಿ, ಅದಕ್ಕನುಗುಣವಾದ ಯೋಗ್ಯತೆಯನ್ನು ಪಡೆಯಲು ವ್ಯಕ್ತಿಯು ದೊರಕಿಸಿದ ಸ್ವಾನುಭವವೇ ಶಿಕ್ಷಣವು" ಎಂದು **ಡಾಕ್ಟರ್ ಜೋನ್ಸ್** ಎಂಬ ಶಾಸ್ತ್ರಜ್ಞನು ಶಿಕ್ಷಣದ ಇನ್ನೊಂದು ದೃಷ್ಟಿಯನ್ನು ವಿವೇಚಿಸಿರುವನು.

(೪) "ಮನುಷ್ಯನು ತನ್ನ ಹಿಂದಿನ ಅನುಭವಗಳನ್ನು ನೆನಪಿನಲ್ಲಿಟ್ಟುಕೊಂಡು ಅವುಗಳ ಸಾಹಾಯ್ಯದಿಂದ ತನ್ನ ಮುಂದಿನ ಜೀವನವು ಸುಗಮವಾಗುವಂತೆ ಮಾಡಿಕೊಳ್ಳುವ ಪ್ರಾಣಿಯು. ಈ ಅನುಭವ ಸಂಪಾದನೆ ಅದರ ಸರಿಯಾದ ವಿನಿಯೋಗ ಇವೇ ಎಲ್ಲ ಶಿಕ್ಷಣದ ತಳಹದಿಯು" ಎಂದು **ಬ್ಯಾಗ್ಲೆ** ಎಂಬವನ ಅಭಿಪ್ರಾಯವಿದೆ.

(೫) "ಮನುಷ್ಯನಿಗೆ ಶಿಕ್ಷಣವು ನಿಸರ್ಗ, ಸಾಮಾನ್ಯ ವಸ್ತುಗಳು, ಮಾನವರು—ಈ ಮೂರರ ಮೂಲಕವಾಗಿ, ಎಂದರೆ ತ್ರಿಮುಖವಾಗಿ, ಲಭಿಸುವುದು. ಮಾನವರಿಂದ ಮತ್ತು ವಸ್ತುಗಳಿಂದ ಸಿಕ್ಕಬಹುದಾದ

ಜ್ಞಾನಾನುಭವಗಳೊಡನೆ ನೈಸರ್ಗಿಕ ಶಿಕ್ಷಣವು ಸಾಧ್ಯವಾಗುವಂತೆ ಮಾಡುವುದು ಅವಶ್ಯ. ಈ ಮೂರು ಬಗೆಯ ಶಿಕ್ಷಣವು ಪರಸ್ಪರ ಪೂರಕವಾಗಿ ಸಾಗುತ್ತ ಹೋದರೆ ಶಿಕ್ಷಣದ ಧ್ಯೇಯವು ಸಾಧ್ಯವಾಗಬಹುದು.'' ಎಂದು **ರೂಸೋ**ನು ಶಿಕ್ಷಣದ ವ್ಯಾಖ್ಯೆಯನ್ನು ಹೇಳಿರುವನು.

(೬) ''ಮನುಷ್ಯನ ಎಲ್ಲ ಶಕ್ತಿಗಳನ್ನು ಸ್ವಾಭಾವಿಕವಾಗಿಯೂ ಪ್ರಾಗತಿಕವಾಗಿಯೂ ಸುಗಮವಾಗಿಯೂ ವಿಕಾಸಗೊಳಿಸುವುದೇ ಶಿಕ್ಷಣವು. ಶಿಕ್ಷಕರ ಮತ್ತು ವಿದ್ಯಾರ್ಥಿಗಳ ಸಂಬಂಧವು ಸ್ಫೂರ್ತಿಯುಕ್ತವಾಗಿರಬೇಕು.'' ಎಂದು **ಪೆಸ್ಟಲಜಿ**ಯು ಹೇಳಿರುವನು.

(೭) ''ಸದ್ಗುಣಗಳ ಅಥವಾ ನೀತಿಯ ವಿಕಾಸವೇ ಶಿಕ್ಷಣದ ಹೆಗ್ಗುರಿ. ಆಂತರಿಕ (ಆತ್ಮಿಕ) ಸ್ವಾತಂತ್ರ್ಯ, ಪ್ರಬಲವಾದ ಇಚ್ಛಾಶಕ್ತಿ, ಸಹಾನುಭೂತಿ, ನ್ಯಾಯಬುದ್ಧಿ, ಆದರ್ಶವಾದ ನ್ಯಾಯಾನುವರ್ತನ, ಇವನ್ನು ಸಾಧಿಸುವುದಕ್ಕಾಗಿಯೇ ಶಿಕ್ಷಣವನ್ನು ಹೊಂದಬೇಕು.'' ಎಂದು ಹೇಳಿ **ಹರ್ಬಾರ್ಟ**ನು ಶಿಕ್ಷಣದ ಸಮಸ್ಯೆಯನ್ನು ಪೂರ್ಣಮಾಡಲು ಯತ್ನಿಸಿರುವನು.

(೮) ''ನಿಸರ್ಗವನ್ನೂ ಮನುಷ್ಯನನ್ನೂ ದೇವರೇ ನಿರ್ಮಿಸಿರುವನು. ವಿಶ್ವದೊಳಗಿನ ಎಲ್ಲ ವಸ್ತುಗಳು ಪರಮಾತ್ಮನ ಶಾಶ್ವತವಾದ ನಿಯಮಗಳನ್ನು ಪಾಲಿಸುವುವು. ಪ್ರಪಂಚವು ಪರಮಾತ್ಮನ ಪ್ರತೀಕವು. ಎಂದರೆ ಎಲ್ಲ ವಸ್ತುಗಳಲ್ಲಿಯೂ ಪರಮಾತ್ಮನ ಅಂಶಗಳು ಇದ್ದೇ ಇರುವುವು. ಇಂತಹ ವಿಸ್ತೃತವಾದ ದೈವಿಕ ತತ್ತ್ವವನ್ನು ಪರಮಾತ್ಮನಲ್ಲಿ ಸಮಾವೇಶಮಾಡುವುದೇ ಶಿಕ್ಷಣ. ಇದು ಕೇವಲ ಅನುಕರಣೆಯಿಂದ ಸಾಧ್ಯವಿಲ್ಲ. ಉಜ್ವಲವಾದ ಆತ್ಮೀಯ ಚಟುವಟಿಕೆಗಳಿಂದಲೇ—ಧ್ಯಾನ, ಭಜನೆ, ನಿಸರ್ಗಪೂಜೆ, ಯೋಗಾಭ್ಯಾಸ ಮುಂತಾದವುಗಳಿಂದಲೇ—ಇದನ್ನು ಸಾಧಿಸಬಹುದು. ಆಗ ರಚನಾತ್ಮಕ ಶಕ್ತಿಯೂ ವ್ಯಕ್ತಿತ್ವವೂ ಲಭಿಸುವುವು'' ಎಂದು ಹೇಳಿ **ಫ್ರೊಬೆಲ್ಲ**ನು ತನ್ನ ಶೈಕ್ಷಣಿಕಸಂಸ್ಕಾರ ಮಾರ್ಗವನ್ನು ವಿಶದೀಕರಿಸಿರುವನು.

(೯) ''ಶಿಶುವಿನ ಜೀವನವು ಸ್ವಾಭಾವಿಕವಾಗಿ ಬೆಳೆಯುವಂತೆ ಮಾಡುವ ಕ್ರಿಯಾತ್ಮಕ ಸಾಹಾಯ್ಯವೇ ಶಿಕ್ಷಣವು'' ಎಂದು

**ಡಾ. ಮಾಂಟೇಸರಿಯು** ತನ್ನ ಶೈಕ್ಷಣಿಕ ದೃಷ್ಟಿಯನ್ನು ಬಹು ಮಾರ್ಮಿಕ ವಾಗಿ ಜನತೆಯ ಮುಂದಿಟ್ಟಿರುವಳು.

ಈ ಒಂಬತ್ತು ಜನರು ಪಾಶ್ಚಾತ್ಯ ದೇಶಗಳಲ್ಲಿಯ ಶಿಕ್ಷಣ ಶಾಸ್ತ್ರಜ್ಞ ರಲ್ಲಿ ತಜ್ಞರೆನಿಸಿಕೊಂಡವರು. ಇವರೆಲ್ಲರೂ ಆ ವಿಷಯದಲ್ಲಿ ಹಲವು ಉದ್ಗ್ರಂಥಗಳನ್ನು ಬರೆದು ತಮ್ಮ ತಮ್ಮ ಅಭಿಪ್ರಾಯಗಳನ್ನು ಸಮರ್ಥನೆ ಮಾಡಲು ಹವಣಿಸಿದ್ದಾರೆ. ಶಿಕ್ಷಣವೆಂದರೇನೆಂಬ ಸಮಸ್ಯೆಯನ್ನು ಇವರು ಬಿಡಿಸಿದ ರೀತಿಗಳನ್ನು ನೋಡುವುದರಿಂದ ನಮಗೆ ಯಾವ ಸಂಗತಿಯು ಗೊತ್ತಾಗುವದೆಂಬುದನ್ನು ನೋಡೋಣ.

ಮೊದಲನೆಯ ವಿಚಾರಕ್ರಮದಲ್ಲಿ ಹೇಳಿದ ಜ್ಞಾನದ ಬೆಳಕನ್ನು ಪಡೆಯುವುದಕ್ಕೂ ಎರಡನೆಯದರಲ್ಲಿ ಪ್ರತಿಪಾದಿತವಾದ ಸತ್ಯ ಮುಂತಾದ ಜೀವನದ ಉದಾತ್ತಧ್ಯೇಯಗಳನ್ನು ಸಾಧಿಸುವುದಕ್ಕೂ ಅನುಭವವೇ ಮುಖ್ಯಸಾಧನವೆಂದು ಹೇಳಲು ಅಡ್ಡಿಯಿಲ್ಲ. ಮೂರನೆಯದರಲ್ಲಿ ಯಂತೂ ಅನುಭವ, ಅದರ ವಿನಿಯೋಗ ಇವನ್ನೇ ಪ್ರಧಾನವಾಗೆಣಿಸ ಬೇಕೆಂದು ಸ್ಪಷ್ಟವಾಗಿ ಹೇಳಿದೆ.

ವ್ಯಕ್ತಿಯು ಇಂದ್ರಿಯಗಳ ಮುಖಾಂತರವಾಗಿ ಜಗತ್ತಿನ ಜ್ಞಾನ ವನ್ನು ಪಡೆಯುವುದೇ ಅನುಭವವು. ಈ ಅನುಭವವೇ ಉದಾತ್ತ ಧ್ಯೇಯ ಗಳಿಗೆ ಮೂಲಾಧಾರವು. ಅನುಭವದಂತಹ ಶಿಕ್ಷಕನು ಪ್ರಪಂಚದಲ್ಲಿ ಬೇರೆಯಿಲ್ಲ. ಅನುಭವಜನ್ಯ ಜ್ಞಾನದಲ್ಲಿ ಸಂಶಯಕ್ಕೆ ಆಸ್ಪದವಿಲ್ಲ; ದೃಢೀಕರಣದ ಆವಶ್ಯಕತೆಯಿಲ್ಲ; ಅದು ಸ್ವಸಂಪಾದಿತವಾದುದರಿಂದ ಮರೆತುಹೋದೀತೆಂಬ ಭಯವೂ ಇರಲಾರದು. ಈ ಅನುಭವದಲ್ಲಿ ಎರಡು ತರಗತಿಗಳನ್ನು ಕಲ್ಪಿಸುವುದುಂಟು:—(೧) ಪ್ರತ್ಯಕ್ಷ; (೨) ಅಪ್ರ-ತ್ಯಕ್ಷ. ವಿದ್ಯಾರ್ಥಿಗಳ ಪ್ರತ್ಯಕ್ಷಾನುಭವದಿಂದ ಅಪ್ರತ್ಯಕ್ಷವಾದ ಅನುಭವ ಗಳನ್ನು ಪ್ರತ್ಯಕ್ಷಮಾಡಿಕೊಡುವುದಕ್ಕಾಗಿ ಶಾಲೆಗಳು ಹುಟ್ಟಿದುವು. ಇದೇ ಶಾಲಾಶಿಕ್ಷಣದ ವೈಶಿಷ್ಟ್ಯವು. ಪ್ರಪಂಚದಲ್ಲಿ ಹೆಚ್ಚು ಕಾಲಾವಧಿಯಲ್ಲಿ ಹೆಚ್ಚು ಪರಿಶ್ರಮದಿಂದ ಪಡೆಯಬಹುದಾದ ಅನುಭವಗಳನ್ನು ಶಿಕ್ಷಕರ ನೆರವಿನಿಂದ ವಿದ್ಯಾರ್ಥಿಗಳು ಶಾಲೆಯಲ್ಲಿ ಅಲ್ಪಕಾಲದಲ್ಲಿ ಅಲ್ಪ ಶ್ರಮ ದಿಂದ ದೊರಕಿಸಿಕೊಳ್ಳುವರು.

ಈ ಬಗೆಯ ಅನುಭವಗಳ ಸಂಗ್ರಹದಿಂದ ವ್ಯಕ್ತಿಯು ಪರಿಸ್ಥಿತಿಯನ್ನು ಎದುರಿಸುವ ಶಕ್ತಿಯನ್ನು ಪಡೆಯುವನು. ಪರರ ಅನುಭವವನ್ನು ಸ್ವೀಕರಿಸಿ ತನ್ನದನ್ನಾಗಿ ಮಾಡಿಕೊಳ್ಳುವ ಅಥವಾ ತಾನು ಪಡೆದ ಅನುಭವವನ್ನು ನೆನಪಿಟ್ಟುಕೊಂಡು ಇನ್ನೊಂದು ಸಂದರ್ಭದಲ್ಲಿ ಅದನ್ನು ಉಪಯೋಗಿಸುವ ಶಕ್ತಿಯು ಇತರ ಪ್ರಾಣಿಗಳಿಗೆ ಇರುವಷ್ಟಕ್ಕಿಂತಲೂ ಮನುಷ್ಯನಿಗೆ ಹೆಚ್ಚಾಗಿ ಇರುವುದು. ದೀಪಕ್ಕೆರಗಿದ ಪತಂಗದ ರೆಕ್ಕೆಯು ಎಷ್ಟು ಸಾರೆ ಸುಟ್ಟರೂ ಆ ಅನುಭವವನ್ನು ಉಪಯೋಗಿಸಿಕೊಂಡು ತಾನು ದೀಪಕ್ಕೆ ಎರಗಲಾಗದು ಎಂಬ ಜ್ಞಾನವನ್ನು ಪತಂಗವು ಪಡೆಯಲಾರದು. ಆದರೆ ಒಮ್ಮೆ ದೀಪಕ್ಕೆ ಕೈ ಹಿಡಿದು ಚುರುಕು ಹಚ್ಚಿಕೊಂಡ ಚಿಕ್ಕ ಕೂಸು ಪುನಃ ದೀಪವನ್ನು ಹಿಡಿಯಲು ಹವಣಿಸದು. ಮನುಷ್ಯನು ತನ್ನ ಹಾಗೂ ಮಾನವಕುಲದ ಗತಾನುಭವಗಳನ್ನು ಸಂಗ್ರಹಿಸಿಕೊಂಡು ಜಾಣನಾಗುವನು; ಮತ್ತು ಅವನ್ನು ತನ್ನ ಮುಂದಿನ ಪೀಳಿಗೆಗೆ ಸಾಗಿಸುವನು. ಆ ಕಾರ್ಯವು ಮಾತಿನಿಂದಲೂ ಬರೆಹಗಳ ಮೂಲಕವಾಗಿಯೂ ಸಾಗುವುದು. 'ಹಿರಿಯರು ಕಿರಿಯರಿಗೆ ಕೊಡುವ ಋಣವೇ ಶಿಕ್ಷಣ'ವೆಂಬ ಮಾತಿನಲ್ಲಿಯೂ ಇದೇ ವಿಚಾರವಿದೆ. **'ಮನುಷ್ಯನಿಗೆ ಶಕ್ತಿಗಳನ್ನೂ ಒಲವುಗಳನ್ನೂ ಅವಕ್ಕೆ ತಕ್ಕ ಅನುಭವಗಳನ್ನೂ ಒದಗಿಸಿಕೊಟ್ಟು, ಸುವ್ಯವಸ್ಥಿತವಾಗಿ ಅವುಗಳನ್ನು ಮಾರ್ಪಡಿಸಿ, ಅವಕ್ಕೆ ಉದಾತ್ತ ಸ್ವರೂಪವನ್ನು ತಂದುಕೊಡುವುದೇ ಶಿಕ್ಷಣ.'** ಎಂದರೆ ಈ ಮೂವರೂ ಶಿಕ್ಷಣಶಾಸ್ತ್ರಜ್ಞರ ವಿಚಾರವನ್ನು ಸಂಗ್ರಹಿಸಿ ಹೇಳಿದಂತಾಯಿತೆನ್ನಲು ಅಡ್ಡಿಯಿಲ್ಲ.

ಇನ್ನುಳಿದವರ ಅಭಿಪ್ರಾಯಗಳೂ ಈ ತತ್ತ್ವಕ್ಕೆ ವಿರೋಧವಾಗಿಲ್ಲವೆಂಬುದನ್ನು ನಾವು ನೋಡಿ ಮನಗಾಣಬಹುದು.

ಇದು ಪಾಶ್ಚಾತ್ಯ ಪಂಡಿತರ ಅಭಿಪ್ರಾಯವಾಯಿತು. ಪೌರ್ವಾತ್ಯರಾದ ಭಾರತೀಯ ವಿದ್ವಾಂಸರ ದೃಷ್ಟಿಯಲ್ಲಿಯೂ ಕೂಡ ಶಿಕ್ಷಣವು ಸಾಂಸ್ಕೃತಿಕ ವಿಷಯವೆಂದೂ ಸಂಸ್ಕಾರವೇ ಶಿಕ್ಷಣದ ಗುರಿಯೆಂದೂ ಹೇಗೆ ನಿಶ್ಚಿತವಾಗುವುದೆಂಬುದನ್ನು ಇನ್ನು ನೋಡೋಣ.

(೧) "ಮನುಷ್ಯನಲ್ಲಿ ಸ್ವಾಭಾವಿಕವಾಗಿ ಇರುವ ದೈವತ್ವವನ್ನು ಪ್ರಕಟಿಸುವುದೇ ಧರ್ಮವು. ಅವನಲ್ಲಿ ಮೊದಲೇ ಇದ್ದ ಪರಿಪೂರ್ಣತೆಯ ಪ್ರಾದುರ್ಭಾವವೇ ಶಿಕ್ಷಣವು" ಎಂದು **ಸ್ವಾಮಿ ವಿವೇಕಾನಂದರು** ಹೇಳಿರುವರು.

(೨) "ಕಾರ್ಯ ಮತ್ತು ವಿರಾಮ ಇವು ಒಂದನ್ನೊಂದು ಆಕ್ರಮಿಸದಂತೆ ನೋಡಿಕೊಂಡು ವೈಯಕ್ತಿಕಹಿತಸಂಬಂಧಗಳನ್ನು ಸಾಧಿಸುವ ಒಲುಮೆಯುಳ್ಳ ಮನಃಪ್ರವೃತ್ತಿಗಳನ್ನು ವಿಕಾಸಗೊಳಿಸಿ ಅದಕ್ಕೆ ವಿಶ್ವ-ವಿಶಾಲವಾದ ದೃಷ್ಟಿಯನ್ನು ತಂದುಕೊಡುವುದೇ ಶಿಕ್ಷಣವು. ಈ ಶಿಕ್ಷಣವು ವೈಯಕ್ತಿಕ ಭಯವನ್ನು ಹೊಡೆದೋಡಿಸುವುದು. ಸಮಾಜವು ನಡೆಯಿಸುವ ದಬ್ಬಾಳಿಕೆಯನ್ನೂ ಭಾವನಾಪ್ರಧಾನವಾದ ಹೋರಾಟದ ಬಲವನ್ನೂ ಜೇರ್ಪೆರಸಿ ಕಿತ್ತೊಗೆಯುವುದು" ಎಂದು ಪೌರ್ವಾತ್ಯ ಪಾಶ್ಚಾತ್ಯ ಶಿಕ್ಷಣ ಸಂಸ್ಥೆಗಳನ್ನು ಸಂದರ್ಶಿಸಿ ಶಿಕ್ಷಣದ ಸಮಸ್ಯೆಗಳನ್ನು ಚೆನ್ನಾಗಿ ಅರಿತವರೂ 'ನಯೀ ತಾಲೀಮೀ ಸಂಘ'ದ ಒಬ್ಬ ಪ್ರಮುಖ ಸದಸ್ಯರೂ ಪೌರ್ವಾತ್ಯ ಸಂಸ್ಕೃತಿಯನ್ನು ಬಿಡದೆ ಪಾಶ್ಚಾತ್ಯರ ಹೊಸ ಶಿಕ್ಷಣದ ತತ್ತ್ವಗಳನ್ನು ಸ್ವಾಗತಿಸುವವರೂ ಕಾಶ್ಮೀರ ಸಂಸ್ಥಾನದ ವಿದ್ಯಾಖಾತೆಯ ಡೈರೆಕ್ಟರರೂ ಆದ **ಶ್ರೀ. ಕೆ. ಜಿ. ಸಯ್ಯಾದೀನ**ರು ಹೇಳಿರುವರು.

(೩) ಜಗನ್ಮಾನ್ಯ **ಕವಿವರ ರವೀಂದ್ರರ** ದೃಷ್ಟಿಯಲ್ಲಿಯೂ ಕೂಡ ಇದೇ ತರದ ವಿಚಾರಸರಣಿಯು ಗೋಚರವಾಗುವುದು:

"ನಮ್ಮ ಶೈಕ್ಷಣಿಕಸಂಸ್ಥೆಗಳು ಆತ್ಮಜಾಗೃತಿಯನ್ನುಂಟುಮಾಡಬೇಕು. ಮನಸ್ಸಿಗೆ ತನ್ನ ಒಲುಮೆಯಂತೆ ಹೋಗಲು ಸಹಾನುಭೂತಿ-ಯುಕ್ತವಾದ ಸ್ವಾತಂತ್ರ್ಯವನ್ನೀಯಬೇಕು. ಸತ್ಯಪ್ರಪಂಚದಲ್ಲಿ ಮನಸ್ಸಿಗೆ ತಕ್ಕುದಾದ ಸ್ವಾತಂತ್ರ್ಯವು ದೊರೆಯಬೇಕಾದರೆ ಶಿಕ್ಷಣವು ಅದರ ಅನುಮಾನಶಕ್ತಿಯನ್ನೂ ಕಲಾಸಾಮ್ರಾಜ್ಯದಲ್ಲಿ ಕಲ್ಪನಾಶಕ್ತಿಯನ್ನೂ ಮಾನವಜೀವನದಲ್ಲಿ ಸಹಾನುಭೂತಿಯನ್ನೂ ಪುಷ್ಟೀಕರಿಸಬೇಕು."

(೪) "ಭಾರತದ ಶೈಕ್ಷಣಿಕ ಪದ್ಧತಿಯು ಮಗುವನ್ನು ಉತ್ತಮ ವ್ಯಕ್ತಿಯನ್ನಾಗಿ ಮಾಡುವುದಲ್ಲದೆ ಸಮಾಜದ ಆಧಾರಸ್ತಂಭವಾಗುವಂತೆ

ಅದನ್ನು ತಿದ್ದಿ ಸಿದ್ಧಗೊಳಿಸುವುದು. ಕೇವಲ ಶಾಂತಿ, ನ್ಯಾಯ, ಮುಂತಾದ ಶಬ್ದಾಡಂಬರದಿಂದಲೆ ಸಂತುಷ್ಟವಾಗದೆ ಆಯಾ ಗುಣಗಳ ಆಚರಣೆಯು ಅವಶ್ಯವಾಗಿ ಸಿದ್ಧಿಸಬೇಕೆಂಬ ಸಾಮಾಜಿಕ ರಚನೆಯನ್ನು ನಮ್ಮ ಪೂರ್ವಿಕರು ಮಾಡಿದ್ದರು. ಶಿಕ್ಷಣವು ಬೀಜ ಮತ್ತು ಬೇರಿನಂತೆ ಪರಿಣಮಿಸುವುದು. ಸುಧಾರಣೆಯು ಹೂವು ಮತ್ತು ಹಣ್ಣಿನಂತೆ ವಿರಾಜಿಸುವುದು. ಗುಣಪರಿಪೂರ್ಣವಾದ, ಉದಾತ್ತ ಶಾಂತಿಸದನವಾದ, ಸೌಜನ್ಯಯುಕ್ತವೂ ಮಹೋಪಕಾರಿಯೂ ಆದ ಸಂಸ್ಕಾರವು ಶಿಕ್ಷಣದಿಂದಲೇ ಸಾಧ್ಯವಿದೆಯಲ್ಲದೆ ಇನ್ನಾವುದರಿಂದಲೂ ಸಾಧ್ಯವಿಲ್ಲ" ಎಂದು ನುಡಿದು ಹಿಂದೂ ವಿಶ್ವವಿದ್ಯಾಲಯದ ಸಂಸ್ಥಾಪಕರಲ್ಲೊಬ್ಬರೂ ಭಾರತದ ಅತ್ಯಂತ ಶ್ರೇಷ್ಠತರಗತಿಯ ದಾರ್ಶನಿಕ ವಿದ್ವಾಂಸರಲ್ಲೊಬ್ಬರೂ ಕಾಶೀ ವಿದ್ಯಾಪೀಠದ ಕುಲಪತಿಗಳೂ ಆದ **ಡಾಕ್ಟರ್ ಭಗವಾನದಾಸ**ರು ತಮ್ಮ ಮುಂದಿರುವ ಶೈಕ್ಷಣಿಕ ಸಮಸ್ಯೆಯನ್ನು ಪೂರ್ಣಮಾಡಿದರು.

(೫) "ಸಮಾಜವು ತನ್ನ ಅಸ್ತಿತ್ವವನ್ನು ಕಾಯ್ದುಕೊಂಡು ಪ್ರಗತಿಯ ಹೆಜ್ಜೆಗಳನ್ನು ಇಡುವುದಕ್ಕಾಗಿ ಕೈಕೊಂಡ ಸಹೇತುಕ ಪ್ರಯತ್ನವೇ ಶಿಕ್ಷಣವು. ಇಡಿ ಸಮಾಜದ ಪ್ರಗತಿ, ಮತ್ತು ಸಾಮರ್ಥ್ಯಗಳನ್ನು ಅದರ ಘಟಕಗಳ ಪರಿಪೂರ್ಣತೆಯ ಸಾಹಾಯ್ಯದಿಂದ ಸಾಧಿಸಲು ಹವಣಿಸಬೇಕು. ವಾಸ್ತವಿಕ (Objective) ಸಂಸ್ಕೃತಿಯನ್ನು ಸ್ವಾನುಭವದ ಬಲ (Subjective) ದಿಂದ ಪುನರುಜ್ಜೀವನಗೊಳಿಸುವುದೇ ಶಿಕ್ಷಣವು; ಅಥವಾ ಸುಪ್ತವಾದ ವಾಸ್ತವಿಕ ಶಕ್ತಿಯನ್ನು ಆತ್ಮೀಯ ಪ್ರವೃತ್ತಿಪರ ಚಟುವಟಿಕೆಯಾಗುವಂತೆ ಮಾರ್ಪಡಿಸುವುದೇ ಶಿಕ್ಷಣವು" ಎಂಬುದು ದಿಲ್ಲಿಯ 'ಜಾಮಿಯಾ ಮಿಲ್ಲಿಯಾ ಇಸ್ಲಾಮಿಯಾ' ಶಿಕ್ಷಣಸಂಸ್ಥೆಯ ಅಧಿಪತಿಗಳೂ ವರ್ಧಾಶಿಕ್ಷಣಯೋಜನೆಯನ್ನು ಸಿದ್ಧಪಡಿಸಿದವರಲ್ಲಿ ಪ್ರಮುಖರೂ ಬಾಲಕರ ಮನೋವಿಜ್ಞಾನವನ್ನು ಚೆನ್ನಾಗಿ ಅರಿತವರೂ ಆದ **ಡಾಕ್ಟರ್ ಜಾಕಿರ ಹುಸೇನ** ಅವರು ಶಿಕ್ಷಣವೆಂದರೇನೆಂಬ ಪ್ರಶ್ನೆಗೆ ಹೇಳಿದ ಉತ್ತರವು.

(೬) "ಶಿಶುವಿನಲ್ಲಿಯೂ ಬೆಳೆದ ಮನುಷ್ಯನಲ್ಲಿಯೂ ದೇಹ, ಮನಸ್ಸು ಮತ್ತು ಆತ್ಮ ಇವುಗಳ ಅತ್ಯುತ್ತಮವಾದ ಸ್ವರೂಪವು ಹೊರ

ಹೊಮ್ಮುವಂತೆ ಮಾಡುವುದೇ ಶಿಕ್ಷಣವು. ಸಾಕ್ಷರತೆಯು ಶಿಕ್ಷಣದ ಆದಿಯೂ ಅಲ್ಲ, ಅಂತ್ಯವೂ ಅಲ್ಲ. ಸ್ತ್ರೀಪುರುಷರು ಶಿಕ್ಷಣವನ್ನು ಪಡೆಯುವಂಥ ಸಾಧನಗಳಲ್ಲಿ ಅದು ಒಂದಾಗಿದೆ. ಶಿಕ್ಷಣದ ಪ್ರಾರಂಭ ವಾದಂದಿನಿಂದಲೇ ನಾನು ಮಗುವಿಗೆ ಒಂದು ಉಪಯುಕ್ತವಾದ ಕೈಗಾರಿಕೆಯನ್ನು ಕಲಿಸಿ, ವಸ್ತುಗಳ ಉತ್ಪಾದನೆಯನ್ನು ಮಾಡುವಂತೆ ಮಾಡಿ, ಆ ಮಗುವಿನ ಶಿಕ್ಷಣವನ್ನು ಪ್ರಾರಂಭಿಸುವೆನು. ಈ ಶಿಕ್ಷಣಪದ್ಧತಿ ಯಲ್ಲಿ ಮನಸ್ಸಿನ ಮತ್ತು ಆತ್ಮದ ಅತ್ಯುನ್ನತವಾದ ಬೆಳವಣಿಗೆಯು ಸಾಧ್ಯವಿದೆ. ಆದರೆ ಕೈಗಾರಿಕೆಯನ್ನು ಈಗಿನಂತೆ ಕೇವಲ ತಾಂತ್ರಿಕ ರೀತಿಯಿಂದ ಕಲಿಸದೆ ಶಾಸ್ತ್ರೋಕ್ತವಾಗಿ ಕಲಿಸತಕ್ಕದ್ದು." **ಮಹಾತ್ಮಾ ಗಾಂಧಿ**ಯವರ ಈ ಮಾತುಗಳಿಂದ ಭಾರತೀಯರ ಶೈಕ್ಷಣಿಕ ದೃಷ್ಟಿಯು ಯಾವುದೆಂಬ ಭಾಗವನ್ನು ಮುಗಿಸೋಣ.

ನಾವು ಇಲ್ಲಿ ವಿವರಿಸಿರುವ ಪಾಶ್ಚಾತ್ಯ ಮತ್ತು ಭಾರತೀಯ ವಿದ್ವಾಂಸರು ವಿವೇಚಿಸಿರುವ ಶಿಕ್ಷಣವೆಂದರೇನೆಂಬುದರ ವಿಚಾರವನ್ನು ಓದುವುದರಿಂದ ನಮಗೇನು ಗೊತ್ತಾಗುವುದು? ಪಾಶ್ಚಾತ್ಯರ ಅಭಿಪ್ರಾಯ ದಲ್ಲಿ ಶಿಕ್ಷಣವು ಆಧಿಭೌತಿಕ ವಿಕಾಸದತ್ತ ಒಲಿಯುತ್ತಿದ್ದರೆ, ಭಾರತೀಯರ ದೃಷ್ಟಿಯಲ್ಲಿ ಅದು ಆಧ್ಯಾತ್ಮಿಕ ಸಂಸ್ಕಾರಕ್ಕೆ ಹೆಚ್ಚು ಗೌರವವನ್ನು ಕೊಡುವುದು. ಮಾನವನ ಉನ್ನತಿಗೆ ಆಧ್ಯಾತ್ಮಿಕ, ಆಧಿಭೌತಿಕ, ಸಂಸ್ಕಾರ ಗಳೆರಡೂ ಬೇಕು. ಇವೆರಡರಲ್ಲಿ ಒಂದಿಲ್ಲದ ಇನ್ನೊಂದು ಒಗ್ಗಾಲಿಯ ರಥದಂತಾಗಬಹುದು. ಮೇಲಾಗಿ, ಫ್ರೊಬೆಲ್ ಮೊದಲಾದವರ ದೃಷ್ಟಿ ಯಲ್ಲಿ ಆಧ್ಯಾತ್ಮಿಕ ವಿಕಾಸಕ್ಕೆ ತುಂಬಾ ಆಸ್ಪದಕೊಟ್ಟಿರುವಂತೆ, ಕವಿವರ ರವೀಂದ್ರನಾಥ ಠಾಕೂರವರೂ, ಮಹಾತ್ಮಾಜಿಯವರೂ ತಮ್ಮ ಶೈಕ್ಷಣಿಕ ಧೋರಣೆಯಲ್ಲಿ ಆಧಿಭೌತಿಕ ಸಂಸ್ಕಾರ-ವಿಕಾಸಗಳಿಗೆ ತಕ್ಕ ಸ್ಥಾನವನ್ನು ಕೊಟ್ಟಿರುವರು. ಇವನ್ನೆಲ್ಲ ಪರಿಶೀಲಿಸಿ ನೋಡಿ 'ಶಿಕ್ಷಣವೆಂದರೇನು', ಎಂಬ ಪ್ರಶ್ನೆಗೆ ಯಾರಿಗೂ ವಿರೋಧವಾಗದ, ಎಲ್ಲರ ಅಭಿಪ್ರಾಯಗಳನ್ನು ಒಳಗೊಂಡಿರುವ, "ಮಾನವನಿಗೆ ಶಾರೀರಿಕ, ಮಾನಸಿಕ, ಆತ್ಮಿಕ ಸಂಸ್ಕಾರ ಗಳನ್ನು ಒದಗಿಸಿ ಅವನನ್ನು ಉನ್ನತ ಪಥಕ್ಕೆ ಒಯ್ಯುವುದೇ ಶಿಕ್ಷಣ."

ಎಂಬ ಸಾಮಾನ್ಯವಾದುದೊಂದು ಉತ್ತರವನ್ನು ಕಲ್ಪಿಸಬಹುದೆಂಬುದನ್ನು ಕಂಡುಕೊಳ್ಳಬಹುದು.

ಇದರಿಂದ ಶಿಕ್ಷಣದ ಉದ್ದೇಶ ಮತ್ತು ಆದರ ಸ್ವರೂಪಗಳು ತಾವೇ ವ್ಯಕ್ತವಾಗುವುವಷ್ಟೇ! ಕಟ್ಟಕಡೆಗೆ ಇನ್ನೊಂದು ಮಾತನ್ನು ಹೇಳಿದರೆ ಅದರ ವಿವೇಚನೆಯು ಸರಿಯಾಗಿ ಮುಗಿಯುವುದು. ಪ್ರಾರಂಭದಲ್ಲಿ ಒಂದು ಕಡೆಗೆ ಹೇಳಿದ ' ಓದು, ಬರೆಹ, ಗಣಿತ ಮುಂತಾದ ಹಲಕೆಲವು ವಿಷಯಗಳನ್ನು ಕಲಿಸುವುದೇ ಶಿಕ್ಷಣ', ವೆಂಬ ಅಭಿಪ್ರಾಯವು ನಮ್ಮವರಲ್ಲಿ ಹುಟ್ಟಲು ಕಾರಣವೇನು? ಸದ್ಯಕ್ಕೆ ನಮ್ಮಲ್ಲಿ ಪ್ರಚಲಿತವಾಗಿರುವ ಸಾಲೆಗಳಲ್ಲಿ ಈ ರೀತಿಯಾಗಿ ಹಲಕೆಲವು ವಿಷಯಗಳನ್ನು ವಿದ್ಯಾರ್ಥಿಗಳಿಗೆ ಕಲಿಸಿ, ಆ ವಿಷಯಗಳಲ್ಲಿಯೇ ಪರೀಕ್ಷೆಗಳನ್ನೂ ನಡೆಯಿಸಿ, ಕೆಲವೊಂದು ಶಿಕ್ಷಣವು ಪೂರ್ಣವಾಯಿತೆಂದು ತಿಳಿಯುವ ಪರಿಪಾಠವಿರುವುದೇ ಈ ಬಗೆಯ ತಪ್ಪು ಕಲ್ಪನೆಗೆ ಆಸ್ಪದ ಕೊಡಲು ಕಾರಣವಾಗಿದೆ. ಮಹಾತ್ಮಾಜಿಯವರು ಈ ವಿಚಾರವನ್ನು ಸಂಪೂರ್ಣವಾಗಿ ಖಂಡಿಸಿದ್ದಾರೆ. " ಸಾಕ್ಷರತೆಯು ಶಿಕ್ಷಣದ ಆದಿಯೂ ಅಲ್ಲ, ಅಂತ್ಯವೂ ಅಲ್ಲ. ಅದು ಶಿಕ್ಷಣವನ್ನು ಪಡೆಯುವ ಹಲವು ಸಾಧನಗಳಲ್ಲಿ ಒಂದು. " ಎಂಬ ಅವರ ಅಭಿಪ್ರಾಯವನ್ನು ನಾವು ಮರೆಯಲಾಗದು. ಅವರು ಮತ್ತೊಂದೆಡೆಯಲ್ಲಿ "ಸಾಕ್ಷರತೆಯು ಮಾನವನ ಶಿಕ್ಷಣದ, ಸಂಸ್ಕೃತಿಯ ಮಾರ್ಗವನ್ನು ಸಂಕುಚಿತ ಸ್ವರೂಪಕ್ಕೆ ಇಳಿಸಿ, ಸ್ವತಂತ್ರವಾಗಿ ವಿಚಾರಮಾಡುವ ಹುರುಪನ್ನು ಕುಗ್ಗಿಸಿ, ಅವನನ್ನು ಪರಾವಲಂಬಿಯನ್ನಾಗಿಮಾಡುವ ಭಯವೂ ಉಂಟು" ಎಂದು ಉಲ್ಲೇಖಿಸಿದ್ದಾರೆ. ಸಾಕ್ಷರತೆಯೆಂದರೆ ನಮ್ಮ ಸಾಲೆಗಳಲ್ಲಿ ಕಲಿಸುವ ಓದು, ಬರೆಹ ಮುಂತಾದ ಹಲಕೆಲವು ವಿಷಯಗಳಲ್ಲದೆ ಸಾಮಾನ್ಯಜ್ಞಾನವೆಂಬ ವ್ಯಾಪಕಾರ್ಥವನ್ನು ಮನಸ್ಸಿನಲ್ಲಿಟ್ಟುಕೊಂಡರೆ, ಮೇಲೆ ಹೇಳಿದ ತಪ್ಪಾದ ಕಲ್ಪನೆಯು ಹುಟ್ಟುವ ಕಾರಣವನ್ನು ಶೋಧಿಸುವ ಆವಶ್ಯಕತೆಯೇ ಉಳಿಯುವುದಿಲ್ಲ. ಮಹಾತ್ಮಾಜಿಯವರ ಹೇಳಿಕೆಯಂತೆ ಆ ವಿಷಯಗಳನ್ನು ಮಾನವನ ಶಾರೀರಿಕ, ಮಾನಸಿಕ, ಹಾಗೂ ಆಧ್ಯಾತ್ಮಿಕ ಸಂಸ್ಕಾರಕ್ಕೆ ಅನುಗುಣವಾದ ರೀತಿಯಲ್ಲಿ ಕಲಿಸುವುದರಿಂದ ಶಿಕ್ಷಣದ ಧ್ಯೇಯವು ಸರಿಯಾಗಿ ಈಡೇರಬಹುದೆಂಬ ವಿಚಾರವನ್ನು

ಜೋಡಿಸಿಕೊಂಡರೆ, ಈ ಶಾಲಾಶಿಕ್ಷಣದ ವಿಷಯಗಳು ಸಾಧನವೆಂದೂ ಮಾನವನ ಸರ್ವಾಂಗಸುಂದರವಾದ ವಿಕಾಸವು ಸಾಧ್ಯವೆಂದೂ ಭಾವಿಸಿ ಕೊಂಡು ಶಿಕ್ಷಕರು ತಮ್ಮ ಕಾರ್ಯವನ್ನು ಸಾಧಿಸಬೇಕೆಂದು ಹೇಳಿ ದಂತಾಗುವುದು. ಸಾಧ್ಯವನ್ನು ಮರೆತು ಸಾಧನಕ್ಕೇ ಮಹತ್ತ್ವವನ್ನು ಕೊಟ್ಟರೆ ನಮ್ಮ ಶಾಲಾಶಿಕ್ಷಣಕ್ಕೆ ಯೋಗ್ಯವಾದ ಬೆಲೆಯು ಬರಲಾರದು.

೧

# ಶಿಕ್ಷಣದ ಮಹತ್ತ್ವ ಮತ್ತು ಆವಶ್ಯಕತೆ.

ಮಾನವನಿಗೆ ಶಿಕ್ಷಣದ ಆವಶ್ಯಕತೆಯಿದೆಯೆ? ಅವನು ಬೇರೆ ಪ್ರಾಣಿಗಳಂತೆ ಶಿಕ್ಷಣವಿಲ್ಲದೆ ಸಹಜಸ್ವಭಾವದಿಂದ ಬಾಳಿ ಬದುಕಲಾರನೆ? ಹುಟ್ಟಿದಂದಿನಿಂದ ಸಾಯುವ ವರೆಗೂ ಶಿಕ್ಷಣದ ಮಡುವಿನಲ್ಲಿ ಈಸಬೇಕೇ? ಶಿಕ್ಷಣದ ಉಪಯೋಗವೇನು? ಅದರ ವೈಯುಕ್ತಿಕ, ಸಾಮಾಜಿಕ, ರಾಷ್ಟ್ರೀಯ ಮಹತ್ತ್ವವೆಷ್ಟು? ಅದರ ಆವಶ್ಯಕತೆಯು ನಮ್ಮ ಜೀವನದಲ್ಲಿ ಎಷ್ಟಿದೆ? ಎಂಬ ಪ್ರಶ್ನೆಗಳು ಶಿಕ್ಷಣದ ಹೆಸರನ್ನು ಎತ್ತಿದ ಕೂಡಲೆ ವಿಚಾರವಂತ ಮಾನವನ ಮನಸ್ಸಿನಲ್ಲಿ, ಮಿದುಳಿನಲ್ಲಿ, ಸುಳಿದಾಡುವುದು ಖಂಡಿತ. ಇಂತಹ ವಿಚಾರಗಳಿಗೆ ಸಾಧ್ಯವಿದ್ದಷ್ಟು ಸಮರ್ಪಕವಾದ ಉತ್ತರಗಳನ್ನು ಕೊಟ್ಟು ಶಿಕ್ಷಣದ ಮಹತ್ತ್ವವನ್ನೂ ಆವಶ್ಯಕತೆಯನ್ನೂ ತೋರಿಸುವುದೇ ಈ ಪ್ರಕರಣದ ಗುರಿ.

ಮಾನವನ ಜೀವನವನ್ನು ಒಳ್ಳೆಯ ಜಾತಿಯ ಗುಲಾಬದ ಅಂಟಿಗೆ ಹೋಲಿಸಬಹುದು. ಈ ಅಂಟು ಇತರ ಕಂಟಿಗಳಂತೆ, ಗಿಡಗಳಂತೆ ಬೇಕಾದಲ್ಲಿ ಬೆಳೆಯಲಾರದು. ಇದು ಬೆಳೆಯಬೇಕಾದರೆ ತಕ್ಕುದಾದ ಭೂಮಿಯು ಬೇಕು; ನೀರಿನ ಆಸರ ಬೇಕು; ಆಮೇಲೆ ಮನುಷ್ಯನ ಬೆಂಬಲ ಬೇಕು. ನಾವು ಪ್ರೀತಿಯಿಂದ, ಜೋಕೆಯಿಂದ ಈ ಅಂಟನ್ನು ಬೆಳಸಿದಷ್ಟು ಹೆಚ್ಚು ಮನೋಹರವಾದ ಹೂಗಳನ್ನು ಇದು ಕೊಡುವುದು. ಮುಂಜಾವದ ಎಳಬಿಸಿಲಲ್ಲಿ ಕುಲುಕುಲು ನಗುವ ಅಂದವಾದ ಹೂವನ್ನು ತಳೆದ ಈ ಅಂಟನ್ನು ನೋಡಿ ನಲಿಯದವರಾರು? ದೇವನ ಅಗಾಧಲೀಲೆಯನ್ನು ನೆನೆದು ಭಕ್ತಿಯಿಂದ ಆನಂದಾಶ್ರುಗಳನ್ನು ಸುರಿಯದವರಾರು? ಮನುಷ್ಯನ ಜೀವನವೂ ಹೀಗೆಯೆ. ಈಗಲೇ ಹುಟ್ಟಿದ ಕೂಸು ಅಜ್ಞಾನಿಯೆಂದು ತೋರಿದರೂ ಅದರ ಹೃದಯದಲ್ಲಿ ಅನಾದಿಕಾಲದಿಂದ ಬಂದ ತನ್ನ ದೇಶದ, ತನ್ನ ಜಾತಿಯ, ತನ್ನ ಮನೆತನದ ಮತ್ತು ತನ್ನ ತಂದೆ-ತಾಯ್ಗಳ

ಸಂಸ್ಕೃತಿಯು ಮನೆಮಾಡಿಕೊಂಡಿರುವುದು. ಆದುದರಿಂದ ಇಂತಹ ಕೂಸು ಬರಬರುತ್ತ ತನ್ನಲ್ಲಿ ಹುದುಗಿಕೊಂಡ ಸಂಸ್ಕೃತಿಯ ಮತ್ತು ಸುತ್ತುಮುತ್ತಲಿನ ಪರಿಸ್ಥಿತಿಯ ಲಾಭವನ್ನು ಪಡೆಯದೆ ಇರದು. ಹುಟ್ಟಿದ ಕೂಸು ಗುಲಾಬದ ಹೂವಿನಂತೆ ಆನಂದವನ್ನು ಬೀರುವ ಆತ್ಮವನ್ನು ತನ್ನ ಜೀವಮಾನದಲ್ಲಿ ವಿಕಾಸಗೊಳಿಸಬೇಕಾದರೆ ತಂದೆ–ತಾಯ್ಗಳು, ನಿಸರ್ಗ ದೇವಿಯು, ಗುರುಹಿರಿಯರು, ವಿದ್ಯಾಲಯಗಳು, ಸುತ್ತುಮುತ್ತಲಿನ ವಾತಾವರಣವು, ದೇವದತ್ತ ಬುದ್ಧಿಯು ಇವೆಲ್ಲವುಗಳೂ ಪೋಷಕ, ರಕ್ಷಕ, ಶಿಕ್ಷಕಗಳಾಗಿ ಸಾಹಾಯ್ಯವನ್ನು ನೀಡುವುವು. ಇವುಗಳ ನೆರವಿಲ್ಲದೆ ಮನುಷ್ಯನು ಶ್ರೇಷ್ಠಜೀವಿಯಾಗಿ ಬಾಳಲಾರನು. ಇವುಗಳನ್ನುಕಿತ್ತೊಗೆದು ಜೀವಿಸಬೇಕೆಂದು ಯತ್ನಿಸಿದರೆ ನೀರಿನಿಂದ ಹೊರಗೆ ಇರಿಸಿದ ಮೀನಿನಂತೆ ಇವನ ಗತಿಯಾಗುವುದು. ಆದುದರಿಂದ ಮಾನವನು ಶಿಕ್ಷಣದ ಬೆನ್ನುಬಿಡಬೇಕೆಂದು ಹಾತೊರೆದರೂ ಶಿಕ್ಷಣವು ಇವನನ್ನು ಹುಟ್ಟಿದಂದಿನಿಂದ ಸಾಯುವ ವರೆಗೂ ಬಿಡಲಾರದು. ಹೆಚ್ಚೇಕೆ ? ಮಾನವನ ಜೀವನವನ್ನು ಮೇಲಿನ ಮೆಟ್ಟಲಿಗೆ ಏರಿಸುವುದೇ ಶಿಕ್ಷಣವು ! ಅವನ ಸಂಸ್ಕೃತಿಯನ್ನೂ ಶೀಲವನ್ನೂ ನೈತಿಕಬಲವನ್ನೂ ಸಂವರ್ಧಿಸುವುದೇ ಶಿಕ್ಷಣವು !

ಪ್ರತಿಯೊಬ್ಬ ವ್ಯಕ್ತಿಯ ಜೀವನವು ಅರಳಿ ಸುಗಂಧವನ್ನು ಹೊರಸೂಸಬೇಕಾದರೆ ಶಿಕ್ಷಣವು ಅತ್ಯಾವಶ್ಯಕವು. ಜೀವಾಣುವು ಗರ್ಭಕೋಶದಲ್ಲಿ ಉದಯಿಸಿದಾಗಲೇ ಸಂಸ್ಕಾರವು ಪ್ರಾರಂಭಿಸುವುದು. ತಾಯಿಯ ಮನೋವಿಕಾರಗಳೆಲ್ಲವೂ ಈ ಎಳೆಯ ಜೀವನದ ಮೇಲೆ ಪರಿಣಾಮವನ್ನುಂಟು ಮಾಡುವುವು. ಅಂತೆಯೆ ಬಸುರಿದ್ದ ತಾಯಿಗೆ ಪ್ರಸನ್ನವಾದ, ಆನಂದಮಯವಾದ ವಾತಾವರಣವನ್ನು ಸುಶಿಕ್ಷಿತರಾದ ಹಿರಿಯರು ಕಲ್ಪಿಸಿಕೊಡುವರು. ಅವಳು ಉಣ್ಣುವ ಊಟ, ನೋಡುವ ನೋಟ, ಆಡುವ ನುಡಿ, ಕೇಳುವ ಮಾತು, ಇವೆಲ್ಲವುಗಳೂ ಬಹು ಪವಿತ್ರವಾಗಿದ್ದರೆ ಕೂಸಿನ ಆರೋಗ್ಯ, ಜೀವನ, ವಿಚಾರ ಮೊದಲಾದವುಗಳು ಮೇಲು ತರಗತಿಯವಾಗುವುವು. ಆದರೆ ಇಂತಹ ಶಿಕ್ಷಣವು ತಾಯಿಯಿಂದ ದೊರೆಯದಿದ್ದರೆ, ಗರ್ಭದಲ್ಲಿದ್ದ ಕೂಸು ತನ್ನ ಸಹಜಸ್ವಭಾವದಿಂದ ಶ್ರೇಷ್ಠ ಜೀವಿಯಾಗಲಾರದು. ತಂಗಿಯಾದ ಸುಭದ್ರೆಗೆ ಶ್ರೀಕೃಷ್ಣನು ಆಡಿದ

ಮಾತುಗಳೇ ಗರ್ಭದಲ್ಲಿದ್ದ ಅಭಿಮನ್ಯುವಿಗೆ ಚಕ್ರವ್ಯೂಹವನ್ನು ಭೇದಿಸುವ ರೀತಿಯನ್ನು ಹೇಳಿಕೊಟ್ಟು 'ವೀರಅಭಿಮನ್ಯು' ಎಂಬ ಹೆಸರನ್ನು ಗಳಿಸಿ ಕೊಟ್ಟುವೆಂದು ಪುರಾಣದಲ್ಲಿ ಬಂದ ಕತೆಯೂ ಈ ಮಾತಿಗೆ ಪೋಷಕ ವಾಗಿರುವುದು. ಹೀಗೆ ಮಾನವನ ಶಿಕ್ಷಣವು ತಾನು ಭೂಮಿಗೆ ಬರುವುದ ಕ್ಕಿಂತ ಮೊದಲೇ ಪ್ರಾರಂಭವಾಗುವುದು. ಮುಂದೆ ಎಳೆಯ ಮಗುವು ಆಟ, ನೋಟ, ಅನುಕರಣ, ಮತ್ತು ಆಸ್ಥೆಯುಳ್ಳ ಚಟುವಟಿಕೆಗಳು ಮುಂತಾ ದವುಗಳಿಂದ ಅನೇಕ ವಿಷಯಗಳ ಜ್ಞಾನವನ್ನು ಸಂಪಾದಿಸುವುದು; ನಡೆಯತೊಡಗುವುದು; ಮಾತನಾಡಲು ಮೊದಲುಮಾಡುವುದು. ಆರು ವರುಷಗಳಾದ ಕೂಡಲೆ ಈ ಕೂಸು ಸಾಲೆಯ ಮೆಟ್ಟಿಲುಗಳನ್ನು ಏರಿ ವಿದ್ಯಾರ್ಥಿಯಾಗುವುದು. ಹೀಗೆ ಮಹತ್ತರವಾದ ಈ ವಿದ್ಯಾರ್ಥಿಜೀವನ ವನ್ನು ಹಲವು ವರುಷಗಳ ವರೆಗೆ ಅನುಭವಿಸಿ ಪ್ರಾಪಂಚಿಕರಂಗದಲ್ಲಿ ಈ ಕೂಸು ಮಾನವನಾಗಿ ಇಳಿಯುವುದು. ವಿದ್ಯಾರ್ಥಿದೆಸೆಯಲ್ಲಿ ಹೊಂದುತ್ತಿರುವ ಶಿಕ್ಷಣವೇ ವೈಯುಕ್ತಿಕ ದೃಷ್ಟಿಯಿಂದ ಅತ್ಯಂತ ಮಹತ್ತ್ವವುಳ್ಳದ್ದು.

ವಿದ್ಯಾರ್ಥಿಯು ತನ್ನ ಮುಂದಣ ಜೀವನವನ್ನು ಸುಖಮಯವಾಗಿ ಸಾಗಿಸಲು ಬೇಕಾಗುವ ಸಾಧನೆಗಳನ್ನು ಈ ಸಮಯದಲ್ಲಿ ಪಡೆಯುವನು. ತಾನು ಮುಂದೆ ಕೈಕೊಳ್ಳಬೇಕಾದ ಉದ್ಯೋಗದ ಜ್ಞಾನವನ್ನು ಈ ಸಮಯದಲ್ಲಿ ಸಂಪಾದಿಸುವನು; ಬುದ್ಧಿಶಕ್ತಿಯನ್ನು ಬೆಳೆಯಿಸುವನು; ವಿಚಾರಶಕ್ತಿಯನ್ನು ಹದಗೊಳಿಸುವನು; ಜ್ಞಾನಭಾಂಡಾರವನ್ನು ವಿಸ್ತರಿಸುವನು; ಅದರ ಶಕ್ತಿಯನ್ನು ಸಂವರ್ಧಿಸುವನು; ಆರೋಗ್ಯವನ್ನು ಬಲಿಸುವನು; ರೀತಿ ನೀತಿಗಳನ್ನು ಕಲಿಯುವನು. ಹೀಗೆ ಅನೇಕ ವಿಧವಾಗಿ ತನ್ನ ಮುಂದಣ ಲೌಕಿಕಜೀವನಕ್ಕೆ ಬೇಕಾದ ಸಾಧನೆ ಸಲಕರಣೆಗಳನ್ನು ಈ ದೆಸೆಯಲ್ಲಿಯೆ ಕಲ್ಪಿಸಿಕೊಳ್ಳುವನು.

ಆದರೆ ವಿದ್ಯಾರ್ಥಿಯಲ್ಲಿ ನಾವು ನೋಡಬೇಕಾದ ಅತ್ಯಂತ ಮಹತ್ತ್ವದ ಬೆಳವಣಿಗೆ ಎಂದರೆ ಅವನ ಆಧ್ಯಾತ್ಮಿಕ ಜೀವನದ ಅರಳುವಿಕೆ. ಧನವನ್ನು ಸಂಪಾದಿಸಿದರೂ ಜ್ಞಾನವನ್ನು ದೊರಕಿಸಿದರೂ ಪರಿಶುದ್ಧವಾದ

ಮನಸ್ಸು, ಅದಕ್ಕೆ ಅನುಗುಣವಾದ ಆಚರಣೆ ಇವಿಲ್ಲದವನ ಬಾಳು ಜೀವ ವಿಲ್ಲದ ದೇಹದಂತೆ; ನೀತಿಯಿಲ್ಲದ ಮತಿಯಂತೆ. ಇಂತಹ ಶ್ರೇಷ್ಠವಾದ ಶುದ್ಧಮನಸ್ಸಿನ, ತದನುಸಾರವಾದ ಆಚರಣೆಯ ತಳಹದಿಯನ್ನು ಶಿಕ್ಷಣವು ಹಾಕಿಕೊಡುವುದು. ಶಾಲೆಯ ಪವಿತ್ರವಾದ ವಾತಾವರಣ, ಶಿಕ್ಷಕನ ಉಜ್ವಲವಾದ ಆಧ್ಯಾತ್ಮಿಕತೇಜ, ನಿಮಿಷ ನಿಮಿಷಕ್ಕೂ ಹೊಸದಾರಿ ಯನ್ನು ತೋರಿಸುವ, ಹೊಸ ಮಾತನ್ನು ಹೇಳಿಕೊಡುವ ಪಾಠಗಳು ವಿದ್ಯಾರ್ಥಿಯ ಕೋಮಲವಾದ, ನಿರ್ವಿಕಾರವಾದ ಮನಸ್ಸಿನ ಮೇಲೆ ಶಾಶ್ವತವಾದ ಪರಿಣಾಮವನ್ನುಂಟುಮಾಡುವುವು. ಪ್ರಪಂಚದ ಎಡರು ತೊಡರುಗಳನ್ನು ಲೆಕ್ಕಿಸದೆ ಕಷ್ಟಗಳ ಪರಂಪರೆಯಲ್ಲಿಯೂ ಶಾಂತಿಸೂಕ್ತ ವನ್ನು ಜಪಿಸುವ ಯೋಗ್ಯತೆಯನ್ನು, ಶಕ್ತಿಯನ್ನು ಕಲ್ಪಿಸಿಕೊಡುವುದೇ ಆಧ್ಯಾತ್ಮಿಕಜೀವನದ ಹಿರಿಯ ಗುರಿ. ಎಷ್ಟು ಎಡರುಗಳು ಬಂದರೂ ಸತ್ಯಕ್ಕಾಗಿ ಪ್ರಾಣಾರ್ಪಣೆಯನ್ನು ಮಾಡುವ ಪ್ರಭಾವಶಾಲಿಯಾದ ಜೀವನವನ್ನು ಸಿದ್ಧಪಡಿಸುವುದೇ ಸದಾಚಾರದ ತಿರುಳು. ಅಂತೆಯೆ ಕೌಸಲ್ಯೆಯು ರಾಮನಿಗೆ

'ಸಿರಿಯಿರಲಿ ಇರದಿರಲಿ
ಇರದು ಕೊರತೆಯು ಸ-
ಚ್ಚರಿತವು ಬಾಳಿನ
ತಿರುಳೈ, ರಾಮಾ'

(ಶ್ರೀ. ಸಾಲಿಯವರ ರಾಮಾಯಣ)

ಎಂದು ಉಪದೇಶಿಸಿ ಅವನನ್ನು ಆದರ್ಶಜೀವಿಯನ್ನಾಗಿ ಮಾಡಿದಳು. ಈ ದೆಸೆಯಲ್ಲಿ ಮೂಡಿದ ಭಾವನೆಗಳೇ ಮುಂದೆ ಬಲಿಯುವುವು; ಸಿದ್ಧವಾದ ಮನಸ್ಸೆ ಪರಿಪಕ್ವವಾಗುವುದು; ಇಟ್ಟುಕೊಂಡ ಗುರಿಯೇ ತನ್ನ ಸಂಸಾರ-ನೌಕೆಯ ಚುಕ್ಕಾಣಿಯಾಗುವುದು. ಆದುದರಿಂದ ಶಿಕ್ಷಣವು ಅತ್ತಿತ್ತ ಹೊಯ್ದಾಡುವ ವಿದ್ಯಾರ್ಥಿಯ ಸಹಜಪ್ರವೃತ್ತಿಗಳನ್ನು ಉದಾತ್ತ ವಿಚಾರ ಗಳ ಕಡೆಗೆ ಸಾವಧಾನವಾಗಿ ಹೊರಳಿಸಿ ಅವನ ಆಧ್ಯಾತ್ಮಿಕಜೀವನದ ಮಾರ್ಗದರ್ಶಕ ಜ್ಯೋತಿಯಾಗುವುದು.

ವಿದ್ಯಾರ್ಥಿಜೀವನದಲ್ಲಿ ಸಂಪಾದಿಸಿದ ಅನುಕೂಲತೆಗಳನ್ನು ಸರಿಯಾಗಿ ಉಪಯೋಗಿಸಬೇಕಾದರೆ, ಇಟ್ಟುಕೊಂಡ ಧ್ಯೇಯವನ್ನು ಕಾರ್ಯರೂಪದಲ್ಲಿ ತರಬೇಕಾದರೆ, ಒಂದು ಕಾರ್ಯಕ್ಷೇತ್ರದ ಆವಶ್ಯಕತೆ ಇದೆ. ಈ ಕಾರ್ಯರಂಗವೇ ತನ್ನ ಕುಟುಂಬ, ಸಮಾಜ, ದೇಶ; ಹೀಗೆ ಒಂದಕ್ಕಿಂತ ಇನ್ನೊಂದು ವಿಶಾಲತರವಾದ ಕಾರ್ಯಕ್ಷೇತ್ರಗಳುಂಟು. ಇವುಗಳಿಂದ ಮಾನವನು ಸಿಡಿದುಹೋಗಿ ತನ್ನ ಗುರಿಯನ್ನು ಸಾಧಿಸಲಾರನು. ತನ್ನ ಉದ್ಧಾರವನ್ನು ಮಾಡಿಕೊಳ್ಳಲಾರನು. ಈ ಮೂರರ ಜೊತೆಗೆ ತನ್ನ ಜೀವನವನ್ನು ಹೊಂದಿಸಿಕೊಂಡು ತಾನು ಶ್ರೇಷ್ಠಜೀವಿಯಾಗಿ ತನ್ನ ಕುಟುಂಬ, ಸಮಾಜ, ದೇಶ ಇವುಗಳನ್ನು ಉನ್ನತಾವಸ್ಥೆಯಲ್ಲಿರಿಸಬೇಕಾದರೆ, ಮಾನವನು ಪಡೆಯುವ ಶಿಕ್ಷಣವೆ ಮಿಗಿಲಾದ ಸಾಧನವು. ಆದುದರಿಂದ ಆತನು ಈ ಭೂಮಿಯಿಂದ ಮರೆಯಾಗುವ ವರೆಗೆ ಶಿಕ್ಷಣವು ಅವನ ಬೆನ್ನು ಬಿಡದು.

ಮೊತ್ತಮೊದಲು ಈ ಕಾರ್ಯಕ್ಷೇತ್ರವನ್ನು ಮರ್ಯಾದಿತವಾಗಿ ಇಟ್ಟುಕೊಳ್ಳಬೇಕಾಗುವುದು. ದೇಶಸೇವಕನಾಗಬೇಕಾದರೆ ಸಮಾಜ-ಸೇವಕನಾಗಬೇಕು; ಸಮಾಜಸೇವಕನಾಗುವ ಮೊದಲು ಕುಟುಂಬಸೇವಕನಾಗಬೇಕು; ನಿಃಸ್ವಾರ್ಥಿಯಾಗುವ ಮೊದಲು ಸತ್ತ್ವಸ್ವಾರ್ಥಿಯಾಗಬೇಕು. ಆದುದರಿಂದ ಕುಟುಂಬವೇ ಇವನ ಮೊದಲಿನ ಪ್ರಯೋಗಶಾಲೆಯಾಗುವುದು.

ವಿದ್ಯಾರ್ಥಿದೆಸೆಯಲ್ಲಿಟ್ಟುಕೊಂಡ ಧ್ಯೇಯವನ್ನೂ, ಕಲಿತ ತತ್ತ್ವಗಳನ್ನೂ ಆಚರಣೆಯಲ್ಲಿ ತರುವುದು ಕಠಿನವಾದುದು. ತಂದೆತಾಯ್ಗಳ ಸುಖಕ್ಕಾಗಿ, ಹೆಂಡಿರುಮಕ್ಕಳ ಸೌಕರ್ಯಕ್ಕಾಗಿ ತನ್ನ ಸ್ವಾರ್ಥವನ್ನು ಬದಿಗಿರಿಸಬೇಕಾಗುವುದು; ಕಷ್ಟವನ್ನು ಸಹಿಸಬೇಕಾಗುವುದು. ಅಣ್ಣತಮ್ಮಂದಿರ ಪ್ರೇಮಕ್ಕಾಗಿ ತನ್ನ ಅಭಿಪ್ರಾಯವನ್ನು ಬದಿಗಿರಿಸಿ ಅವರೊಡನೆ ಸಮರಸವಾಗಿ ವ್ಯವಹರಿಸಬೇಕಾಗುವುದು. ತನ್ನ ಕಟುಂಬದ ಮಾನಕ್ಕಾಗಿ ಅಭಿಮಾನದಿಂದ ಹೋರಾಡಬೇಕಾಗುವುದು. ಹಗಲಿರುಳೂ ಸಂಯಮವನ್ನು ಆಚರಿಸದಿದ್ದರೆ, ಮನಸ್ಸಿನ ಉದ್ವೇಗಗಳನ್ನು ಹತ್ತಿಕ್ಕದಿದ್ದರೆ,

ಮನೆಯಲ್ಲಿ ಅಶಾಂತತೆಯ ಮೊಳಕೆಯು ಅಂಕುರಿಸುವುದು; ದ್ವೇಷಾಗ್ನಿಯು ಉದ್ಭವಿಸುವುದು. ಹೀಗೆ ಕುಟುಂಬವನ್ನು ಸೌಖ್ಯದಿಂದ ಇರಿಸಬೇಕಾದರೆ, ತಾನು ಪಡೆದ ಶಿಕ್ಷಣವು ಆಪದ್ಬಂಧುವಾಗಿ ಸಾಹಾಯ್ಯಮಾಡುವುದು. ತನ್ನ ಧ್ಯೇಯದಿಂದ, ಆಚರಣೆಯಿಂದ ಚ್ಯುತವಾಗದಂತೆ ತನ್ನನ್ನು ಕಾಯ್ದುಕೊಳ್ಳಬೇಕಾದರೆ, ಸ್ಥಿರಸ್ಫೂರ್ತಿಯನ್ನು ಕೊಡುವ ಸಾಹಿತ್ಯವನ್ನು ಓದಬೇಕಾಗುವುದು. ಸಾಹಿತ್ಯದ ಮಾಧುರ್ಯವನ್ನು ಸವಿದು, ಆನಂದ ಹೊಂದಿ, ಅದರಿಂದ ನವಚೈತನ್ಯವನ್ನು ಸಂಪಾದಿಸಬೇಕಾದರೆ, ಶಿಕ್ಷಣ ವಿಲ್ಲದೆ ಸಾಧ್ಯವೇ? ಅಶಿಕ್ಷಿತನು ತಂದೆತಾಯ್ಗಳನ್ನು ಆದರಿಸದಿರಬಹುದು; ಅಣ್ಣತಮ್ಮಂದಿರನ್ನು ವೈರಿಗಳೆಂದು ಬಗೆಯಬಹುದು; ಅಕ್ಕತಂಗಿಯರನ್ನು ತನ್ನವರೆಂದು ಭಾವಿಸನು; ಹೆಂಡತಿಯನ್ನು ಶೃಂಗಾರದಾಟದ ಗೊಂಬೆಯೆಂದು ತಿಳಿಯುವನು. ಹೀಗೆ ತನ್ನ ಕುಟುಂಬದಲ್ಲಿಯ ವಾತಾವರಣವನ್ನು ಕೆಡಿಸಿಕೊಂಡು ಕುಟುಂಬದ ಮತ್ತು ತನ್ನ ಅವನತಿಯ ಹಾದಿಯನ್ನು ತಾನೇ ಸೃಷ್ಟಿಸಿಕೊಳ್ಳುವನು. ಮಾನವನು ತನ್ನ ಉನ್ನತಿಗಾಗಿ ಹಂಬಲಿಸುತ್ತಿದ್ದರೆ, ಮೊದಲು ತನ್ನ ಕುಟುಂಬದ ಉನ್ನತಿಗಾಗಿ ಪ್ರಯತ್ನಿಸಬೇಕು.

ಹೀಗೆ ಕುಟುಂಬಕ್ಕೂ ಮಾನವನಿಗೂ ನಿಕಟವಾದ ಸಂಬಂಧವಿದೆ. ಕುಟುಂಬದ ಉನ್ನತಿಗಾಗಿ ಇವನು ಪ್ರಯತ್ನಿಸಿದರೆ, ಇವನ ಉನ್ನತಿಗಾಗಿ ಕುಟುಂಬವು ಪ್ರಯತ್ನಿಸುವುದು; ಅನೇಕ ಪಾಠಗಳನ್ನು ಕಲಿಸುವುದು. ತಾನು, ತನ್ನದು ಎಂಬ ಅಭಿಮಾನವನ್ನು ಕುಟುಂಬವೇ ಹುಟ್ಟಿಸುವುದು. ತಂದೆತಾಯ್ಗಳು ಭಕ್ತಿಯೋಗವನ್ನು ಕಲಿಸುವ ಪುಣ್ಯಜೀವಿಗಳು. ಹೆಂಡಿರು-ಮಕ್ಕಳು ವಿಶ್ವಪ್ರೇಮವನ್ನು ಹೇಳಿಕೊಡುವ ನಿಸರ್ಗದತ್ತ ಶಿಕ್ಷಕರು. ಅಣ್ಣತಮ್ಮಂದಿರು, ಅಕ್ಕತಂಗಿಯರು ವಿಶ್ವಬಾಂಧವ್ಯವನ್ನು ಬೆಸೆಯುವ ಬಲವಾದ ಪ್ರೇಮಮೂರ್ತಿಗಳು. ಬಾಳುವೆಯ ಬೆನ್ನೆಲುವಾದ ಸ್ವಾಭಿಮಾನವನ್ನು ಬಿತ್ತುವುದೇ ಮನೆಯು ಸಮಾಜಸೇವಕನಲ್ಲಿ, ದೇಶಸೇವಕನಲ್ಲಿ ಇರಬೇಕಾದ ಗುಣಗಳನ್ನು ಕಲಿಸುವುದೇ ಕುಟುಂಬವು. ಕುಟುಂಬವನ್ನು ತನ್ನ ಗುರುವನ್ನಾಗಿ ಮಾಡಿಕೊಳ್ಳಲು ಪ್ರೇರಿಸುವುದೇ ಶಿಕ್ಷಣವು ಮಾಡುವ ಮಹತ್ತ್ವದ ಕಾರ್ಯ.

"ನಾನು ಸುಖಿಯಾಗಿರುವೆ. ನನ್ನ ಕುಟುಂಬವು ಪ್ರಗತಿಪಥದಲ್ಲಿದೆ. ನನ್ನ ಸಮಾಜದ ಗೊಡವೆ ನನಗೇಕೆ?" ಎಂದು ಯಾವ ಸುಶಿಕ್ಷಿತನೂ ಎನ್ನಲಾರನು. ಅಂಟುರೋಗದ ಪಿಡುಗು ಊರಿಗೇ ಬಂದಿರುವಾಗ ಅದು ಇನ್ನೂ ನನ್ನ ಮನೆಗೆ ಬಂದಿಲ್ಲವೆಂದು ಸುಮ್ಮನೆ ಇರುವುದು ಯೋಗ್ಯವೇ? ಸಮಾಜವು ಬಡತನದ ಬೇಗೆಯಲ್ಲಿ ಬೇಯುತಿರುವಾಗ, ಆ ಬೇಗೆಯು ನನ್ನನ್ನು ಸುಡಲಾರದು ಎಂದು ಗ್ರಹಿಸುವುದು ಯೋಗ್ಯವೇ? ಆದುದರಿಂದ, ಸಮಾಜದ ಸುಖದುಃಖಗಳ ಮೇಲೆಯೇ ತನ್ನ ಸುಖದುಃಖಗಳು ನಿಂತಿವೆಯೆಂದು ತಿಳಿದುಕೊಳ್ಳುವುದು ಅತ್ಯಾವಶ್ಯಕ. ಈ ಸಮಾಜ ಧರ್ಮವನ್ನು ಶಿಕ್ಷಣವು ಕಲಿಸುವುದು. ನಾಗರಿಕನ ಕರ್ತವ್ಯವೇನು? ಅವನು ಸಮಾಜಕ್ಕೆ ಸಲ್ಲಿಸಬೇಕಾದ ಸೇವೆಯಾವುದು? ಎಂಬುದರ ಜ್ಞಾನವನ್ನು ಶಿಕ್ಷಣವು ಮಾಡಿಕೊಡುವುದು. ತನ್ನ ದೇಶದ ಜೊತೆಗೆ ತನ್ನ ಸಮಾಜದ ಆರ್ಥಿಕ ಪರಿಸ್ಥಿತಿಯನ್ನು ಹೇಗೆ ಹೊಂದಿಸಿಕೊಳ್ಳಬೇಕೆಂಬುದನ್ನೂ ಶಿಕ್ಷಣವು ಕಲಿಸುವುದು. ಅನೇಕ ರಾಷ್ಟ್ರಗಳಲ್ಲಿ ನಡೆದ ಆಂದೋಲನ, ಸುಧಾರಣೆ ಮೊದಲಾದುವುಗಳ ಅರಿವನ್ನು ಶಿಕ್ಷಣವು ಮಾಡಿಕೊಡುವುದು.

ಸಮಾಜದಲ್ಲಿ ಆಗುವ ಅನ್ಯಾಯುಗಳನ್ನು ಎದುರಿಸಲು ಬೇಕಾಗುವ ನಿಃಸ್ವಾರ್ಥಿಯಾದ ವೀರನನ್ನು ಶಿಕ್ಷಣವು ಸಿದ್ಧಗೊಳಿಸುವುದು. ಜಾತಿಯ ಅಂಧ ವಿಚಾರಗಳನ್ನು ಸಮಾಜದಿಂದ ತಳ್ಳಲು ಬೇಕಾಗುವ ಧರ್ಮದ ಮೂಲತತ್ತ್ವಗಳನ್ನು ತಿಳಿದ ಸುಶಿಕ್ಷಿತರನ್ನು ಶಿಕ್ಷಣವು ಸಮಾಜಕ್ಕೆ ಒದಗಿಸಿಕೊಡುವುದು. 'ಲೋಕಲ್‌ಬೋರ್ಡ್, ' 'ಮ್ಯುನಸಿಪಾಲಿಟಿ,' ಮೊದಲಾದ ಸಂಘಸಂಸ್ಥೆಗಳ ಆಡಳಿತವನ್ನು ನೆರವೇರಿಸುವುದಕ್ಕಾಗಿ ಸಮಾಜ-ಸೇವೆಯನ್ನೇ ತಮ್ಮ ಗುರಿಯನ್ನಾಗಿಟ್ಟುಕೊಂಡ ಪವಿತ್ರ ಜೀವಿಗಳನ್ನು ಶಿಕ್ಷಣವು ಸಮಾಜಕ್ಕೆ ಅರ್ಪಿಸುವುದು. ತನ್ನ ಹಿತವನ್ನು ಬದಿಗಿರಿಸಿ ಸಮಾಜಹಿತಕ್ಕಾಗಿ ದುಡಿಯಬೇಕೆಂದು ಶಿಕ್ಷಣವು ಮಾನವನನ್ನು ಪ್ರಚೋದಿಸುವುದು. ಇಂತಹ ಉದಾತ್ತ ಭಾವನೆಯುಳ್ಳ ಸುಶಿಕ್ಷಿತರಿಂದ ಸಮಾಜವು ಸುಸಂಘಟಿತವಾಗುವುದು. ಇಂತಹ ಸಮಾಜದಲ್ಲಿಯೇ

ಪ್ರತಿವ್ಯಕ್ತಿಗೆ ತನ್ನ ಧ್ಯೇಯವನ್ನು ಸಾಧಿಸಲು ಸಾಧ್ಯವಾಗುವುದು; ತನ್ನ ಜೀವನವನ್ನು ಪ್ರಗತಿಪಥದಲ್ಲಿರಿಸಲು ಶಕ್ಯವಾಗುವುದು.

ಯಾವುದಾದರೊಂದು ದೇಶದ ಆಗುಹೋಗುಗಳು ಅಲ್ಲಿನ ಶಿಕ್ಷಣವನ್ನೇ ಸಾಮಾನ್ಯವಾಗಿ ಅವಲಂಬಿಸಿವೆ. ರಾಷ್ಟ್ರದ ಉನ್ನತಿಯ ಅಥವಾ ಅವನತಿಯ ಕಾರಣವು ಅಲ್ಲಿಯ ಶಿಕ್ಷಣದ ಗುರಿಯಲ್ಲಡಗಿದೆ. ರಾಷ್ಟ್ರದ ಭವಿತವ್ಯವು ಆ ರಾಷ್ಟ್ರವು ಕೊಡುತ್ತಿರುವ ಶಿಕ್ಷಣದ ದೀಕ್ಷೆಯ ಮೇಲೆ ನಿಂತಿದೆ. ಈಗ ಅತ್ಯಂತ ಪ್ರಭಾವಶಾಲಿ ರಾಷ್ಟ್ರಗಳಾದ ಇಂಗ್ಲಂಡ, ಜರ್ಮನಿ, ಅಮೇರಿಕಾ, ರಶಿಯಾ, ಜಪಾನ ಮೊದಲಾದುವುಗಳು ಶಿಕ್ಷಣದ ಸಾಹಾಯ್ಯದಿಂದಲೇ ಇಷ್ಟು ಮುಂದುವರಿದಿರುವುವು ಎಂದು ನಿರ್ವಿವಾದವಾಗಿ ಹೇಳಬಹುದು. ಎಲ್ಲ ರಾಷ್ಟ್ರಗಳ ಮುಖಂಡರು ತಮ್ಮ ರಾಜಕೀಯ ಧ್ಯೇಯದಂತೆ ಭಾವಿ-ರಾಷ್ಟ್ರವನ್ನು ನಿರ್ಮಾಣಮಾಡಬೇಕಾದರೆ ಶಿಕ್ಷಣದ ಸಾಹಾಯ್ಯವನ್ನೇ ಪಡೆದಿದ್ದಾರೆ; ಮತ್ತು ಪಡೆಯುತ್ತಲಿದ್ದಾರೆ; ಎಂದರೆ, ರಾಷ್ಟ್ರನಿರ್ಮಾಣವನ್ನು ಶಿಕ್ಷಣದ ಸಾಹಾಯ್ಯದಿಂದಲೇ ಮಾಡಿದ್ದಾರೆ; ಮಾಡುತಲಿದ್ದಾರೆ.

ಇಂಗ್ಲಂಡವು ಶಿಕ್ಷಣದ ಮೂಲಕವೇ ತನ್ನ ಮಕ್ಕಳಲ್ಲಿ ಸ್ವಾಭಿಮಾನವನ್ನು ಹುಟ್ಟಿಸಿತು; ನಾಗರಿಕನ ಕರ್ತವ್ಯವನ್ನು ಆಚರಣೆಯಲ್ಲಿ ತರಲು ಕಲಿಸಿತು. ಆ ಮೇಲೆ ಪ್ರಜಾಸತ್ತಾತ್ಮಕ ತತ್ತ್ವವೇ ಶ್ರೇಷ್ಠವೆಂಬ ಭಾವನೆಯು ಒಡಮೂಡಿತು. ಇಂತಹ ಅಮೂಲ್ಯತತ್ತ್ವಕ್ಕಾಗಿ ಪ್ರಾಣಾರ್ಪಣೆಯನ್ನು ಮಾಡುವ ವೀರಪುತ್ರರನ್ನು ಪಡೆಯಿತು. ಶಿಕ್ಷಣಕ್ರಮದಲ್ಲಿ ಅನೇಕ ಸುಧಾರಣೆಗಳನ್ನು ಮಾಡಿ ಈ ತತ್ತ್ವಕ್ಕೆ ಪರಿಪೋಷಕವಾಗುವಂತಹ ಶಿಕ್ಷಣವನ್ನು ಈಗಲೂ ಕೊಡುತ್ತಲಿದೆ. ಮಹಾಯುದ್ಧ (೧೯೧೪) ವಾದನಂತರ, ಅಜ್ಞಾತವಾಸದಲ್ಲಿದ್ದ ಜರ್ಮನಿಯು "ಜರ್ಮನಿಯೇ ಶ್ರೇಷ್ಠವಾದ ರಾಷ್ಟ್ರವು, ಅದರ ಸಂಸ್ಕೃತಿಯೇ ಅತ್ಯಂತ ಉಜ್ವಲವಾದುದು, ಜರ್ಮನರೇ ಮಿಗಿಲಾದ ಮಾನವರು" ಎಂಬ ಭಾವನೆಯನ್ನು ಮಕ್ಕಳಲ್ಲಿ ಬಿತ್ತಿತು. "ವೈಯಕ್ತಿಕ ಮಹತ್ತ್ವವನ್ನು ಬದಿಗಿರಿಸಿ ರಾಷ್ಟ್ರವೇ ನಮ್ಮ ಜೀವ" ಎಂಬ ಪಾಠವನ್ನು ಪ್ರತಿಯೊಬ್ಬನಿಗೂ

ಕಲಿಸಿತು. ತನ್ನ ನಾಡಿನ ಮುಂದಾಳಿನ ಆಜ್ಞೆಯನ್ನು ಎಷ್ಟು ಎಡರುಗಳು ಬಂದರೂ, ಪಾಲಿಸಲೇಬೇಕೆಂಬ ಪರಂಪರೆಯಿಂದ ಬಂದ ತತ್ತ್ವವನ್ನು ಪ್ರಚುರಗೊಳಿಸಿತು. ಹಗಲಿರುಳೂ ತನ್ನ ರಾಷ್ಟ್ರದ ಉನ್ನತಿಗಾಗಿ ದುಡಿಯಬೇಕೆಂಬ ಭಾವನೆಯು ಜನತೆಯ ಹೃದಯದಲ್ಲಿ ಚಿರಕಾಲ ಬೆಳಗುವಂತೆ ಉಳಿಯುವ ಕಾರ್ಯವನ್ನು ಶಿಕ್ಷಣದ ಸಾಹಾಯ್ಯದಿಂದ ಮಾಡಿತು. ಆ ಮೇಲೆ ಜರ್ಮನರು ತಮ್ಮ ರಾಷ್ಟ್ರವನ್ನು ಮುಂದೆ ತರಲು ಸ್ವಯಂಸ್ಫೂರ್ತಿಯಿಂದ ಕಾರ್ಯರಂಗಕ್ಕೆ ಇಳಿದು ದಿಗ್ದೇಶಗಳಲ್ಲಿ ತಮ್ಮ ನಾಡಿನ ಹೆಸರು ಕೇಳುವಂತೆ ಮಾಡಿದ್ದಾರೆ.

ಪಾಶ್ಚಾತ್ಯ ಶಿಕ್ಷಣಪದ್ಧತಿ, ಆಚಾರ-ವಿಚಾರ, ಇವುಗಳ ನೆರವಿನಿಂದ ತನ್ನ ಶಿಕ್ಷಣದ ಪದ್ಧತಿಯನ್ನು ಮಾರ್ಪಡಿಸಿಕೊಂಡಾಗಲೇ ಜಪಾನಕ್ಕೂ ಮುಂದುವರಿಯಲು ಸಾಧ್ಯವಾಯಿತು. ಇದರಂತೆಯೇ ೧೯೧೭ ರಲ್ಲಿ ಕ್ರಾಂತಿಯಿಂದ ಅಸ್ತವ್ಯಸ್ತವಾದ ರಶಿಯಾದೇಶವು ತಾನು ಸಾಮ್ಯವಾದಕ್ಕೆ ಅಂಟಿಕೊಂಡ ಹೊರತು ತನ್ನ ಏಳ್ಗೆಯಾಗಲಾರದೆಂದು ಬಗೆದು, ಆ ತತ್ತ್ವಕ್ಕೆ ಅನುಗುಣವಾಗುವಂತಹ ಶಿಕ್ಷಣಪದ್ಧತಿಯನ್ನು ಏರ್ಪಡಿಸಿ ಕೊಂಡು ಇಂದು ಜಗತ್ತಿನಲ್ಲಿಯೆ ಮಿಗಿಲಾದ ರಾಷ್ಟ್ರಗಳಲ್ಲೊಂದಾಗಿ ಪರಿಣಮಿಸಿದೆ. ಅಮೇರಿಕೆಯಲ್ಲಿಯ ಶಿಕ್ಷಣದ ಸ್ವರೂಪವು ಪ್ರಜಾಸತ್ತಾ-ತ್ಮಕ ತತ್ತ್ವಕ್ಕೆ ಪ್ರಾಶಸ್ತ್ಯವನ್ನು ಕೊಟ್ಟಿದೆ. ಪ್ರತಿಯೊಂದು ದೇಶದಲ್ಲಿ ರಾಜಕೀಯ ಮುಂದಾಳುಗಳು ಶಿಕ್ಷಣತಜ್ಞರ ಸಾಹಾಯ್ಯವನ್ನು ಪಡೆದು ತಮ್ಮ ಧ್ಯೇಯಗಳನ್ನು ಈಡೇರಿಸಿಕೊಳ್ಳುವರು.

ಇಂದು ಭಾರತಮಾತೆಯ ಅಭ್ಯುದಯವಾಗಬೇಕಾಗಿದ್ದರೆ, ಅವಳು ತನ್ನ ಗತವೈಭವವನ್ನು ಮರಳಿ ಪಡೆಯಬೇಕಾದರೆ, ತಾನು ಎಲ್ಲ ರಾಷ್ಟ್ರಗಳಿಗೂ ಮಾರ್ಗದರ್ಶಕ ರಾಷ್ಟ್ರವಾಗಬೇಕಾದರೆ, ಅವಳ ಸಂಸ್ಕೃತಿಗೆ ಅನುಗುಣವಾದ ಶಿಕ್ಷಣವೊಂದೇ ಬಲವಾದ ಸಾಧನವೆಂದು ಭಾರತ ಮಾತೆಯ ಶ್ರೇಷ್ಠರಾದ ಮಕ್ಕಳು ತಿಳಿದಿದ್ದಾರೆ; ಮತ್ತು ಆ ದಿಶೆಯಲ್ಲಿ ಕಾರ್ಯವನ್ನು ಕೈಕೊಂಡಿದ್ದಾರೆ. ವಿಶ್ವಭಾರತಿ (ಶಾಂತಿನಿಕೇತನ), ಗುರು-ಕುಲ, ಗುಜರಾತ ವಿದ್ಯಾಪೀಠ, ಕಾಶೀವಿದ್ಯಾಪೀಠ, ತಿಲಕಮಹಾರಾಷ್ಟ್ರ

ವಿದ್ಯಾಲಯ ಮೊದಲಾದ ಶಿಕ್ಷಣಸಂಸ್ಥೆಗಳನ್ನು ಸ್ಥಾಪಿಸಿದ್ದಾರೆ. 'ವರ್ಧಾ-ಯೋಜನೆ' ಎಂಬ ಶಿಕ್ಷಣ ಪದ್ಧತಿಯನ್ನು ಏರ್ಪಡಿಸಿದ್ದಾರೆ. ಈ ಪದ್ಧತಿಯಿಂದಲೇ ಪ್ರತಿಯೊಬ್ಬ ಭಾರತೀಯನು ಸ್ವಾವಲಂಬಿಯಾಗುವನು ಮತ್ತು ನಿರುದ್ಯೋಗದ ಸಮಸ್ಯೆಯನ್ನು ಬಿಡಿಸಲು ಸಮರ್ಥನಾಗುವನು. ದೇಶವು ರಾಜಕೀಯ ಮತ್ತು ಆರ್ಥಿಕ ದುಃಸ್ಥಿತಿಯಿಂದ ಸುಧಾರಿಸಬೇಕಾದರೆ, ಈ ಪದ್ಧತಿಯನ್ನೇ ಅನುಸರಿಸಬೇಕೆಂದು ವಿದ್ವಜ್ಜನರ ಅಭಿಪ್ರಾಯ. ಬಲ್ಲಿದರು ಇನ್ನೂ ಅನೇಕ ಸುಧಾರಣೆಗಳನ್ನು ಇಂದಿನ ಶಿಕ್ಷಣಪದ್ಧತಿಯಲ್ಲಿ ಮಾಡುತಲಿದ್ದಾರೆ.

ಈ ಮೇರೆಗೆ ಶಿಕ್ಷಣವು ರಾಷ್ಟ್ರದ ಜೀವಾಳವಾಗಿರಲು, ಸುಶಿಕ್ಷಣವಿಲ್ಲದೆ ಯಾವ ರಾಷ್ಟ್ರವೂ ಮುಂದುವರಿಯಲಾರದು; ತನ್ನ ಸಂಸ್ಕೃತಿಯನ್ನು ಬೆಳೆಯಿಸಲಾರದು; ಶಾಂತಿ ಸುಖಗಳನ್ನು ಪಡೆಯಲಾರದು.

ತನ್ನ ನಾಡಿನ ಬಗೆಗೆ ಅತ್ಯಂತ ಉಜ್ವಲವಾದ ಅಭಿಮಾನವನ್ನು ಹುಟ್ಟಿಸಿ ತನ್ನ ರಾಷ್ಟ್ರದ ಉದ್ಧಾರಕ್ಕಾಗಿ, ವಿಶ್ವಶಾಂತಿಗಾಗಿ, ಪ್ರಾಣಾ-ರ್ಪಣೆಯನ್ನು ಮಾಡುವ ನಿಃಸ್ವಾರ್ಥವೀರರನ್ನು ಜನತೆಗೆ ಅರ್ಪಿಸುವುದೇ ಶಿಕ್ಷಣದ ಪವಿತ್ರವಾದ ಗುರಿಯಾಗಿರಬೇಕು; ಅಂತಿಮಧ್ಯೇಯವಾಗಿರಬೇಕು. ಇಂತಹ ಪವಿತ್ರ ಗುರಿಯು ತಪ್ಪಿತೆಂದರೆ, ಶಿಕ್ಷಣದಿಂದ ಪ್ರಜ್ವಲಿಸಿದ ರಾಷ್ಟ್ರಾಭಿಮಾನವು ಅನ್ಯ ರಾಷ್ಟ್ರಗಳನ್ನು ದ್ವೇಷಿಸುವುದರಲ್ಲಿ ಪರಿಣಮಿಸುವುದು; ಪರದೇಶದ ಜನರನ್ನು ಈರ್ಷ್ಯೆಯಿಂದ ಕೊಲ್ಲಲು ಕಾರಣವಾಗುವುದು. ಹೀಗೆ ಯುದ್ಧವು ಶಿಕ್ಷಣದ ತಪ್ಪುದಾರಿಯ ಪ್ರತಿ-ಫಲವೆಂದು ತೋರದಿರದು.

“ನನ್ನನ್ನು ಸೇರದವರೆಲ್ಲರೂ ನನ್ನ ವೈರಿಗಳು. ನನ್ನ ಸ್ವಾತಂತ್ರ್ಯಕ್ಕಾಗಿ, ಸುಖಕ್ಕಾಗಿ, ಅನ್ಯರಾಷ್ಟ್ರಗಳು ಮಣ್ಣುಪಾಲಾದರೂ ಚಿಂತೆಯಿಲ್ಲ, ನನ್ನ ಸಂಸ್ಕೃತಿಯೆ ಮೇಲು; ಉಳಿದವರ ಸಂಸ್ಕೃತಿಗಳು ಕೀಳು” ಎಂಬ ಗುರಿಗೆಟ್ಟ ತತ್ತ್ವಗಳನ್ನು ಜರ್ಮನಿಯಲ್ಲಿ ಶಿಕ್ಷಣದ ಮೂಲಕವಾಗಿ ಬಿತ್ತಿದುದರಿಂದಲೇ ೧೯೩೯ ರಲ್ಲಿ ಎರಡನೆಯ ಜಾಗತಿಕ ಮಹಾಯುದ್ಧವು ಪ್ರಾರಂಭಿಸಿತು.

ಇಂತಹ ಭೀಕರ ಯುದ್ಧಗಳು ಮಾನವನನ್ನು ಪಶುಗಳಿಗಿಂತ ಕೀಳು ಮಟ್ಟಕ್ಕೆ ಇಳಿಸಿವೆ; ಅನೇಕ ಶತಮಾನಗಳ ವರೆಗೆ ಸಂಗ್ರಹಿಸಿದ ಸಂಸ್ಕೃತಿಗಳನ್ನು ಮಣ್ಣುಪಾಲು ಮಾಡಿವೆ; ರಾಷ್ಟ್ರರಾಷ್ಟ್ರಗಳಲ್ಲಿ ದ್ವೇಷಾಗ್ನಿಯನ್ನು ಹರಡಿವೆ; ವಿಶ್ವಬಾಂಧವ್ಯ, ಸತ್ಯ, ಪರೋಪಕಾರ ಮೊದಲಾದ ಉದಾತ್ತ ತತ್ತ್ವಗಳು ಜಗತ್ತಿನಲ್ಲಿ ಉಳಿಯದಂತೆ ಮಾಡಿವೆ. ಒಂದು ಮಹಾಯುದ್ಧವು ಮತ್ತೊಂದು ಅತಿ ಮಹಾಯುದ್ಧದ ಬೀಜವನ್ನು ಬಿತ್ತ ತೊಡಗಿದೆ. ಇಂತಹ ಯುದ್ಧಗಳು ನಡೆಯುವ ವರೆಗೆ ಮಾನವನು ಸುಸಂಸ್ಕೃತ ಮಾನವನಾಗಿ ಜೀವಿಸಲಾರನು.

ಈ ತರದ ಯುದ್ಧಗಳನ್ನು ತಡೆಹಿಡಿಯಬೇಕಾದರೆ, ಪ್ರತಿಯೊಂದು ರಾಷ್ಟ್ರವು ತಾನು ಕೊಡುತ್ತಿರುವ ಶಿಕ್ಷಣದ ಗುರಿಯನ್ನು ಸರಿಪಡಿಸಿಕೊಳ್ಳದೆ ಗತ್ಯಂತರವಿಲ್ಲ. ಏಕಧರ್ಮದವರಿರುವೆವೆಂಬ ಭಾವನೆಯು ಜಗತ್ತಿನ ಜನಾಂಗಗಳಲ್ಲಿ ಐಕ್ಯವನ್ನುಂಟುಮಾಡಲು ಸಹಾಯವಾಗಿಲ್ಲ; ಒಂದು ರಾಜಕೀಯ ಅಥವಾ ಆರ್ಥಿಕ ತತ್ತ್ವಕ್ಕೆ ಅಥವಾ ತಾತ್ಕಾಲಿಕ ಸಾಮಾನ್ಯ ಹೇತುವಿಗೆ ಅಂಟಿಕೊಂಡಿರುವೆವೆಂಬ ವಿಚಾರವೂ ಒಕ್ಕಟ್ಟನ್ನು ವೃದ್ಧಿಗೊಳಿಸಲು ಸಾಧನವಾಗಿಲ್ಲ. ಇಂತಹ ವಿಚಾರಗಳಿಗೆ, ಭಾವನೆಗಳಿಗೆ ಸಾಧ್ಯವಾಗದ ಐಕ್ಯವು ಸುಶಿಕ್ಷಣದ ಪ್ರಭಾವದಿಂದ ಸಾಧ್ಯವಾಗಬಲ್ಲುದು. ವಿಶ್ವಬಾಂಧವ್ಯ, ವಿಶ್ವಪ್ರೇಮ, ಪರಧರ್ಮಸಹಿಷ್ಣುತೆ, ಮೊದಲಾದ ಉದಾತ್ತಧ್ಯೇಯಗಳನ್ನೊಳಗೊಂಡ ಶಿಕ್ಷಣದ ನೆರವಿನಿಂದ ಜಗತ್ತಿನ ಸರ್ವತೋಮುಖವಾದ ಉನ್ನತಿಯಾಗುವುದು. ಸುಶಿಕ್ಷಣದಲ್ಲಿ ನಿರ್ಮಾಣಶಕ್ತಿಯಿದೆ; ಆದರೆ ಗುರಿತಪ್ಪಿದರೆ, ಪರಿಣಾಮವು ವಿಪರೀತವಾಗುವುದು. ಶಿಕ್ಷಣದ ನಿರ್ಮಾಪಕ ಶಕ್ತಿಯಿಂದ ಸರ್ವ ಮಾನವರ ಹಿತವನ್ನು ಸಾಧಿಸುವುದೇ ಸುಸಂಸ್ಕೃತ ಮಾನವನ ಲಕ್ಷಣವಲ್ಲವೇ?

ಹೀಗೆ ವ್ಯಕ್ತಿಯ ಅಭ್ಯುದಯಕ್ಕಾಗಲಿ, ಸಮಾಜದ ಉನ್ನತಿಗಾಗಲಿ, ರಾಷ್ಟ್ರದ ಏಳ್ಗೆಗಾಗಲಿ, ಶಿಕ್ಷಣವು ಅತ್ಯಾವಶ್ಯಕವು. ಇದು ಜನತೆಯ ಪ್ರಾಣ. ಇದರ ನೆರವಿಲ್ಲದೆ ಮಾನವನು ಶ್ರೇಷ್ಠಜೀವಿಯಾಗಿ ಬಾಳನು. ಇಂತಹ ಶಿಕ್ಷಣದ ನೆರವಿನಿಂದ ಪ್ರತಿವ್ಯಕ್ತಿಯ ಜೀವನವು ಅರಳುವುದು.

ಕುಟುಂಬದಲ್ಲಿ ತಂದೆತಾಯ್ಗಗಳ, ಅಣ್ಣತಮ್ಮಂದಿರ ಬಾಂಧವ್ಯವು ಬೆಳೆದು ಕೌಟುಂಬಿಕ ಕಲಹಗಳು ಮಾಯವಾಗುವುವು; ಸಮಾಜದಲ್ಲಿಯ ಜಾತಿಪಂಥಗಳ ಬಡಿದಾಟ, ಧರ್ಮಾಧರ್ಮಗಳ ತಿಕ್ಕಾಟ, ಮೇಲುಕೀಳೆಂಬ ಸಂಕುಚಿತ ಭಾವನೆಗಳು ಇಲ್ಲವಾಗಿ ಪ್ರತಿಯೊಂದು ಸಮಾಜವು ತಾನು ರಾಷ್ಟ್ರದ ಒಂದು ಅಂಗವೆಂದು ತಿಳಿದು ರಾಷ್ಟ್ರದ ಉನ್ನತಿಗಾಗಿ ಪ್ರಯತ್ನಿಸತೊಡಗುವುದು; ಪ್ರತಿಯೊಂದು ರಾಷ್ಟ್ರವು ವಿಶ್ವದ ಅಂಗವೆಂದು ತಿಳಿದು ತನ್ನ ಅಭ್ಯುದಯದೊಡನೆ ವಿಶ್ವದ ಅಭ್ಯುದಯಕ್ಕಾಗಿ ಹೆಣಗಾಡುವುದು. ಆದುದರಿಂದ ಶಿಕ್ಷಣದ ಸಾಹಾಯ್ಯದಿಂದಲೇ ಎಲ್ಲೆಡೆಗಳಲ್ಲಿಯೂ ಶಾಂತಿ, ಸುಖ, ಸಂಪತ್ತುಗಳ ಸುಗ್ಗಿಯು ನೆಲೆಗೊಳ್ಳುವುದು. ಇಂತಹ ಸುಗ್ಗಿಯ ಸವಿಯನ್ನು ಸೇವಿಸುವ ಸೌಭಾಗ್ಯವನ್ನು ಪರಮಾತ್ಮನು ಬೇಗನೆ ಮಾನವರಿಗೆ ಒದಗಿಸಿಕೊಡಲಿ! ಶಿಕ್ಷಣದ ಉದಾತ್ತವಾದ ತತ್ತ್ವಗಳನ್ನು ಅರಿತು ಆಚರಿಸಲು ತನ್ನ ಮಕ್ಕಳನ್ನು ಪ್ರೇರಿಸಲಿ!

# ೩
# ಶಿಕ್ಷಣದ ಪ್ರಕಾರಗಳು
## ೧. ಶಾರೀರಿಕ ಶಿಕ್ಷಣ

**ಶಾರೀರಿಕ ಶಿಕ್ಷಣದ** ಮಹತ್ತ್ವವನ್ನು ವಿಶದವಾಗಿ ಹೇಳುವ ಆವಶ್ಯಕತೆಯಿಲ್ಲ. ಶಾರೀರಿಕ ಶಿಕ್ಷಣಕ್ಕೆ ತಕ್ಕ ಗಮನವನ್ನು ಕೊಡುತ್ತಿರುವ ದೇಶಗಳೇ ತಮ್ಮ ಸ್ವಾತಂತ್ರ್ಯವನ್ನು ಕಾಯ್ದುಕೊಂಡು ಸ್ವಾಭಿಮಾನ ವನ್ನು ರಕ್ಷಿಸಿಕೊಳ್ಳಬಲ್ಲವು. ರಾಷ್ಟ್ರದ ಆಟಪಾಟಗಳೇ ಆಯಾ ರಾಷ್ಟ್ರದ ಸತ್ತ್ವವನ್ನೂ ಶೀಲಬಲಗಳನ್ನೂ ಸೂಚಿಸುವ ಸಂಕೇತಗಳೆಂದರೆ ಅತಿಶಯೋಕ್ತಿಯಾಗಲಾರದು. ಇತಿಹಾಸದಲ್ಲಿಯ ಉದಾಹರಣೆಗಳಿಂದ ನೋಡಲಾಗಿ ಚಿಕ್ಕಪುಟ್ಟ ನಾಡುಗಳಾದ ಗ್ರೀಸ್, ಸ್ವಿಜರಲಂಡ್, ಮುಂತಾದುವು ದೃಢಕಾಯದ ಯುವಕ-ಯುವತಿಯರಿಗೆ ಶಾರೀರಿಕ ಶಿಕ್ಷಣವನ್ನು ಕೊಟ್ಟು, ಅವರನ್ನು ಪ್ರೋತ್ಸಾಹಿಸಿ, ಬಲಾಢ್ಯ ರಾಷ್ಟ್ರಗಳ ಅಭಿಯೋಗವನ್ನು ನಿರರ್ಥಕಗೊಳಿಸಿ ತಮ್ಮ ಉಜ್ವಲ ರಾಷ್ಟ್ರಾಭಿಮಾನ ವನ್ನು ತೋರಿಸಿವೆ. ಶಾರೀರಿಕ ಶಿಕ್ಷಣದಿಂದ ಸಂಯಮವನ್ನು ಸಾಧಿಸಿ ಕೊಳ್ಳದೆ ಬಹುವೇಗದಿಂದ ಸಂಪತ್ತನ್ನು ಸಂಪಾದಿಸಿ ವಿಷಯಸುಖದಲ್ಲಿ ಮುಳುಗಿದ ರಾಷ್ಟ್ರಗಳು ಒಂದೊಂದಾಗಿ ರಸಾತಲವನ್ನು ಸೇರಿದುವೆಂಬ ಸಂಗತಿಯನ್ನು ನಾವು ಮರೆಯಕೂಡದು. ಸುವ್ಯವಸ್ಥಿತವಾದ ವ್ಯಕ್ತಿಗಳ ಆರೋಗ್ಯಬಲವಿಲ್ಲದೆ ಯಾವ ರಾಷ್ಟ್ರವೂ ಮುಂದೆ ಬರಲಾರದು. 'ಕಾಯಕವೇ ಕೈಲಾಸ, ರೋಗವೇ ಮರಣ' ಎಂದು ಭಾವಿಸುವ, ಉದಾತ್ತಧ್ಯೇಯಗಳಲ್ಲಿಯೂ ಕಾರ್ಯಗಳಲ್ಲಿಯೂ ಆಶಾಭರಿತರಾಗಿ ಜೀವನಸಂಗ್ರಾಮದಲ್ಲಿ ಧುಮುಕಬೇಕೆನ್ನುವ, ಆದರ್ಶವನ್ನು ಯಾವಾ ಗಲೂ ಮುಂದಿರಿಸಿಕೊಂಡು ತತ್ತರಿಸಿ ವಿಫಲಗೊಳ್ಳುವ ಎಷ್ಟೋ ಮಹಾನುಭಾವರನ್ನು ನಾವು ದಿನಾಲು ನೋಡುತ್ತೇವೆ. ಅವರ ಆಶಾಭಂಗಕ್ಕೆ ಮೂಲ ಕಾರಣವೆಂದರೆ ಶಾರೀರಿಕ ಸಾಮರ್ಥ್ಯದ

ಅಭಾವ; ದಣಿವು, ಚಿಂತೆ, ನಿರಾಶೆಗಳನ್ನು ತುಚ್ಛೀಕರಿಸಲು ಅವಶ್ಯವಿದ್ದ ಕಷ್ಟಸಹಿಷ್ಣುತೆಯ ಅಭಾವ; ಆಸ್ಥೆ-ಆಕಾಂಕ್ಷೆ, ಔತ್ಸುಕ್ಯವುಳ್ಳವರೂ ತಮ್ಮ ಆರೋಗ್ಯವು ಯಾವಾಗ ಕುಸಿದುಬೀಳುವುದೋ ಎಂಬ ಭಯದಿಂದಲೇ ತಮ್ಮ ಉದ್ಯೋಗವನ್ನು ಸಾಗಿಸುತ್ತಿರುವರು. ಅವರು ಮಾನಸಿಕ ಸಾಮರ್ಥ್ಯವನ್ನು ಬೆಳೆಯಿಸುವಾಗಲೇ ನಿತ್ಯವೂ ನಿಯಮಿತ ವೇಳೆಯಲ್ಲಿ ವ್ಯವಸ್ಥಿತರೀತಿಯಿಂದ ಶರೀರವ್ಯಾಯಾಮವನ್ನು ಕೈಕೊಂಡಿದ್ದರೆ ಈ ದುಃಸ್ಥಿತಿಗೆ ಎಂದೂ ಈಡಾಗುತ್ತಿದ್ದಿಲ್ಲ. ವ್ಯಾಯಾಮದ ಅಭಾವದಿಂದ ಹಸಿವು ಅಡಗಿ, ಶಕ್ತಿಯು ಕುಂದಿ, ನೈಸರ್ಗಿಕ ಉತ್ಸಾಹಶಕ್ತಿಯಾದ ನಿದ್ರೆಯು ನಾಶವಾಗಿ ಪ್ರಕೃತಿಯು ಕೆಟ್ಟುಹೋಗುವುದು. ಕಾಯಕವನ್ನು ಚೆನ್ನಾಗಿ ಮಾಡಬೇಕಾದರೆ ಸಾಮಾನ್ಯವಾಗಿ ಬಲಕಟ್ಟುಳ್ಳ ದೇಹವು ಅವಶ್ಯವಾದುದು. ಪಂಡಿತಶ್ರೇಷ್ಠನಿಗೂ ಯಶಸ್ಸನ್ನು ಸಂಪಾದಿಸಬೇಕಾದರೆ ಸುಸಂಘಟಿತ ದೇಹವಿಲ್ಲದಿದ್ದರೆ ಗತ್ಯಂತರವಿಲ್ಲ. "ನಮಗೆ ಕೇವಲ ಪುಸ್ತಕಗಳಲ್ಲಿ ತಲ್ಲೀನನಾದ ಕೋಣೆಯಶಂಕರನು ಬೇಡ, ರಾಗದ ಪೆಟ್ಟಿಗೆಯಂತಿದ್ದ ಗಾಯಕನೂ ಬೇಡ, ಕೇವಲ ಕಸರತ್ತುಗಳನ್ನು ಮಾಡುವ ಜಟ್ಟಿಯೂ ಬೇಡ." ಸ್ವತಂತ್ರವಾಗಿ ಇಟ್ಟುಕೊಂಡ ಕೇವಲ ಮಾನಸಿಕ ಸಂಸ್ಕೃತಿಯಾಗಲಿ, ಕೇವಲ ದೈಹಿಕ ಸಂಸ್ಕೃತಿಯಾಗಲಿ, ನಮಗೆ ಇಷ್ಟವಿಲ್ಲ. ದೇಹ ಮತ್ತು ಮನಸ್ಸು ಇವೆರಡೂ ಪರಸ್ಪರ ಸಹಾಯಕವಾದ ಎರಡು ಭಾಗಗಳಂತಿದ್ದು, ಅವೆರಡರ ಯೋಗಕ್ಷೇಮವನ್ನು ನಾವು ಆಸ್ಥೆಯಿಂದಲೂ ಜಾಗರೂಕತೆಯಿಂದಲೂ ಕೈಕೊಳ್ಳುವಂತಿರಬೇಕು. ನಮಗೆ ದೈಹಿಕಬಲವೂ ಬೇಕು, ನೈತಿಕಧೈರ್ಯವೂ ಬೇಕು, ಧಾರ್ಮಿಕ ಆಸ್ಥೆವೂ ಬೇಕು. ಇವುಗಳ ಸಮತೋಲವುಳ್ಳ ಶಿಕ್ಷಣದಿಂದಲೇ ಮಾನವನು ಸಂಪೂರ್ಣ ವಿಕಸಿತನಾಗುವನು, ಸುಸಂಸ್ಕೃತಿಯ ಸುಂದರ ಮೂರ್ತಿಯಾಗುವನು.

ಸದ್ಯದ ಸುಧಾರಣೆಯ ಕಾಲದಲ್ಲಿ ದಿನದಿನಕ್ಕೆ ಜನರಲ್ಲಿ ವಿದ್ಯಾಭ್ಯಾಸದ ರುಚಿಯು ಹೆಚ್ಚುತ್ತ ನಡೆದಿದೆ. ಅವರು ಹೆಚ್ಚಿನ ಮಾನಸಿಕ ಶ್ರಮಕ್ಕೆ ಒಳಗಾಗುತ್ತಿದ್ದಾರೆ. ಇದಲ್ಲದೆ ಸಾಮಾಜಿಕವಾದ ಎಡರು ತೊಡರುಗಳೂ ಮನುಷ್ಯನ ಬೆಳವಣಿಗೆಯನ್ನು ಕುಗ್ಗಿಸುತ್ತಿವೆ. ಇವುಗಳ

ಕಡೆಗೆ ಗಮನಕೊಟ್ಟು ನೋಡಿದರೆ ಚಿಕ್ಕ ಬಾಲಕರಿಗೂ ತರುಣರಿಗೂ ಶಾರೀರಿಕಶಿಕ್ಷಣವು ಅತ್ಯಾವಶ್ಯಕವೆಂದು ಎನಿಸುವುದು. ಶಾರೀರಿಕ ಶಿಕ್ಷಣದಿಂದಲೇ ಶರೀರವೂ ಮನಸ್ಸೂ ತಕ್ಕ ಬೆಳವಣಿಗೆಯನ್ನು ಪಡೆದು ಆರೋಗ್ಯವುಳ್ಳವುಗಳಾಗುವುವು ಎಂಬುದರಲ್ಲಿ ಸಂದೇಹವಿಲ್ಲ. ಇದಲ್ಲದೆ ಸುಸಂಘಟಿತ ದೇಹವು '**शरीरमाद्यं खलु धर्म साधनं**' ಎಂಬ ಉಕ್ತಿಯಂತೆ ಧಾರ್ಮಿಕ ಜಾಗೃತಿಗೂ ಪ್ರಗತಿಗೂ ಸಹಾಯವಾಗುವುದು.

ಸದ್ಯದ ಶಿಕ್ಷಣಕ್ರಮದಲ್ಲಿ ಶಾರೀರಿಕ ಶಿಕ್ಷಣಕ್ಕೆ ಯಾವ ಸ್ಥಾನ-ಮಾನಗಳು ಇವೆಯೆಂಬುದನ್ನು ವಿಚಾರ ಮಾಡುವಾಗ, ರಾಷ್ಟ್ರದ ಆದರ್ಶ ನಾಗರಿಕನಾಗಲು ಸಾಮರ್ಥ್ಯವನ್ನು ತಂದುಕೊಡುವಂಥ ವ್ಯಕ್ತಿಯ ಸರ್ವಾಂಗಪೂರ್ಣ ವಿಕಾಸವೇ ಶಿಕ್ಷಣವು ಎಂದು ನಾವು ತಿಳಿದುಕೊಳ್ಳಬೇಕು. ಆದರೆ ಕೆಲವರು ತಿಳಿದುಕೊಂಡಂತೆ ಕೇವಲ ದೇಹದ ಸ್ನಾಯುಗಳನ್ನು ಬೆಳೆಯಿಸಿ ಜಟ್ಟಿಗಳನ್ನು ತಯಾರಿಸುವುದೂ ಶರೀರಸೌಷ್ಟವವನ್ನು ಕಾಯುವುದೂ ಅದನ್ನು ಪ್ರಮಾಣಬದ್ಧವಾಗಿ ಇಡುವುದೂ ಶಾರೀರಿಕ ಶಿಕ್ಷಣದ ಮುಖ್ಯ ಧ್ಯೇಯವಲ್ಲ. ಜೀವನದ ಸರ್ವ ಕಾರ್ಯಕ್ಷೇತ್ರಗಳಲ್ಲಿಯೂ ಕರ್ತವ್ಯವನ್ನು ಚೆನ್ನಾಗಿ ಜರುಗಿಸಲು ಬರುವಂತಹ ಸ್ಥಿತಿಯಲ್ಲಿ ಶರೀರವನ್ನಿಟ್ಟುಕೊಳ್ಳುವಂತಹ ಶಕ್ತಿಯನ್ನು ಸಂಪಾದಿಸುವುದೇ ಅದರ ಗುಟ್ಟು ಎಂದು ಹೇಳಬಹುದು. ಶರೀರಕ್ಕೆ ಇಷ್ಟವಾದ ಚಲನವಲನ-ಗಳನ್ನು ಚಟಕ್ಕನೆ ಕೈಕೊಳ್ಳುವ ಚಾಪಲ್ಯ, ಹಗುರುತನ, ಸರ್ವಾಂಗೀಣ ಸೌಕರ್ಯ-ಸ್ವಾತಂತ್ರ್ಯ—ಇವುಗಳನ್ನು ಒದಗಿಸಿಕೊಡುವುದೇ ಅದರ ಕಾರ್ಯಕ್ಷೇತ್ರವೆನ್ನಬಹುದು.

ಈ ಶಾರೀರಿಕ ಶಿಕ್ಷಣದಲ್ಲಿ ಆರೋಗ್ಯವನ್ನು ಬೆಳೆಯಿಸುವಂಥ ಮತ್ತು ಕಾಪಾಡುವಂಥ ಚಟುವಟಿಕೆಗಳ ಸಮಾವೇಶವಾಗುವುದು—ಗರಡೀಸಾಧನ, ಆಟ, ಈಸುವುದು, ಕುಣಿಯುವುದು, ಹಾರಾಡುವುದು ಮುಂತಾದ ವಿವಿಧ ಕ್ರೀಡೆಗಳು; ಶಾಲೆಯ ಪ್ರವಾಸ, ಶಾಲೆಯ 'ಶಾರೀರಿಕ ಶಿಬಿರ' ಮೊದಲಾದುವು. ಇವು ಬಾಲಕರಲ್ಲಿ ಬಟ್ಟಬಯಲಲ್ಲಿರಬೇಕೆಂಬ ಆಸೆಯನ್ನೂ ಆರೋಗ್ಯ ಜೀವನದ ಹಂಬಲನ್ನೂ ಹುಟ್ಟಿಸುವುವು.

ಶರೀರಸಂವರ್ಧನೆಗೆ ಈ ವಿಷಯಗಳ ಜ್ಞಾನದಷ್ಟೇ ಲೈಂಗಿಕ ಶಿಕ್ಷಣವನ್ನು ಪಡೆಯುವುದೂ ಆವಶ್ಯಕವಾಗಿದೆ. ಲೈಂಗಿಕ ಶಿಕ್ಷಣವನ್ನು ಬಾಲಕರಿಗೆ ಯೋಗ್ಯ ಸಮಯದಲ್ಲಿ ಕೊಡದೆ ಇರುವುದರಿಂದ ಆಗುವ ಭಯಂಕರವಾದ ಅನಾಹೂತಗಳು ವೈಯಕ್ತಿಕ ಜೀವನವನ್ನೂ ಸಾಮಾಜಿಕ ಜೀವನವನ್ನೂ ದುಃಖಮಯವನ್ನಾಗಿ ಮಾಡುತ್ತವೆ. ಲೈಂಗಿಕ ಶಿಕ್ಷಣದ ಅಭಾವದಿಂದ ಬಾಲಕರಿಗೆ ತಮ್ಮ ಅಂಗಾಂಗಗಳನ್ನು ದುರುಪಯೋಗ ದಿಂದ ಹಾನಿತಟ್ಟದಂತೆ ಇಟ್ಟುಕೊಳ್ಳುವುದು ತಿಳಿಯದೇ ಹೋಗುವುದು. ಕೆಲವರು ವಿಕಾರವಶರಾಗಿ ದೇಹದ ಆರೋಗ್ಯಕ್ಕೆ ಬಾಧೆಯನ್ನು ತರಬಹು ದಾದ ದುಶ್ಚಟಗಳಿಗೆ ಆಧೀನರಾಗಿ ಜೀವನದ ಯಾತ್ರೆಯನ್ನು ದುರ್ಗಮ ವನ್ನಾಗಿ ಮಾಡಿಕೊಳ್ಳುತ್ತಾರೆ. ಲೈಂಗಿಕ ಶಿಕ್ಷಣದಿಂದ ಲೈಂಗಿಕ ಜೀವನದ ಕುತೂಹಲವು ಕಡಿಮೆಯಾಗಿ ಬಾಲ-ಬಾಲಕಿಯರು ಸನ್ಮಾರ್ಗ ದಿಂದ ಚ್ಯುತರಾಗುವುದಿಲ್ಲ. ಈ ಶಿಕ್ಷಣವನ್ನು ವಿದ್ಯಾರ್ಥಿಗಳ ಪಾಲಕ ರಾಗಲಿ, ತಂದೆತಾಯ್ಗಳಾಗಲಿ, ಶಿಕ್ಷಕರಾಗಲಿ ವೈಯಕ್ತಿಕವಾಗಿಯೂ ಸಾಮೂಹಿಕವಾಗಿಯೂ ಉಚಿತ ವೇಳೆಯಲ್ಲಿ ಉಚಿತವಾದ ಉದಾಹರಣೆ ಗಳಿಂದ, ವಿನಯದ ಎಲ್ಲೆಯನ್ನು ಮೀರದೆ ಕೊಡಬಹುದು. ಶಿಕ್ಷಕರು ನೀತಿಯ ಪಾಠವನ್ನು ಕಲಿಸುವಾಗ, ಸಸ್ಯಗಳ ಜೀವನೋತ್ಪತ್ತಿಕ್ರಮವನ್ನೂ ಶರೀರಶಾಸ್ತ್ರವನ್ನೂ ಕಲಿಸುವಾಗ ತಿಳಿಸಿ ಹೇಳಬಹುದು. ಈ ದೃಷ್ಟಿಯಿಂದ ನೋಡಲಾಗಿ ಲೈಂಗಿಕ ಶಿಕ್ಷಣವು ಶಾರೀರಿಕ ಶಿಕ್ಷಣಕ್ಕೆ ಸಹಾಯವಾಗುವು ದೆಂದು ಸಿದ್ಧವಾಗುತ್ತದೆ.

ಶಾರೀರಿಕ ಶಿಕ್ಷಣದ ಅನುಕೂಲತೆ, ವೈವಿಧ್ಯ, ಈಚೆಗೆ ಸರಕಾರದಿಂದ ಏರ್ಪಡಿಸಿದ 'ಕಾಂಡಿವಲಿ'ಯ ಶಿಬಿರದಲ್ಲಿ ಶಾರೀರಿಕ ಶಿಕ್ಷಣವನ್ನು ಪಡೆದ ಶಿಕ್ಷಕರು, ಪಠ್ಯಕ್ರಮದಲ್ಲಿ ಶಾರೀರಿಕ ಶಿಕ್ಷಣಕ್ಕೆ ದೊರೆತ ನಿಯತ ಸ್ಥಾನ—ಇವೆಲ್ಲವನ್ನೂ ವಿಚಾರಿಸಲಾಗಿ, ವಿದ್ಯಾರ್ಥಿಗಳ ಭವಿತವ್ಯವು ಸುಧಾರಿಸುವುದೆಂಬಲ್ಲಿ ಯಾವ ಸಂದೇಹವೂ ಇಲ್ಲ. ಕ್ರೀಡನ ಪದ್ಧತಿ ಯನ್ನು ವರ್ಗಕ್ಕೆ ಕಲಿಸುವ ಇತರ ಪಾಠಗಳಲ್ಲಿ ಸಮಾವೇಶಮಾಡಿ, ಆಟದ ಬಯಲಲ್ಲಿ ಸುಧಾರಿಸಿದ ಶೈಕ್ಷಣಿಕಪದ್ಧತಿಗಳನ್ನು ರೂಢಿಯಲ್ಲಿ ತರುವುದ ರಿಂದ 'ಆಟವೇ ಪಾಠ, ಪಾಠವೇ ಆಟ' ಎಂಬ ತತ್ತ್ವವನ್ನು ಪಾಲಿಸಿದಂತೆ.

ಆಗಿ ವಿದ್ಯಾರ್ಥಿಗಳ ಸರ್ವಾಂಗಗಳ ಬೆಳವಣಿಗೆಗೆ ಶಾರೀರಿಕ ಶಿಕ್ಷಣ-ಕ್ರಮವು ಸಹಾಯವಾಗುವುದು. ಪ್ರತಿಯೊಂದು ವ್ಯಾಯಾಮಕ್ರಮದಿಂದ ದೊರೆಯಬಹುದಾದ ಸಾಮಾನ್ಯ ನೈತಿಕಬಲ, ದುಷ್ಕಾಮನಿಗ್ರಹ, ಸಾಹಸಕೃತ್ಯಗಳನ್ನು ಕೈಕೊಳ್ಳುವ ಹುಮ್ಮಸ ಮತ್ತು ನವಚೈತನ್ಯವನ್ನುಂಟುಮಾಡುವ ಶಕ್ತಿ—ಇವೆಲ್ಲವುಗಳೂ ಮಾನಸಿಕ ಸಂಸ್ಕೃತಿಯ ಮಟ್ಟವನ್ನು ಏರಿಸಿ ಉತ್ತಮ ಸಮಾಜಸೇವಕರಾಗುವಂತೆ ವಿದ್ಯಾರ್ಥಿಗಳನ್ನು ಪ್ರೋತ್ಸಾಹಿಸುವುವು. ಸಾಂಘಿಕವಾದ ಆಟಗಳಿಂದ ಸಮತೋಲತೆಯ ( Fair Play ) ಮತ್ತು ಸಹಕಾರದ ಪ್ರಭಾವವು ತಲೆದೋರಿ ಮುಂದೆ ಜೀವನಸಂಗ್ರಾಮದಲ್ಲಿ ಸಾಮಾಜಿಕ, ಆರ್ಥಿಕ, ರಾಜಕೀಯ ಪ್ರಶ್ನೆಗಳನ್ನು ಬಿಡಿಸುವ ಸಾಮರ್ಥ್ಯವನ್ನು ಅವು ತಂದುಕೊಡುವುವು. ಆಟದ ಬಯಲಿನಲ್ಲಿ ಬಿಂಬಿಸಿದ ತತ್ತ್ವಗಳು ಜೀವನದ ಘೋರವಾದ ಸಮಸ್ಯೆಗಳನ್ನು ಬಿಡಿಸಲು ಅನುಕೂಲವಾಗುವುವೆಂಬುದನ್ನೂ ತರತರದ ಆಟಗಳು ವ್ಯಾಯಾಮಕ್ಕೆ ಅನುಕೂಲವಾಗುವುವೆಂಬದನ್ನೂ ಎಲ್ಲರೂ ಒಪ್ಪುವರು.

ಮಕ್ಕಳು ಸಾಲೆಗೆ ಬರಲು ಮೊದಲ್ಮಾಡಿದೊಡನೆಯೆ, ಶರೀರಶಿಕ್ಷಣದ ಪ್ರಾರಂಭವಾಗಿ ಅವರು ಬೆಳೆದಂತೆ ಅದು ಹಾಗೆಯೆ ಮುಂದುವರಿಯುತ್ತಿರಬೇಕು. ಶಾಲೆಗೆ ಬಂದ ಬಾಲಕರು ಶಾಲೆಯ ನಿಯಮುಗಳಿಗೆ ಒಳಪಟ್ಟಿರಬೇಕಾಗುವುದರಿಂದ ಅವರ ಸ್ವಚ್ಛಂದವಾದ ಚಲನವಲನೆಗೆ ತುಸ ತಡೆಯುಂಟಾಗುವುದು. ಆದರೆ, ಶಾಲೆಯ ಶಿಸ್ತಿಗೆ ಭಂಗಬರದಂತೆ ಅಭ್ಯಾಸಕ್ರಮದಲ್ಲಿ ಸ್ವಚ್ಛಂದ ಕ್ರೀಡೆಗೆ ಅವಕಾಶಕೊಡಬೇಕು. ವ್ಯಾಯಾಮವು ಆದಷ್ಟುಮಟ್ಟಿಗೆ ಕ್ರೀಡಾರೂಪದಲ್ಲಿರಬೇಕು ; ಬಾಲಕರ ಆನಂದವೃತ್ತಿಯನ್ನು ಬೆಳೆಯಿಸುವಂತಹದೂ ಇರಬೇಕು.

ವ್ಯಾಯಾಮವು ಎರಡು ವಿಧವಾಗಿರುವುದು .— (೧) ಮನೋ-ರಂಜಕ (೨) ಶೈಕ್ಷಣಿಕ. ಮೊದಲನೆಯದರಲ್ಲಿ ಶಾಲೆಯ ಎಲ್ಲ ತರದ ಆಟಗಳು, ಮನೋರಂಜಕ ಸಾಧನಗಳು, ಶೀಲವನ್ನು ಬೆಳೆಯಿಸುವ ಎಲ್ಲ ತರದ ಆಟ-ನೋಟ, ಚಟುವಟಿಕೆಗಳು ಸೇರಿರುವುವು. ಎರಡನೆಯದರಲ್ಲಿ

ಶರೀರದ ವಿಶಿಷ್ಟ ಪ್ರಗತಿಯನ್ನು ಸಾಧಿಸುವ ನಿರ್ದಿಷ್ಟ ವ್ಯಾಯಾಮ ಕ್ರಮಗಳು ಬರುವುವು. ಇವುಗಳಲ್ಲಿ ಕೆಲವನ್ನು ವ್ಯಾಯಾಮಮಂದಿರದಲ್ಲಿ ಮಾಡಬಹುದು. ಉಳಿದುವುಗಳನ್ನು ಬಯಲು ಹವೆಯಲ್ಲಿ ಕೈಕೊಳ್ಳ ಬಹುದು. ವ್ಯಾಯಾಮದಲ್ಲಿ ಅಭಿರುಚಿಯನ್ನು ಜಾಗೃತಗೊಳಿಸಬೇಕಾದರೆ ನಮ್ಮ ದೇಶದವರು ಪಾಶ್ಚಾತ್ಯರ ಆಟಗಳಾದ ಕ್ರಿಕೆಟ್, ಟೆನಿಸ್ ಮುಂತಾ ದುವುಗಳಲ್ಲಿ ತಮ್ಮ ಪ್ರಾವೀಣ್ಯವನ್ನು ತೋರಿಸಿರುವರೆಂದೂ, ಆಲಿಂಪಿಕ್ ಆಟಗಳಲ್ಲಿಯ 'ಹಾಕಿ' ಪಂದ್ಯಾಟದಲ್ಲಿ ಪೃಥ್ವಿಯಲ್ಲಿಯೇ ಮಿಗಿಲಾದ ಆಟಗಾರರೆಂದು ಪ್ರಶಸ್ತಿಯನ್ನು ಪಡೆದರೆಂದೂ ಹೇಳಿ ಸ್ವಾಭಿಮಾನವನ್ನು ಹುಟ್ಟಿಸಿ ವಿದ್ಯಾರ್ಥಿಗಳನ್ನು ಹುರಿದುಂಬಿಸಬೇಕು. ಹಳ್ಳಿಪಳ್ಳಿಗಳಲ್ಲಿ ಸಾಕಷ್ಟು ಬಯಲು ಸ್ಥಳಗಳಿದ್ದು, ಆಟ, ಓಟ ಮುಂತಾದ ಚಟುವಟಿಕೆ ಗಳನ್ನು ಶುದ್ಧ ಹವೆಯಲ್ಲಿ ವಿದ್ಯಾರ್ಥಿಗಳಿಗೆ ಮಾಡಹಚ್ಚಿ ರಾಷ್ಟ್ರೀಯ ಸಾಮೂಹಿಕ ಸಾಮರ್ಥ್ಯವನ್ನು ಬೆಳೆಯಿಸಬೇಕು. ಪಟ್ಟಣಗಳಲ್ಲಿ ಸ್ಥಳಾಭಾವವಿದ್ದರೂ, ಶಕ್ಯವಿದ್ದಮಟ್ಟಿಗೆ ಸರ್ವ ಪ್ರಯತ್ನಗಳನ್ನು ಮಾಡಿ ಬಯಲುಪ್ರದೇಶಗಳ ಏರ್ಪಾಡನ್ನು ಮಾಡಿಸಬೇಕು. ಮುಂಬಯಿಯಂತಹ ಬಹು ಜನವಸತಿಯುಳ್ಳ ಪ್ರದೇಶಗಳಲ್ಲಿ ಶಾಲೆಯ ಅವಧಿಯು ಮುಗಿದ ಕೂಡಲೆ ಮೋಟಾರುವಾಹನಗಳಿಂದ ಬಯಲು ಪ್ರದೇಶಗಳಿಗೆ ವಿದ್ಯಾರ್ಥಿ ಗಳನ್ನು ಸಾಗಿಸುವ ವ್ಯವಸ್ಥೆಯನ್ನು ಮಾಡಿಕೊಟ್ಟು ನಾನಾತರದ ಆಟ-ನೋಟ, ಜಿಗಿದಾಟ, ಕವಾಯತು ಇವೇ ಮೊದಲಾದ ಶಾರೀರಿಕ ಚಟುವಟಿಕೆಗಳನ್ನು ಮಾಡಹಚ್ಚುವ ರೂಢಿಯುಂಟು.

ವಿದ್ಯಾರ್ಥಿಗಳನ್ನು ಹುರಿದುಂಬಿಸುವ ಸಾಧನಗಳನ್ನು ಶಾರೀರಿಕ ಶಿಕ್ಷಕನು ಎಂದೂ ಅಲಕ್ಷಿಸಬಾರದು. ತಾನೇ ಅಚ್ಚುಕಟ್ಟಾದ ದೇಹ ವುಳ್ಳವನಿದ್ದು ಚುರುಕು ಕಾಣುವ ಬಟ್ಟೆಗಳನ್ನು ಉಪಯೋಗಿಸಬೇಕು. ಅದರಂತೆ ವಿದ್ಯಾರ್ಥಿಗಳನ್ನು ಅಚ್ಚುಕಟ್ಟಾಗಿರುವಂತೆಯೂ ಚಟುವಟಿಕೆ ಯುಳ್ಳವರಾಗಿರುವಂತೆಯೂ ಚೊಕ್ಕಟವಾದ ಸಮವಸ್ತ್ರಗಳನ್ನು ಹಾಕು ವಂತೆಯೂ ಪ್ರೇರಿಸಬೇಕು. ವ್ಯಾಯಾಮ ಮಂದಿರದಲ್ಲಿ ಸ್ವದೇಶದ ಹಾಗೂ ಪರದೇಶದ ದೇಹಸೌಷ್ಟವವುಳ್ಳ ಆದರ್ಶ ವೀರಪುರುಷರ, ಜಗದ್ವಂದ್ಯರಾದ **'ಗಾಮಾ'** ಮುಂತಾದ ಜಟ್ಟಿಗಳ, ಅಂಗಸಾಧಕರ,

ವೈಯುಕ್ತಿಕ ಹಾಗೂ ಸಾಮೂಹಿಕ ವ್ಯಾಯಾಮ-ಪ್ರದರ್ಶನಗಳ ಭಾವ-ಚಿತ್ರಗಳನ್ನೂ ತರತರದ ಪದ್ಧತಿಯ ವ್ಯಾಯಾಮ-ಪ್ರಕಾರದ ಪಟಗಳನ್ನೂ ತೂಗಹಾಕಬೇಕು. ಶಕ್ಯವಿದ್ದ ಸಲಕರಣೆಗಳ ಜೋಡಣೆ ಮಾಡಿ, ವ್ಯವಸ್ಥಿತ ರೀತಿಯಿಂದ ಇಟ್ಟಿರಬೇಕು. ನಿಯತ ಕಾಲಕ್ಕೆ ಶಾಲೆ ಶಾಲೆಗಳ, ಹಳ್ಳಿಹಳ್ಳಿಗಳ, ಜಿಲ್ಲೆ ಜಿಲ್ಲೆಗಳ ಆಟಗಾರರ ಪಂದ್ಯಾಟಗಳ ಯೋಜನೆಗಳನ್ನು ಸ್ಥಿರಗೊಳಿಸಬೇಕು. ಸಮಾಜಸೇವೆಯ ಕಾರ್ಯಕ್ರಮದಲ್ಲಿ, ಸಾಂಘಿಕ ಪ್ರಯತ್ನವೇ ಮುಂತಾದ ಚಟುವಟಿಕೆಗಳಲ್ಲಿ, ವಿದ್ಯಾರ್ಥಿಗಳು ತೋರಿಸಬಹುದಾದ ಶಿಸ್ತು, ಸೇವೆ, ಸ್ವಾರ್ಥತ್ಯಾಗ ಮುಂತಾದ ಗುಣಗಳ ಆಚರಣೆಗೆ ಆಸ್ಪದವನ್ನು ಕೊಡುತ್ತಿರಬೇಕು.

ಶಾರೀರಿಕ ಶಿಕ್ಷಣವನ್ನು ಕೊಡುವಾಗ ಕೆಳಗಿನ ಸೂಚನೆಗಳನ್ನು ಗಮನಿಸಬೇಕು :—

(೧) ಆಟಗಳಲ್ಲಿ ಸಂಪೂರ್ಣವಾಗಿ ಲೀನವಾಗಿರುವುದೇ ಎಂದರೆ ತನ್ನನ್ನು ತಾನು ಮರೆತು ಸಾಮಾನ್ಯ ಧ್ಯೇಯಸಾಧನೆಯಲ್ಲಿ ಸರ್ವಸ್ವವನ್ನು ಅರ್ಪಿಸುವುದೇ ಮುಖ್ಯ ಲಾಭವಾದರೆ, ಆಟವಾಡುವ ವಿಶಿಷ್ಟ ಜಾಣತನವನ್ನು ಗಳಿಸುವುದರಲ್ಲಿಯೇ ವಿದ್ಯಾರ್ಥಿಗಳ ಎಲ್ಲ ಶಕ್ತಿಯು ವ್ಯಯವಾಗಬಹುದು. ಹಾಗಾದರೆ ದೇಹದ ಸಾಮಾನ್ಯ ಬೆಳವಣಿಗೆಯ ಕಡೆಗೆ ಸಾಕಷ್ಟು ಗಮನಕೊಡಲಾಗುವುದಿಲ್ಲ. ಫುಟ್‌ಬಾಲ್, ಟೆನಿಸ್, ಕ್ರಿಕೆಟ್, ಹುಟ್ಟುಕಡೆಯುವುದು, ಹಾರುವುದು, ಓಡುವುದು ಮೊದಲಾದುವುಗಳಲ್ಲಿ ದೇಹದ ಕೆಳಬದಿಯು ಪುಷ್ಟವಾಗುವುದು ; ಅದರ ಮೇಲಿನ ಭಾಗಗಳಲ್ಲಿ ಸಾಕಷ್ಟು ಪ್ರಗತಿಯು ಕಂಡುಬರುವುದಿಲ್ಲ. ಕೇವಲ ಮನೋರಂಜನೆಯ ಆಟಗಳು ದೇಹದ ಸರ್ವಾಂಗಗಳ ಬೆಳವಣಿಗೆಯನ್ನುಂಟುಮಾಡಲಾರವು. ಆದುದರಿಂದ ಹಗುರಾದುವುಗಳಿಂದ ಗಡುಚಾದ ಪ್ರಕಾರಗಳಿಗೆ ಹೋಗುವ, ದೇಹದ ಸರ್ವಾಂಗಗಳ ಬೆಳವಣಿಗೆಯನ್ನು ಉಂಟುಮಾಡುವ ವ್ಯಾಯಾಮಪದ್ಧತಿಯ ಆವಶ್ಯಕತೆಯು ಕಂಡುಬರುವುದು.

(೨) ವ್ಯಾಯಾಮವು ವೈಯಕ್ತಿಕ ಯೋಗ್ಯತೆಗೆ ಸರಿಯಾಗಿ ಸಾವಕಾಶವಾಗಿ ಹೆಜ್ಜೆಗಳನ್ನು ಇಡುತ್ತ ಸಾಮರ್ಥ್ಯವು ಹೆಚ್ಚಿದ ಹಾಗೆ ಕಠಿಣವಾಗುತ್ತ ಸಾಗಬೇಕು.

(೩) ಯೋಗ್ಯ ಮೇಲ್ವಿಚಾರಣೆಯು ಇರಲೇಬೇಕು.

(೪) ಪ್ರತಿಯೊಬ್ಬ ವಿದ್ಯಾರ್ಥಿಯ ವೈದ್ಯಕೀಯ ಪರೀಕ್ಷೆ ಮಾಡಿಸಿ, ಅವನ ಕುಂದುಕೊರತೆಗಳನ್ನು ಲಕ್ಷಿಸಿ, ವ್ಯಾಯಾಮದ ಯೋಜನೆಯನ್ನು ಮಾಡತಕ್ಕದ್ದು.

(೫) ನ್ಯೂನತೆಗಳಿದ್ದ ವಿದ್ಯಾರ್ಥಿಗಳು ತಮ್ಮ ನ್ಯೂನತೆಗಳನ್ನೂ ರೋಗಗಳನ್ನೂ ಸರಿಪಡಿಸುವ ವ್ಯಾಯಾಮಗಳನ್ನು ಕೈಕೊಳ್ಳುವಂತೆ ಮಾಡಬೇಕು. ಗಿಡ್ಡನು ಎತ್ತರವುಳ್ಳವನಾಗಬಹುದು. ಸಂಕುಚಿತವಾದ ಎದೆಯುಳ್ಳವನು ಹರವಾದ ಎದೆಯುಳ್ಳವನಾಗಬಹುದು. ದೇಹದ ಕೆಲವು ದೋಷಗಳನ್ನು ಅಥವಾ ವಿಶಿಷ್ಟ ರೋಗಗಳನ್ನು ವಿಶಿಷ್ಟ ವ್ಯಾಯಾಮಗಳ ಸಾಹಾಯ್ಯದಿಂದ ತಿದ್ದಬಹುದು.

(೬) ವಿದ್ಯಾರ್ಥಿಗಳಿಗೆ ಸ್ವೇಚ್ಛೆಯ ಸ್ವಾತಂತ್ರ್ಯವನ್ನು ಕೊಡಬಾರದು.

ಆಹಾರದಲ್ಲಿ ಹೇಗೆ ನಿಯಂತ್ರಣವು ಅವಶ್ಯವೋ ಹಾಗೆ ವ್ಯಾಯಾಮದಲ್ಲಿಯೂ ಅನುಭವಿಕರ ಲಾಭವನ್ನು ಪಡೆಯುವುದು ಅವಶ್ಯ. ಶಿಕ್ಷಕರ ಸಾಹಾಯ್ಯವಿಲ್ಲದೆ ಕಲಿತವನು ಎಷ್ಟೋ ದೋಷಗಳನ್ನು ಕಿತ್ತುಹಾಕದೆ ತಾನು ಸಾಮರ್ಥ್ಯವುಳ್ಳವನೆಂದು ಹೆಮ್ಮೆಪಡಬಹುದು. ಒಂದು ಸರಪಳಿಯ ಸಾಮಾನ್ಯ ಸಾಮರ್ಥ್ಯವು ಅದರ ತೀರ ದುರ್ಬಲವಾದ ಕೊಂಡಿಯನ್ನು ಅವಲಂಬಿಸಿರುತ್ತದೆ. ಹಾಗೆಯೆ ಇಂಥವನ ಸಾಮರ್ಥ್ಯದ ಪರೀಕ್ಷೆಯ ಕಾಲವು ಬಂದಾಗ, ಅವನ ದೋಷವು ಕಂಡುಬರುವುದು.

(೭) ವ್ಯಾಯಾಮ ಶಿಕ್ಷಣಕ್ರಮವು ರಾಷ್ಟ್ರೀಯಭಾವನೆಯಿಂದ ತುಂಬಿದ್ದು, ಸಾವಕಾಶವಾಗಿ ಪ್ರಗತಿಯ ಹೆಜ್ಜೆಗಳನ್ನಿಡುತ್ತ, ಮೊದಲಿನ ಪ್ರಕಾರದಿಂದ ಕಡೆಯ ಪ್ರಕಾರದ ವರೆಗೆ ಬೆಳೆಯುತ್ತ ಹೋಗಿ ವೈವಿಧ್ಯದಿಂದಲೂ ಮನೋರಂಜನೆಯಿಂದಲೂ ಕೂಡಿದುದಿರಬೇಕು. ಅದರಿಂದ ವಿದ್ಯಾರ್ಥಿಗಳಿಗೆ ಸಂಸಾರದಲ್ಲಿ ನಿರೋಗಿಗಳಾಗಿರುವಂತೆ ಸದಾ ಪ್ರಯತ್ನಿಸುವ ಪ್ರೋತ್ಸಾಹವು ದೊರೆಯುವುದು.

(೮) ಪೌರ್ವಾತ್ಯ, ಪಾಶ್ಚಾತ್ಯ ವ್ಯಾಯಾಮಪದ್ಧತಿಗಳನ್ನು— ಸ್ವೀಡಿಶ್, ಬ್ರಿಟಿಶ್, ಮುಲರ್, ಡಾಲ್ಕ್ರೋಜನ ನರ್ತನಶಾಸ್ತ್ರ,

ಸ್ಯಾಂಡೊ, ಜುಜುತ್ಸು, ವೆಬ್ಬರ್, ಅಯ್ಯರ್ ಪದ್ಧತಿಗಳನ್ನು—ಪರಿಶೀಲಿಸಿ ಅವುಗಳ ಗುಣದೋಷಗಳನ್ನೂ ರೂಪರೇಷೆಯನ್ನೂ ಕಂಡುಹಿಡಿದು ನಮ್ಮ ದೇಶದ ಉನ್ನತಿಗೆ ಅನುಕೂಲವಾಗುವಂತಹ ವಿಶಿಷ್ಟಪದ್ಧತಿಗೆ ಆಶ್ರಯವನ್ನೂ ಸಕ್ರಿಯ ಸಹಾನುಭೂತಿಯನ್ನೂ ಒದಗಿಸಿಕೊಡಬೇಕು; ಅಂಧಾನುಕರಣವೃತ್ತಿಯನ್ನೂ ತ್ಯಜಿಸಬೇಕು. ಹಿಂದಿನ ಕಾಲದಲ್ಲಿ ನಮ್ಮ ಋಷಿಗಳು ಪ್ರಾಣಾಯಾಮ, ಯೋಗಾಸನಗಳಿಂದ ತಮ್ಮ ದೇಹವನ್ನು ಬಲಪಡಿಸಿ, ಆಯುಷ್ಯ ಪ್ರಮಾಣವನ್ನು ಬೆಳೆಯಿಸಿಕೊಂಡಂತೆ ನಾವಾದರೂ ನಮ್ಮ ಪ್ರಾಚೀನಪದ್ಧತಿಗಳನ್ನು ರೂಢಿಯಲ್ಲಿ ಬರಮಾಡಿ ಭದ್ರವಾದ ಹೃದಯ, ಬಲವಾದ ಪುಪ್ಪುಸ, ದೇಹದ ಸರ್ವತೋಮುಖವಾದ ಬೆಳವಣಿಗೆ—ಇವುಗಳನ್ನು ಸಾಧಿಸಬಹುದು. ಜಪಾನದ 'ಜುಜುತ್ಸು' ಪದ್ಧತಿಯ ವ್ಯಾಯಾಮವು ನಮ್ಮ ಸಮಾಜದ ಪ್ರಕ್ಷುಬ್ಧ ಪರಿಸ್ಥಿತಿಯಲ್ಲಿ, ಜಾತೀಯ ದೊಂಬೆಗಳ ಕಾಲದಲ್ಲಿ, ಪ್ರತಿಯೊಬ್ಬ ಬಾಲಕನಿಗೂ ಬಾಲಿಕೆಗೂ ಅತ್ಯಾವಶ್ಯಕವಾಗಿದೆ. ಈ ವ್ಯಾಯಾಮವು 'ಲಂಡನ್' ದಲ್ಲಿಯ ಪೋಲೀಸರೆಲ್ಲರಿಗೂ ಗೊತ್ತಿದೆ. ಈ ವ್ಯಾಯಾಮದಿಂದ ಪ್ರಾಣರಕ್ಷಣೆಯನ್ನೂ ಮಾನರಕ್ಷಣೆಯನ್ನೂ ಸುಲಭವಾಗಿ ಮಾಡಿಕೊಳ್ಳಲು ಬರುವುದು. ಇದಕ್ಕೆ ಪ್ರತಿಯೊಂದು ಶಾಲೆಯಲ್ಲಿ ಸ್ಥಳವಿರಬೇಕು.

(೯) ಶಾರೀರಿಕ ಶಿಕ್ಷಣದಲ್ಲಿಯ ಹೆಚ್ಚಾದ ಆಸ್ಥೆಯು ನಮ್ಮ ಸರ್ವವಿಧ ಪ್ರಗತಿಗೆ ವಿರೋಧವಾಗದಂತೆ ನಾವು ಜಾಗೃತರಾಗಿರಬೇಕು. ಎಂದೂ ಕುಗ್ಗದ ಉತ್ಸಾಹ, ನಾವೀನ್ಯ, ಹುಮ್ಮಸ, ಹೊಸದನ್ನು ಪ್ರಾರಂಭಿಸುವ ಕ್ರಿಯಾಶಕ್ತಿ, ಏಕನಿಷ್ಠೆ, ಕಾರ್ಯತತ್ಪರತೆ, ಇವೇ ಮೊದಲಾದ ಗುಣಗಳು ಶಾರೀರಿಕ ಶಿಕ್ಷಣದ ಉತ್ತಮಾಂಗಗಳಾಗಿರಬೇಕು. ವ್ಯಾಯಾಮವು ಉತ್ತಮ ಪರಿಣಾಮಗಳನ್ನುಂಟುಮಾಡಿ ಮನುಷ್ಯನನ್ನು ಯಾವಜ್ಜೀವನವೂ ಸುದೃಢನನ್ನಾಗಿಯೂ ಉತ್ಸಾಹಶಾಲಿಯನ್ನಾಗಿಯೂ ಮಾಡುವುದು. ವ್ಯಾಯಾಮಕ್ರಮವು ಆಜೀವ ಅಭಿರುಚಿಯನ್ನು ಹುಟ್ಟಿಸುವಂತಹದಿರಬೇಕು; ಶಾಲೆಯ ಅವಧಿಯು ಮುಗಿದ ಕೂಡಲೇ ತಿರಸ್ಕರಿಸುವಂತಹದಿರಬಾರದು.

(೧೦) ಶಿಕ್ಷಕನ ಹೊಣೆಯು, ಇತ್ತೀಚೆಯ ವರೆಗೆ ನಡೆದುಬಂದಂತೆ, ಕೋಮಲ ಬಾಲಕನ ಬೌದ್ಧಿಕ ಶಿಕ್ಷಣವನ್ನು ಸಾಗಿಸಿದರೆ, ತೀರಲಿಲ್ಲ. ಈಗ ಬಾಲಕನ ಶಾರೀರಿಕ ಶಿಕ್ಷಣದ ಹೊಣೆಯೂ ಅವನ ಮೇಲಿರುವುದು.

(೧೧) ಸ್ವೀಕೃತ ವ್ಯಾಯಾಮ ಪದ್ಧತಿಯು ಎಲ್ಲ ಪದ್ಧತಿಗಳಲ್ಲಿಯ ಉತ್ತಮ ಭಾಗಗಳನ್ನು ಕಲೆಹಾಕಿಕೊಂಡು, ಸರ್ವಾಂಗ ಪರಿಪೂರ್ಣವಿದ್ದರೆ ಯಾವ ದೋಷಗಳೂ ತಟ್ಟದೆ, ಆದರ್ಶ ಸ್ತ್ರೀಪುರುಷರುಳ್ಳ ರಾಷ್ಟ್ರನಿರ್ಮಾಣವು ಶಕ್ಯವಾಗುವುದು. ಸಣ್ಣವರು, ದೊಡ್ಡವರು, ಅಥವಾ ಸ್ತ್ರೀಪುರುಷ ರೆಂಬ ಭೇದವಿಲ್ಲದೆ ವ್ಯಾಯಾಮವು ಸರ್ವರಿಗೂ ಮಾನ್ಯವಿರಬೇಕು.

## ೨. ನೈತಿಕ-ಶಿಕ್ಷಣ

**ನೈತಿಕ ಶಿಕ್ಷಣವು** ಶಾರೀರಿಕ ಆರೋಗ್ಯಕ್ಕೆ ನೆರವಾಗುವುದು. ನೈತಿಕ ಸ್ಥೈರ್ಯವು ಮನೋದಾರ್ಢ್ಯವನ್ನು ಅವಲಂಬಿಸಿರುವುದು. ಮನೋದಾರ್ಢ್ಯವು ಶಾರೀರಿಕ ಸಾಮರ್ಥ್ಯವನ್ನು ಅವಲಂಬಿಸಿರುವುದು. ನೈತಿಕ ಧೈರ್ಯಕ್ಕೆ ಶಾರೀರಿಕ ಬಲವೂ ಮಾನಸಿಕ ಬಲವೂ ಆಧಾರವಾಗಿರುವುವು. ಒಳಿತು-ಕೆಡಕು, ಯೋಗ್ಯಾಯೋಗ್ಯ, ಸಾರಾಸಾರ ಮುಂತಾದ ವಿಚಾರಗಳು ಮನಸ್ಸಿಗೆ ಹೊಳೆಯುವುದೇ ನೈತಿಕಶಿಕ್ಷಣದ ತಳಹದಿಯಾಗಿರುವುದು.

ಮನುಷ್ಯನು ಶ್ರೀಮಂತನಿರಲಿ, ವಿದ್ವಾಂಸನಿರಲಿ, ಸುದೃಢನಾಗಿರಲಿ, ನೀತಿ-ಶೀಲಗಳು ಇಲ್ಲದೆ ಹೋದರೆ ಅವನಿಗೆ ಸಮಾಜದಲ್ಲಿ ಮಾನ-ಮರ್ಯಾದೆಗಳಿಲ್ಲ. ನೀತಿಯಿದ್ದರೇನೆ ಮಾನವನಿಗೆ ಮರ್ಯಾದೆ, ಬೆಲೆ, ಪ್ರತಿಷ್ಠೆ. ಮನುಷ್ಯನ ನಡೆ-ನುಡಿಗಳ, ಆಚರಣೆಗಳ, ಮೇಲಿಂದಲೇ ಅವನ ನೀತಿ-ಶೀಲಗಳನ್ನು ಕಂಡುಹಿಡಿಯಬಹುದು. ಶೀಲ, ನೀತಿ, ಧರ್ಮ ಇವುಗಳಲ್ಲಿ ಪರಸ್ಪರಸಂಬಂಧವುಂಟು. ನೀತಿ-ಶೀಲಬಾಹಿರರಾದವರೇ ಧರ್ಮಲಂಡರೆಂದು ಹೇಳಿಸಿಕೊಳ್ಳುವುದುಂಟು. ಆದುದರಿಂದ ಬಾಲಕರ ನೀತಿ-ಧರ್ಮಗಳ ಕಡೆಗೆ ಲಕ್ಷ್ಯವಿಡಬೇಕಾದುದು ಅತ್ಯಾವಶ್ಯಕ. ಬಾಲಕರಿಗೆ ನೈತಿಕ ಶಿಕ್ಷಣವನ್ನು ಉಪದೇಶ, ಚರ್ಚೆ, ನಿಬಂಧಗಳಿಂದ ಕೊಡುವುದು ಪರಿಣಾಮಕಾರಿಯಾಗದು. ನೈತಿಕ ವಿಷಯವನ್ನು ಅಭ್ಯಾಸಕ್ರಮದಲ್ಲಿ

ಒಂದು ಸ್ವತಂತ್ರವಿಷಯುವನ್ನಾಗಿ ಇಟ್ಟುಕೊಂಡು ಕಲಿಸುವುದರಿಂದ ಬಾಲಕರು ನೀತಿವಂತರಾಗುವರೆಂದು ಹೇಳಲಿಕ್ಕಾಗುವುದಿಲ್ಲ; ಆದರೆ ಅವರಲ್ಲಿ ಬಹುಶಃ ದಾಂಭಿಕತೆಯು ಒಡಮೂಡಬಹುದು. 'ಇಂಥವನ್ನು ಮಾಡಿರಿ, ಇಂಥದನ್ನು ಮಾಡಬೇಡಿರಿ' ಎಂದು ಹೇಳುವುದರಿಂದ ಪ್ರಯೋಜನವಾಗದು. ಏಕೆಂದರೆ 'ಇಂಥದನ್ನು ಮಾಡಿರಿ' ಎಂದರೂ ಅದನ್ನು ಮಾಡುವ ಉತ್ಸಾಹವು ಬಾಲಕರಲ್ಲಿರುವುದಿಲ್ಲ. ಈ ತೆರನಾದ ಉಪದೇಶಕ್ಕಿಂತ ಶಾಲೆಗಳಲ್ಲಿ ಕಲಿಸುವ ಬೇರೆಬೇರೆ ವಿಷಯುಗಳಲ್ಲಿ ನೀತಿಯುನ್ನು ಸೇರಿಸಿ ಅಪ್ರತ್ಯಕ್ಷರೀತಿಯಿಂದ ಕಲಿಸಿದರೆ, ಹೆಚ್ಚು ಪರಿಣಾಮಕಾರಿಯಾಗುತ್ತದೆ. ಇತಿಹಾಸ-ಪುರಾಣ-ಧರ್ಮಗ್ರಂಥಗಳಲ್ಲಿಯು ನಂತರ, ಸತ್ಪುರುಷರ, ಸದ್ವರ್ತನೆಯ ಜೀವನಚರಿತ್ರಗಳ ಮೇಲಿಂದಲೂ ಭೂಗೋಲ ವಿಷಯುದಿಂದಲೂ ನಾನಾ ಜನಾಂಗಗಳ ನಾನಾತರದ ನಡೆ-ನುಡಿಗಳ ಮೇಲಿಂದಲೂ ನೀತಿಪಾಠಗಳನ್ನು ಕಲಿಸಬಹುದು.

ಬಾಲಕರಿಗೆ ನೀತಿಪಾಠಗಳನ್ನು ಕಲಿಸಲು ಅತ್ಯುತ್ತಮ ಸ್ಥಾನಗಳೆಂದರೆ ವರ್ಗಗಳು ಮತ್ತು ಆಟದ ಬಯಲುಗಳು. ವರ್ಗಗಳಲ್ಲಿ ದಿನಾಲು ಅನೇಕ ಸಂಗತಿಗಳು ಜರುಗುತ್ತಿರುತ್ತವೆ. ಹುಡುಗರಲ್ಲಿ ಕೆಲವರು ಜಗಳ ಮಾಡುತ್ತಾರೆ; ಹಲವರು ಕೆಲವರನ್ನು ದ್ವೇಷಿಸುತ್ತಾರೆ; ಗೆಳೆತನವನ್ನು ಕಡಿದುಕೊಳ್ಳುತ್ತಾರೆ; ಚಾಡಿಹೇಳುತ್ತಾರೆ; ದುರಾಗ್ರಹ ಮಾಡುತ್ತಾರೆ; ಮತ್ತೊಬ್ಬರ 'ನಕಲು' ಮಾಡುತ್ತಾರೆ; ಸಲ್ಲದ ಸೊಲ್ಲುಗಳನ್ನು ಎಲ್ಲರೂ ನೋಡುವಂತೆ ಬರೆಯುತ್ತಾರೆ. ಇವೇ ಮೊದಲಾದ ದುಶ್ಚಟಗಳು ಕೆಲವರಲ್ಲಿ ಕೆಲವು ಸಲ ಕಂಡುಬರುತ್ತವೆ. ಆಟದ ಬಯಲಲ್ಲಿಯೂ ಸ್ವಾರ್ಥ, ತನ್ನದೇ ಮೇಲೆಂದು ವಾದಿಸಿ ಸಾಧಿಸಿಕೊಳ್ಳುವ ಶಕ್ತಿ, ದುರ್ಬಲರನ್ನು ಹಿಮ್ಮೆಟ್ಟಬೇಕೆನ್ನುವ ಪ್ರವೃತ್ತಿ, ಅನ್ಯರ ಸ್ವತ್ತನ್ನು ತನ್ನದನ್ನಾಗಿ ಮಾಡಿಕೊಳ್ಳಬೇಕೆಂಬ ಲಾಲಸೆ—ಮುಂತಾದ ಅನೈತಿಕ—ವರ್ತನೆಗಳು ಅಕಸ್ಮಾತ್ತಾಗಿ ಕಂಡುಬರುತ್ತವೆ. ಶಿಕ್ಷಕನು ಅವೆಲ್ಲವುಗಳನ್ನು ನಿರೀಕ್ಷಣೆಯಿಂದ, ತಾತ್ಕಾಲಿಕ ಚಿಕಿತ್ಸೆಯಿಂದ, ತಿದ್ದಲು ಯತ್ನಿಸಬೇಕು. ಬಾಲಕರಲ್ಲಿ ನೀತಿಪ್ರಧಾನವಾದ ಭಾವನೆಯು ಉದ್ಭವಿಸುವಂತೆ ಪ್ರಯತ್ನಿಸಬೇಕು. ಶ್ರೀಮಂತರೂ ಬಡವರೂ ಉಚ್ಚರೂ ನೀಚರೂ ಎಂಬ ಭೇದಭಾವನೆಯು

ಬಾಲಕರಲ್ಲಿ ಕಂಡುಬರುತ್ತಿದ್ದರೆ, ಅದನ್ನು ಯುಕ್ತಿಯಿಂದ ಯಾರ ಮನಸ್ಸನ್ನೂ ನೋಯಿಸದಂತೆ ಹೋಗಲಾಡಿಸಬೇಕು. ಇವುಗಳಲ್ಲದೆ ಶಾಲೆಯ ಸಮ್ಮೇಲನ, ಪಾರಿತೋಷಕ ಸಮಾರಂಭ, ಪ್ರವಾಸ ಇತ್ಯಾದಿಗಳ ಮುಖಾಂತರವಾಗಿಯೂ ವಿದ್ಯಾರ್ಥಿಗಳಿಗೆ ಹೊಣೆಗಾರಿಕೆಯ ಸ್ಥಾನಗಳನ್ನು ಕೊಟ್ಟು, ಅವರಲ್ಲಿಯ ಸಾಮಾಜಿಕ ಗುಣಗಳ ಆಚರಣೆಗಳಿಗೆ ಆಸ್ಪದಕೊಟ್ಟು, ಸ್ವಾರ್ಥ, ಸಂಕುಚಿತ ವೃತ್ತಿ, ಕುತ್ಸಿತ ಆಚಾರ-ವಿಚಾರಗಳಿಗೆ ಆಶ್ರಯಕೊಡದೆ, ಉಚ್ಚವಾದ ಮೇಲ್ಪಂಕ್ತಿಯನ್ನು ಹಾಕಿ, ಶಾಲೆಯಲ್ಲಿ ನೀತಿಯ ಮೇಲ್ಮೆಯನ್ನು ಸ್ಥಿರಗೊಳಿಸಬೇಕು.

## ೩. ಧಾರ್ಮಿಕ ಶಿಕ್ಷಣ

ಶಾರೀರಿಕ ಶಿಕ್ಷಣಕ್ಕೆ ನೈತಿಕ ಶಿಕ್ಷಣವು ಬೆಂಬಲವಾಗುವಂತೆ **ಧಾರ್ಮಿಕ ಶಿಕ್ಷಣವು** ನೈತಿಕ ಶಿಕ್ಷಣಕ್ಕೆ ನೆರವಾಗುವುದು. ನೈತಿಕ ಶಿಕ್ಷಣಕ್ಕೆ ಮೂರ್ತ ಸ್ವರೂಪವೂ ಉತ್ತೇಜನವೂ ದೊರೆಯಬೇಕಾದರೆ, ಧಾರ್ಮಿಕ ಶಿಕ್ಷಣದ ಏರ್ಪಾಡನ್ನು ವಿಶಾಲ ದೃಷ್ಟಿಯಿಂದ ಮಾಡುವುದು ಅತ್ಯಾವಶ್ಯಕ. ನೀತಿ-ಧರ್ಮಗಳೆಂದರೆ ಒಂದು ನಾಣ್ಯದ ಇಕ್ಕೆಲಗಳಿದ್ದಂತೆ; ಪುಸ್ತಕದ ಆಚೆಯ ಈಚೆಯ ಹೊದಿಕೆಗಳಿದ್ದಂತೆ. ನೀತಿ, ಧರ್ಮ ಇವು ಒಂದಕ್ಕೊಂದು ಪರ್ಯಾಯವಾಚಿಯಾಗಿವೆ. ಧರ್ಮದ ಮಂದಿರವು ನೀತಿಯ ಅಸ್ತಿವಾರದ ಮೇಲೆಯೆ ಕಟ್ಟಿದೆ. ಉದಾತ್ತ ಆದರ್ಶಗಳನ್ನಿಟ್ಟುಕೊಳ್ಳಲು ಸಹಾಯವಾಗುವ, ಜೀವನದ ಮಟ್ಟನ್ನು ಮೇಲ್ತರಗತಿಗೆ ಒಯ್ಯಲು ಸಾಧನವಾದ, ಇಂಥ ಧಾರ್ಮಿಕ ಶಿಕ್ಷಣದ ಲಾಭವನ್ನು ಶಾಲೆಯಲ್ಲಿ ವಿದ್ಯಾರ್ಥಿಗಳು ಪಡೆಯುವಂತೆ ಮಾಡಬೇಕಾದರೆ, ಅನೇಕ ವ್ಯಾವಹಾರಿಕ, ಶಾಲಾಸಂವಿಧಾನಕ ವಿಷಯಗಳ ತೊಡಕುಗಳು ಮುಂದೆ ಬಂದು ನಿಲ್ಲುವುವು. ಅವುಗಳನ್ನು ವಿವೇಚಿಸಿ ಧಾರ್ಮಿಕ ಶಿಕ್ಷಣಕ್ಕೆ ಯಾವ ಸ್ವರೂಪವನ್ನು ಕೊಟ್ಟರೆ, ಸರ್ವಮಾನ್ಯವಾಗುವಂತೆ ಅದನ್ನು ಶಾಲೆಗಳಲ್ಲಿ ಹೇಗೆ ಕೊಡಬೇಕೆಂಬುದನ್ನು ನಿರ್ಧರಿಸುವೆವು.

ಈಗಿನ ನಮ್ಮ ಶಾಲೆಗಳಲ್ಲಿ ಬಹು ಧರ್ಮಗಳ, ಜಾತಿಗಳ, ಪಂಥಗಳ ಬಾಲಕ-ಬಾಲಿಕೆಯರು ಕೂಡಿರುವುದರಿಂದ ಅವರೆಲ್ಲರಿಗೂ ಅವರವರ

ಧರ್ಮದ ಶಿಕ್ಷಣವನ್ನು ಕೊಡುವುದು ಶಕ್ಯವಿಲ್ಲ. ಒಂದು ನಿಯಮಿತ ಕಾಲಕ್ಕೆ ಇಂತಿಷ್ಟು ಅವಧಿಯಲ್ಲಿ ಎಲ್ಲ ಧರ್ಮಗಳನ್ನು ಕುರಿತು ಹೇಳು-ವುದರಿಂದ ಯಾವ ಪ್ರಯೋಜನವೂ ಆಗುವುದಿಲ್ಲ. ಪರಸ್ಪರವಿರೋಧಿಗಳಾದ ವಿಚಾರಗಳನ್ನು ಎಳೆಯ ವಯಸ್ಸಿನ ವಿದ್ಯಾರ್ಥಿಗಳ ಮುಂದೆ ಇಡುವುದು ಶೈಕ್ಷಣಿಕ ಪ್ರಮಾದವಾಗುವುದು. ಹಿಂದೂ ಧರ್ಮವನ್ನು ಎತ್ತಿ ಹೇಳುವಾಗ ಮುಸಲ್ಮಾನ ವಿದ್ಯಾರ್ಥಿಗಳೂ ಕ್ರಿಶ್ಚಿಯನ್ ಧರ್ಮದ ಬಗ್ಗೆ ಹೇಳುವಾಗ ಮತ್ತುಳಿದ ಧರ್ಮದವರೂ ಅಸಡ್ಡೆ ಮಾಡುವ ಸಂಭವ ಹೆಚ್ಚಾಗಿರುವುದು. ಒಂದು ಧರ್ಮದ ಲೌಕಿಕ ಆಚರಣೆಯು ಬೇರೊಂದು ಧರ್ಮದ ಆಚರಣೆಗೆ ಪ್ರತಿಸ್ಪರ್ಧಿಯಾಗಿ ನಿಲ್ಲಬಹುದು. ಆದುದರಿಂದ ಸರ್ವ ಧರ್ಮಗಳಿಗೆ ಸಮಾನನೂ ಸಮಪ್ರೇಮವುಳ್ಳವನೂ ಆದ ದೇವರು, ಸತ್ಯ, ಅಸ್ತೇಯ ( ಕಳವು ಮಾಡದೆ ಇರುವುದು ), ಅಹಿಂಸೆ, ಮಾನವತೆ ಈ ಮೊದಲಾದ ವಿಷಯಗಳನ್ನು ಮುಖ್ಯವಾಗಿಟ್ಟುಕೊಂಡು ಧಾರ್ಮಿಕ ಶಿಕ್ಷಣವನ್ನು ಕೊಡುವುದು ವಿಹಿತವಾಗುವುದು. ಪರಮಾತ್ಮನ ಅಗಾಧವಾದ ಮಹಿಮೆಯನ್ನು ಅಪ್ರತ್ಯಕ್ಷ ರೀತಿಯಿಂದ ತೋರಿಸುವುದಕ್ಕಾಗಿ ಉನ್ನತವಾದ ಗಗನಚುಂಬಿತಪರ್ವತಗಳಿಗೂ ರಮಣೀಯದೃಶ್ಯಗಳಿಗೂ ಬೆರಗುಗೊಳಿಸುವ ನೈಸರ್ಗಿಕ ಚಮತ್ಕೃತಿಗಳಿದ್ದ ಸ್ಥಳಗಳಿಗೂ ಮುಂಜಾವ ಸಂಜೆಗಳಲ್ಲಿ ವಿದ್ಯಾರ್ಥಿಗಳನ್ನು ಕರೆದುಕೊಂಡು ಹೋಗಿ, ಅವರಿಗೆ ಭಗವಂತನ ಮಹಿಮೆಯು ಅರಿವಾಗುವಂತೆ ವಿಷಯವನ್ನು ನಿರೂಪಿಸಬೇಕು.

ಶಾರೀರಿಕ ಮತ್ತು ನೈತಿಕ ಶಿಕ್ಷಣವನ್ನು ಪಡೆದ ವ್ಯಕ್ತಿಯು ಧರ್ಮದಲ್ಲಿ ಇರುವ ತನ್ನ ಹೊಣೆಯನ್ನು ಹೇಗೆ ವಹಿಸಿ ಧರ್ಮಕಾರ್ಯದಲ್ಲಿ ದಕ್ಷನಾಗಬೇಕು ? ಧಾರ್ಮಿಕ ಶಿಕ್ಷಣದ ತೊಡಕನ್ನು ಶಾಲೆಗಳಲ್ಲಿಯ ಶಿಕ್ಷಕರು ಹೇಗೆ ಬಿಡಿಸಬೇಕು ? ಧಾರ್ಮಿಕ ಸ್ಫೂರ್ತಿಯನ್ನೂ ಶಾಂತಿ ದೊರೆಯದ ಆತ್ಮಕ್ಕೆ ಧರ್ಮವು ಕೊಡಬಹುದಾದ ಸಮಾಧಾನವನ್ನೂ ಧಾರ್ಮಿಕ ಬಲದಿಂದ ಐಕ್ಯಗೊಳಿಸುವ ಧರ್ಮದ ಉಜ್ವಲಶಕ್ತಿಯನ್ನೂ ಯಾರೂ ಅಲ್ಲಗಳೆಯರು. ಧರ್ಮದ ತಿರುಳನ್ನು ಎಲ್ಲ ಧರ್ಮದ ವಿದ್ಯಾರ್ಥಿಗಳಿಗೆ ರುಚಿಸುವಂತೆ ತಿಳುಹುವುದನ್ನು ಕಂಡುಹಿಡಿಯಬೇಕಾದರೆ, ಶಿಕ್ಷಕರು ಯಾವ ರಾಜಮಾರ್ಗವನ್ನು ಅವಲಂಬಿಸಬೇಕು ? ಸದ್ಯದ

ಜಗತ್ತಿನ ಪರಿಸ್ಥಿತಿಯನ್ನು ಸೂಕ್ಷ್ಮದೃಷ್ಟಿಯಿಂದ ನೋಡಿದರೆ, ಶಾಸ್ತ್ರೀಯ ಶೋಧನೆಗಳ ಮೂಲಕವಾಗಿ ವಿಶಾಲವಾದ ಪೃಥ್ವಿಯು ಆಕುಂಚಿತವಾಗುತಿದೆಯೆಂದು ಕಂಡುಬರುವುದು. ಕೆಲವು ವರ್ಷಗಳ ಹಿಂದೆ, ತೀರ ಪಶ್ಚಿಮಕ್ಕಿದ್ದ ದೇಶಗಳೂ ತೀರ ಪೂರ್ವಕ್ಕಿದ್ದ ದೇಶಗಳೂ ಒಂದನ್ನೊಂದು ಚೆನ್ನಾಗಿ ತಿಳಿದಿರಲಿಲ್ಲ. ಅವುಗಳಲ್ಲಿಯ ಸಂಸ್ಕೃತಿಗಳ ಅಥವಾ ಧಾರ್ಮಿಕ ವೈಶಿಷ್ಟ್ಯಗಳ ಪರಸ್ಪರವಾದ ತಿಕ್ಕಾಟವಾಗಿದ್ದಿಲ್ಲ. ಈಗ ಶಾಸ್ತ್ರೀಯ ಆನುಕೂಲ್ಯಗಳ ಫಲವಾಗಿ ಜಗತ್ತಿನ ಎಲ್ಲ ಧರ್ಮಗಳು ಸಂಪರ್ಕವಿಶೇಷದಿಂದ ವಿಸ್ತೃತ ವಿಚಾರಗಳಿಗೆ ಎಡೆಕೊಟ್ಟು, ಪೌರ್ವಾತ್ಯ, ಪಾಶ್ಚಾತ್ಯ ಧರ್ಮಗಳು ತಾಕಲಾಡಿ, ಸರ್ವಧರ್ಮಗಳಿಗೂ ಸಾಮಾನ್ಯವಾದ ತತ್ತ್ವಗಳು ತಮ್ಮ ಪ್ರಾಬಲ್ಯವನ್ನು ಬೀರಿ, **ವಿಶ್ವಧರ್ಮ**ವೆಂಬ ನವಯುಗದ ಧರ್ಮವು ಉದಯಿಸಿ, ರೂಢಿಯಲ್ಲಿ ಬಂದು, ಅದೇಕೆ ಲೋಕಪ್ರಿಯವಾಗಬಾರದೆಂಬ ಪ್ರಶ್ನೆಯು ಉದ್ಭವಿಸಿದೆ. ಒಂದು ಧರ್ಮದವರು ಎರಡನೆಯ ಧರ್ಮದ ಬಗ್ಗೆ ಅಸಹಿಷ್ಣುತೆಯನ್ನು ತಾಳಿದರೆ, ಅವರಿಗೆ ಆ ಧರ್ಮದ ಬಗ್ಗೆ ಇದ್ದ ಅಥವಾ ಇರಬಹುದಾದ ಅಜ್ಞಾನವೇ ಮೂಲಕಾರಣವೆಂದು ಧಾರಾಳವಾಗಿ ಹೇಳಬಹುದು. ಬಿಚ್ಚು ಮನಸ್ಸಿನಿಂದ ಚರ್ಚೆಮಾಡಿದರೆ, ಯಾವ ಧರ್ಮವನ್ನಾದರೂ ಆಳವಾಗಿ ಅಭ್ಯಾಸಿಸಿದರೆ, ಎಲ್ಲ ಧರ್ಮತತ್ತ್ವಗಳಲ್ಲಿ ಯಾವ ಭೇದವೂ ಅನೈಕ್ಯದ ಲಕ್ಷಣಗಳೂ ಕಂಡುಬರುವುದಿಲ್ಲ. ಇಂಥ ಸರ್ವಮಾನ್ಯತೆಯನ್ನು ಪಡೆದ ವಿಶ್ವಧರ್ಮದ ತತ್ತ್ವವನ್ನು ಬೀರುವ ಸಾಮಾನ್ಯ ಪ್ರಾರ್ಥನೆ, ವಿಶ್ವಧರ್ಮದ ಮೇಲಿನ ಪ್ರವಚನ, ವಿದ್ಯಾರ್ಥಿಗಳ ಧಾರ್ಮಿಕ ಚರ್ಚೆ, ಸ್ವತಂತ್ರ ಅಭಿಪ್ರಾಯಗಳುಳ್ಳ ಧಾರ್ಮಿಕ ವಿಷಯಗಳ ಮೇಲಿನ ನಿಬಂಧ, ಲೇಖನ—ಮುಂತಾದ ಯೋಜನೆಗಳಿಂದ ಶಾಲೆಗಳಲ್ಲಿ ಧಾರ್ಮಿಕಶಿಕ್ಷಣವನ್ನು ಕೊಡುವ ವ್ಯವಸ್ಥೆಯನ್ನು ಮಾಡಿದರೆ, ಶಿಕ್ಷಕರನ್ನೆದುರಿಸಿದ ತೊಡಕು ತಾನಾಗಿಯೇ ಬಿಡುವುದು.

ಜಗತ್ತಿನಲ್ಲಿಯ ಸರ್ವಧರ್ಮಗಳ ಸಾರವನ್ನು ತಿಳಿದುಕೊಳ್ಳುವುದು ಎಲ್ಲ ವಿದ್ಯಾರ್ಥಿಗಳ ದೃಷ್ಟಿಯಿಂದ ಅವಶ್ಯವಿದೆ. ಸರ್ವಧರ್ಮಗಳ ಸಾರವೇ ವಿಶ್ವಧರ್ಮದ ಸ್ವರೂಪ. ಬೇರೆ ಬೇರೆ ಧರ್ಮಗಳ ವಿದ್ಯಾರ್ಥಿಗಳು ಪರಸ್ಪರ ಸಹಾನುಭೂತಿಯಿಂದ ನಡೆದುಕೊಳ್ಳಬೇಕು. ಅನ್ಯ ಧರ್ಮಗಳ

ತಿರುಳನ್ನು ತಿಳಿದುಕೊಳ್ಳಬೇಕು. ಎಲ್ಲ ಧರ್ಮಗಳೂ ಒಬ್ಬ ಪರಮಾತ್ಮನ ಕಡೆಗೆ ಹೋಗುವ ಬೇರೆ ಬೇರೆ ದಾರಿಗಳೆಂಬುದನ್ನು ಅರಿತುಕೊಳ್ಳಬೇಕು. ವಿದ್ಯಾರ್ಥಿಗಳು ವಿಶ್ವಧರ್ಮೋಪಾಸಕರು ಆಗಬೇಕಾದರೆ, ಸಾಮಾನ್ಯ ಪ್ರಾರ್ಥನೆಯನ್ನುಳಿದು ಬೇರೊಂದು ಸಾಧನವಿಲ್ಲ. ಪ್ರಾರ್ಥನೆಯ ಮಹತ್ತ್ವವು ಮಿಗಿಲಾದುದೆಂಬುದು ನಿರ್ವಿವಾದ ವಿಷಯ. ವಿಶ್ವಕವಿ ರವೀಂದ್ರನಾಥ ಠಾಕೂರರಿಗೆ—ವಿಶ್ವಧರ್ಮವನ್ನು ಪ್ರಚಾರದಲ್ಲಿ ತರ ಬೇಕೆಂದಿದ್ದ, ತರಲು ಹೆಣಗಿದ ರವೀಂದ್ರನಾಥರಿಗೆ—ಪ್ರೇರಣೆಯನ್ನಿತ್ತ ಕಬೀರದಾಸರು ಈ ಅಂಧಕಾರಮಯವಾದ ಜಗತ್ತಿನಿಂದ ಪಾರಾಗುವು ದಕ್ಕೆ ಪ್ರಾರ್ಥನೆ, ಭಜನೆಯೇ, (**अंधेरी दुनिया भजन बिना कैसे तरियोरे**) ಮುಖ್ಯವಾದುದೆಂದು ಹೇಳಿದ್ದಾರೆ. ಅದಕ್ಕಾಗಿಯೆ ರವೀಂದ್ರ ನಾಥರು 'ಗೀತಾಂಜಲಿ'ಯಲ್ಲಿ ಬಗೆಬಗೆಯಾಗಿ ಪರಮಾತ್ಮನನ್ನು ಪ್ರಾರ್ಥಿಸಿದ್ದಾರೆ. ಮಹಾತ್ಮಾಗಾಂಧಿಯವರೂ ಪ್ರಾರ್ಥನೆಗೆ ಹೆಚ್ಚು ಪ್ರಾಶಸ್ತ್ಯವನ್ನು ಕೊಟ್ಟಿದ್ದಾರೆ. ಅವರ 'ಆಶ್ರಮ ಭಜನಾವಲಿ'ಯಲ್ಲಿ ವಿಶ್ವಧರ್ಮೀಯ ಪ್ರಾರ್ಥನೆಗಳಿವೆ. ಇಂಥ ಪ್ರಾರ್ಥನೆಗಳಿಗೆ ಎಲ್ಲ ಶಾಲೆ ಗಳಲ್ಲಿ ಸ್ಥಾನವು ದೊರೆತರೆ ಚೆನ್ನು. ಇಂಥ ಸಾಮಾನ್ಯಧರ್ಮದ ಪ್ರಾರ್ಥನೆ ಯಿಂದ ಜಾತೀಯ ವೈಮನಸ್ಸು, ಧರ್ಮದ ಮತ್ಸರ, ಭೇದಭಾವಗಳು ಇಲ್ಲದಂತಾಗಿ ವಿಶ್ವಬಾಂಧವ್ಯವು ಬೆಳೆಯುವುದು; ವಿಶ್ವದಲ್ಲಿ ಸುಖಶಾಂತಿ ಗಳು ನೆಲಸುವುವು. ಎಲ್ಲ ಧರ್ಮಗಳಿಗೂ ಸಾಮಾನ್ಯವಾದ ಲಕ್ಷಣಗಳುಳ್ಳ ಪ್ರಾರ್ಥನೆಯನ್ನು ಶಾಲೆಗಳಲ್ಲಿ ನಡೆಯಿಸಿ, ವಿಶ್ವಧರ್ಮವನ್ನು ವ್ಯವಹಾರ ದಲ್ಲಿ ತರುವುದೇ ಸ್ತುತ್ಯಮಾರ್ಗವೆನಿಸುವುದು. ಈ ವಿಶ್ವಧರ್ಮದ ತತ್ತ್ವ ಗಳನ್ನು ಕಲಿಸುವ ಧಾರ್ಮಿಕ ಶಿಕ್ಷಣಕ್ಕೆ ಶ್ರೇಷ್ಠ ಸ್ಥಾನವಿರಬೇಕು.

ಈ ತರದ ಶಿಕ್ಷಣದಿಂದ ಧಾರ್ಮಿಕ ಶಿಕ್ಷಣವನ್ನು ಹೇಗೆ ಕೊಡ ಬೇಕೆಂಬ ಪ್ರಶ್ನೆಯನ್ನು ಅನಾಯಾಸವಾಗಿ ಬಿಡಿಸಿದಂತೆ ಆಗಿ, ಧಾರ್ಮಿಕ ವಿಶಾಲದೃಷ್ಟಿಯು ವಿದ್ಯಾರ್ಥಿಗಳ ಮನಸ್ಸಿನಲ್ಲಿ ಬೇರೂರಿ, ಸಮಾಜ ರಚನೆಯ ಸೌಕರ್ಯಕ್ಕೂ, ಆರ್ಥಿಕ, ರಾಜಕೀಯ, ವಾತಾವರಣದಲ್ಲಿಯ ಅಶಾಂತತೆಯ ನಾಶಕ್ಕೂ, ದೇಶದ ಐಕ್ಯಕ್ಕೂ, ಬಲವಾದ ಸಹಾಯವಾಗಿ,

ಎಲ್ಲರೂ ನೆಮ್ಮದಿಯಿಂದಲೂ ಸುಖಶಾಂತಿಗಳಿಂದಲೂ ಬಾಳುವ ದಿನಗಳು ಖಂಡಿತವಾಗಿ ಬರುವುವೆನ್ನುವುದರಲ್ಲಿ ಸಂದೇಹವಿಲ್ಲ.

ಒಟ್ಟಿನಲ್ಲಿ ಸುಸಂಘಟಿತ ಶಾರೀರಿಕ ಬಲ, ಅಚಲವಾದ ನೈತಿಕ ಧೈರ್ಯ, ಅಂತಃಕರಣಪ್ರೇರಿತಧಾರ್ಮಿಕವೈಶಾಲ್ಯ ಇವು ಯಾವ ವ್ಯಕ್ತಿಗೆ, ಯಾವ ಸಮಾಜಕ್ಕೆ, ಯಾವ ರಾಷ್ಟ್ರಕ್ಕೆ ಇಷ್ಟಾರ್ಥವನ್ನು ದಯಪಾಲಿಸಲಿಕ್ಕಿಲ್ಲ? ಈ ಉದ್ದೇಶವನ್ನು ಕೆಳಗಿನ ಪ್ರಾರ್ಥನೆಯಿಂದ ಸಾಧಿಸಲು ಶಕ್ಯವಿದೆ.

'ಅಸತ್ಯದಿಂದ ಸತ್ಯದ ಕಡೆಗೆ ನನ್ನನ್ನು ಸಾಗಿಸು, ಕತ್ತಲಿಂದ ಬೆಳಕಿನ ಕಡೆಗೆ ನನ್ನನ್ನು ನಡೆಯಿಸು, ಮೃತ್ಯುವಿನಿಂದ ಅಮೃತದ ಕಡೆಗೆ ನನ್ನನ್ನು ಹೋಗಿಸು'

**'असतो मा सद्गमय, तमसो मा ज्योतिर्गमय,**
**मृत्योर्माअमृतं गमय'**

೪

# ಶಿಕ್ಷಣ-ಮಾನಸ-ಶಾಸ್ತ್ರಗಳ ಸಂಬಂಧ

" ಮೈಮನಗಳಿಂದ ಕೂಡಿದ ಜೀವಿಯು " ತನ್ನ ಕಾರ್ಯಗಳನ್ನು ಮಾಡುವಾಗ ಅನುಸರಿಸುತ್ತಿರುವ ತತ್ತ್ವಗಳ ಜ್ಞಾನವನ್ನು ಮಾನಸ ಶಾಸ್ತ್ರವು ಮಾಡಿಕೊಡುವುದು. ದೇಹದ ಚಲನವಲನಗಳ ಮತ್ತು ಮಾನಸಿಕ ಚಟುವಟಿಕೆಗಳ ನಿಕಟಸಂಬಂಧವನ್ನು ಸಂಪೂರ್ಣವಾಗಿ ನೋಡಿದರೆ, ಮಾನಸಶಾಸ್ತ್ರಕ್ಕೂ ದೇಹಶಾಸ್ತ್ರಕ್ಕೂ ಇರುವ ಅಂತರವು ಕಂಡುಬರುವುದು. ಪ್ರಾಣಿಯು ಅಥವಾ ವಿಚಾರಶಕ್ತಿಯುಳ್ಳ ಮನುಷ್ಯಜೀವಿಯು ಹೇಗೆ ಮತ್ತು ಏಕೆ ವಿಶಿಷ್ಟರೀತಿಯಿಂದ ನಡೆಯುವನೆಂಬುದನ್ನು ಮಾನಸ ಶಾಸ್ತ್ರವು ಪರಿಶೀಲಿಸುವುದು.

ಸಸ್ಯಶಾಸ್ತ್ರಜ್ಞಾನವು ತೋಟಿಗನಿಗೆ ಹೇಗೆ ಆವಶ್ಯಕವೊ ಹಾಗೆಯೆ ಶಿಕ್ಷಕನಿಗೆ ಮಾನಸಶಾಸ್ತ್ರಜ್ಞಾನವು ಅತ್ಯಾವಶ್ಯಕವು. ವಿದ್ಯಾರ್ಥಿಗಳು ಆದರ್ಶಜೀವಿಗಳಾಗುವಂತೆ ಮಾಡಬಯಸುವ ಶಿಕ್ಷಕರು ಮಾನಸಶಾಸ್ತ್ರವನ್ನು ಅರಿತುಕೊಳ್ಳಲೇಬೇಕು.

ಈ ಶಾಸ್ತ್ರದ ಮಹತ್ತ್ವವನ್ನೂ ಆವಶ್ಯಕತೆಯನ್ನೂ ಪೂರ್ವಜರೂ ಕಂಡುಹಿಡಿದಿದ್ದಾರೆ. **ಪ್ಲೇಟೊ** ಎಂಬ ತತ್ತ್ವಜ್ಞಾನಿಯು ಶಿಕ್ಷಣದ ಮೂಲ ಉದ್ದೇಶವು ತರುಣ ಸ್ತ್ರೀಪುರುಷರಿಗೆ ಉತ್ತಮಶೀಲದ ಮಹತ್ತ್ವವನ್ನು ತಿಳಿಸಿಕೊಡುವುದೆಂದೂ ಮನುಷ್ಯಸ್ವಭಾವದ ಜ್ಞಾನವಿಲ್ಲದವರಿಂದ ಶಿಕ್ಷಣವು ಸಾಧ್ಯವಲ್ಲವೆಂದೂ ಪ್ರತಿಪಾದಿಸಿದ್ದಾನೆ. **ರೂಸೊ** ಎಂಬ ಶಿಕ್ಷಣಶಾಸ್ತ್ರಜ್ಞನು ತನ್ನ ಕಾಲದಲ್ಲಿ ಮಾನಸಶಾಸ್ತ್ರದ ಉಪಯೋಗವನ್ನು ಶಿಕ್ಷಣಕಾರ್ಯದಲ್ಲಿ ಮಾಡಲಿಲ್ಲವೆಂದು ವಿಷಾದಿಸಿದನು. **ಪೆಸ್ಟಾಲಜಿ** ಎಂಬವನು " ಸಮನ್ವಯವುಳ್ಳ (ಸರ್ವತೋಮುಖವಾದ), ಸ್ವಾಭಾವಿಕವಾದ ಉತ್ತರೋತ್ತರವಾದ ಅಭಿವೃದ್ಧವಾಗುವ ಮಕ್ಕಳ ವಿಕಾಸವೇ " ಶಿಕ್ಷಣದ ಮುಖ್ಯೋದ್ದೇಶವೆಂದು ಸಾರಿದ್ದಾನೆ. **ಹರ್ಬಾರ್ಟನು**

ತನ್ನ ಕಾಲದ ಶಿಕ್ಷಣವು ಮಾನಸಶಾಸ್ತ್ರದ ಆಧಾರದಮೇಲೆ ನಿಲ್ಲದೆ ಇದ್ದುದರಿಂದ ಯಶಸ್ವಿಯಾಗಿರಲಿಲ್ಲವೆಂದು ಹೇಳಿದ್ದಾನೆ. **ಹರ್ಬರ್ಟ ಸ್ಪೆನ್ಸರನು** ತನ್ನ "ಶಿಕ್ಷಣಮೀಮಾಂಸೆ"ಯೆಂಬ ಗ್ರಂಥದಲ್ಲಿ ಮಾನಸಶಾಸ್ತ್ರಕ್ಕೇ ಅಗ್ರಸ್ಥಾನವನ್ನು ಕೊಟ್ಟಿದ್ದಾನೆ. ಮಕ್ಕಳ ಮನಗಳ ಒಲವುಗಳು, ಪ್ರವೃತ್ತಿಗಳು, ಶಿಕ್ಷಕನಿಗೆ ಸಂಪೂರ್ಣವಾಗಿ ಗೊತ್ತಿರುವದು ಅವಶ್ಯವೆಂದು ಅವನು ತಿಳಿದಿದ್ದನು. ಕಲಿಯುವ ಮಕ್ಕಳಲ್ಲಿ ಯಾವುದಾದರೊಂದು ವಿಷಯದ ಬಗೆಗೆ ಅಭಿರುಚಿಯನ್ನು ಹುಟ್ಟಿಸಬೇಕಾದರೆ, ಅವರಲ್ಲಿರುವ ಆಂತರಿಕವಾದ ಒಲವುಗಳ ಸಾಹಾಯ್ಯದಿಂದ ಸ್ವಯಂಸ್ಫೂರ್ತಿಪ್ರೇರಿತವಾದ ಚಟುವಟಿಕೆಗಳನ್ನು ಹುಟ್ಟಿಸಬೇಕೆಂದು **ಫ್ರೊಬೆಲ್ಲನು** ಅಭಿಪ್ರಾಯಪಡುತ್ತಾನೆ. ಶಿಕ್ಷಕನು ಪ್ರಾಯೋಗಿಕ ಮಾನಸಶಾಸ್ತ್ರದ ಅಭ್ಯಾಸವನ್ನು ಹೆಚ್ಚುಹೆಚ್ಚಾಗಿ ಮಾಡಿದಂತೆ ಶಿಕ್ಷಣದ ಕಾರ್ಯವು ಹೆಚ್ಚುಹೆಚ್ಚಾಗಿ ಯಶಸ್ವಿಯಾಗುವುದೆಂದು **ಡಾ. ಮಾಂಟೇಸರಿಯು** ಹೇಳುತ್ತಾಳೆ. ಮಗುಗಳ ಮನದೊಲವಿನ ಚಲನವಲನಗಳಲ್ಲಿ ಯಾವ ಮಹತ್ತ್ವದ ಸಂದರ್ಭಗಳಲ್ಲಿ ಶಿಕ್ಷಿಕೆಯು (ಮಾರ್ಗದರ್ಶಕಳು) ಅವರಿಗೆ ಸರಿಯಾದ ದಾರಿಯನ್ನು ತೋರಿಸಬಹುದೆಂಬುದನ್ನು ತಿಳಿಯಬೇಕಾದರೆ, ಮಾನಸಶಾಸ್ತ್ರಜ್ಞಾನವನ್ನು ಅವಳು ಚೆನ್ನಾಗಿ ಮಾಡಿಕೊಂಡಿರಲೇಬೇಕೆಂದು ಮಾಂಟೇಸರಿಯು ತಾನು ಅನುಗೊಳಿಸಿದ ಶಿಕ್ಷಣಪದ್ಧತಿಯನ್ನು ವಿವರಿಸುವಾಗ 'ಸಾರಿ ದೂರಿ' ಹೇಳಿದ್ದಾಳೆ. ಆಕೆಯು ಅಣಿಮಾಡಿದ ಶಿಕ್ಷಣಕ್ರಮದಲ್ಲಿ ಮಾನಸಶಾಸ್ತ್ರದ ತಿಳುವಳಿಕೆಯು ಇದ್ದರೆ ಮಾತ್ರ ಮಕ್ಕಳ ಸ್ವಯಂಪ್ರೇರಿತವಾದ ಚಟುವಟಿಕೆಗಳು ನಡೆದಾಗ ಯಾವ ಮಹತ್ತ್ವದ ಪ್ರಸಂಗದಲ್ಲಿ ಶಿಕ್ಷಿಕೆಯು ಅಥವಾ ಮಾರ್ಗದರ್ಶಕಳು ಕೈಹಾಕಬೇಕೆಂಬುದನ್ನು ತಿಳಿದುಕೊಳ್ಳಲು ಅನುವಾಗುವುದು.

ಶಿಕ್ಷಣವೆಂದರೆ 'ಮನಸ್ಸನ್ನು ಜ್ಞಾನಭಾಂಡಾರದಿಂದ ತುಂಬುವುದು' ಎಂಬ ಹಳೆಯ ಕಲ್ಪನೆಯು ಈಗ ಮಾಯವಾಗುತ್ತಿದೆ. ಜೀವಿಯು ಸ್ವಯಂಸ್ಫೂರ್ತಿಯಿಂದ ಬೆಳೆಯಬೇಕೆಂದೇ ನೂತನಶಿಕ್ಷಣದ ನಿರ್ಬಂಧ. ಶಾಲೆಯಲ್ಲಿಯ ಚಟುವಟಿಕೆಗಳು 'ಶಿಶುಪ್ರಾಧಾನ್ಯ' ತತ್ತ್ವವನ್ನೇ

ಅನುಸರಿಸುವುವು. ಶಿಕ್ಷಕನು ಮೇಲ್ವಿಚಾರಕ್ಕಾಗಿ ಬೆಂಬಲಿಗನಾಗಿ ನಿಂತುಕೊಂಡು, ಶಿಶುವಿನ ಸರ್ವತೋಮುಖವಾದ ಪ್ರಗತಿಯಾಗುವಂತೆ ಯತ್ನಿಸುವನು. ಪರಿಸ್ಥಿತಿಯನ್ನು ತನ್ನ ಧ್ಯೇಯಕ್ಕನುಸಾರವಾಗಿ ಮಾರ್ಪಡಿಸುವುದೇ ಅವನ ಮುಖ್ಯ ಕರ್ತವ್ಯ. ಶಿಶುಗಳ ವರ್ತನೆಯು ಸುತ್ತಮುತ್ತಲಿನ ಪರಿಸ್ಥಿತಿಯ ಮೇರೆಗೆ ಹೇಗೆ ಬದಲಾಗುತ್ತ ಹೋಗುವುದೆಂಬುದನ್ನು ತಿಳಿದುಕೊಂಡು, ಅದರ ಸರಿಯಾದ ಅನುಭವಗಳು ಅವರಿಗೆ ಸಾಧ್ಯವಾಗುವಂತೆ ಮಾಡಿ, ಕ್ರಮಬದ್ಧ ಜ್ಞಾನಾರ್ಜನೆಯು ಅವರಿಂದ ಆಗುವಂತೆ ಶಿಕ್ಷಕರು ಶಿಕ್ಷಣ ಕಾರ್ಯವನ್ನು ನಡೆಯಿಸಬೇಕು.

ಮಾನಸಶಾಸ್ತ್ರದ ಆಧಾರವಿಲ್ಲದೆ ಸಿದ್ಧಗೊಳಿಸಿದ ಶಿಕ್ಷಣಕ್ರಮಗಳು ಅಸಾಧುವೆಂದೂ ತಾಂತ್ರಿಕವೆಂದೂ ಸರ್ವರ ಅಭಿಪ್ರಾಯ. ಶಿಕ್ಷಣದ ತತ್ತ್ವಗಳನ್ನೂ ನಿಯಮಗಳನ್ನೂ ಗ್ರಹಿಸಬೇಕಾದರೆ ಶಿಕ್ಷಕನು ಮನಸ್ಸಿನ ಅಭ್ಯಾಸವನ್ನು ಚೆನ್ನಾಗಿ ಮಾಡಿರಲೇಬೇಕು. ಅದರ ಸಾಹಾಯ್ಯದಿಂದಲೆ ಶಿಕ್ಷಣಪದ್ಧತಿಗಳಲ್ಲಿಯ ಗುಣದೋಷಗಳನ್ನು ತಿಳಿಯಲು ಅನುಕೂಲವಾಗುವುದು. ಪಠ್ಯವಿಷಯಗಳನ್ನು ನಿಶ್ಚಯಿಸುವಾಗ ಈ ಶಾಸ್ತ್ರದ ಅಭ್ಯಾಸದ ಮಹತ್ತ್ವವು ಕಂಡುಬರುವುದು. ಮನದ ಬೆಳವಣಿಗೆಯ ಮೆಟ್ಟಿಲುಗಳನ್ನು ಅರಿಯದ ಶಿಕ್ಷಕನು ಯಾವ ಮಟ್ಟದ ವಿದ್ಯಾರ್ಥಿಗಳಿಗೆ ಯಾವ ಬಗೆಯ ವಿಷಯಗಳನ್ನು ಕಲಿಸುವುದು ಅವಶ್ಯ, ಇಲ್ಲವೆ ಅನವಶ್ಯ ಎಂಬುದನ್ನು ಅಧಿಕಾರವಾಣಿಯಿಂದ ಹೇಳಲಾರನು. ಶಿಕ್ಷಣಮೀಮಾಂಸೆಯು ಅಥವಾ ಶಿಕ್ಷಣಸಿದ್ಧಾಂತವು ಶಿಕ್ಷಣದ ಉದ್ದೇಶವನ್ನು ನಿರ್ಧರಿಸಲು ಹವಣಿಸುವುದು. ಆದರೆ ಮಾನಸಶಾಸ್ತ್ರದ ಬೆಂಬಲವಿಲ್ಲದೆ ಯಾವ ಧ್ಯೇಯಗಳನ್ನೂ ಅದು ನಿಶ್ಚಿತವಾಗಿ ನಿರ್ಣಯಿಸುವದು ಸಾಧ್ಯವಿಲ್ಲ. ಹಾಗೆ ನಿರ್ಣಯಿಸುವ ಪ್ರಯತ್ನವನ್ನು ಮಾಡಿದರೆ, ಆ ಧ್ಯೇಯಗಳು ಮನೋರಾಜ್ಯದಲ್ಲಿಯ ಬಿಸಿಲ್ಗುದುರೆಗಳೆಂದೂ ಅವ್ಯಾವಹಾರಿಕವೆಂದೂ ತೋರದೆ ಇರವು.

ಸಾರಾಂಶವಿಷ್ಟೆ—ಮಾನಸಶಾಸ್ತ್ರವು ಶಿಕ್ಷಣವ್ಯವಸಾಯದ ಪ್ರತಿಯೊಂದು ಅಂಗದಲ್ಲಿಯೂ ಅವಶ್ಯವಾಗಿದೆ. ಶಿಕ್ಷಣಕಾರ್ಯದಲ್ಲಿ ಪ್ರತ್ಯಕ್ಷ ಭಾಗವನ್ನು ವಹಿಸುವವರು ವಿದ್ಯಾರ್ಥಿಗಳ ಮಾರ್ಗದರ್ಶಕರಾಗುವಂತೆ

ಅದು ಸಾಹಾಯ್ಯವನ್ನು ನೀಡುವುದು; ಇದರಿಂದ ಶಿಕ್ಷಣಪದ್ಧತಿಯನ್ನು ನಿರ್ಣಯಿಸುವವರಿಗೆ ಕಲಿಯುವವರ ಮನಸ್ಸಿನ ಮೇಲೆ ಕಲಿಸುವ ವಿಶಿಷ್ಟ ಪದ್ಧತಿಯು ಯಾವ ಪರಿಣಾಮವನ್ನು ಉಂಟುಮಾಡಬಹುದೆಂಬುದನ್ನು ತಿಳಿಯಲು ಅನುಕೂಲವಾಗುವುದು. ಪಠ್ಯವಿಷಯಗಳನ್ನು ಬಾಲಕರ ಬೇರೆ ಬೇರೆ ಅವಸ್ಥೆಗಳಿಗೆ ಅನುಸರಿಸಿ ಸಿದ್ಧಪಡಿಸುವಾಗ ಈ ಶಾಸ್ತ್ರದ ಉಪಯೋಗವು ಸಾಕಷ್ಟು ಆಗುವುದೆಂಬ ಮಾತು ಸಹಜಸಿದ್ಧವಾದುದು. ಶಿಕ್ಷಣ ತಜ್ಞರಿಗಂತೂ ಇದರ ಸಾಹಾಯ್ಯವಿಲ್ಲದೆ ನಡೆಯುವಂತಿಲ್ಲ.

ಶಿಕ್ಷಕನಿಗೆ ಮಾನಸಶಾಸ್ತ್ರದ ಜ್ಞಾನವು ಆವಶ್ಯಕವಾಗಿದೆ. ಅದರ ಜ್ಞಾನವಿಲ್ಲದೆ ಅವನು ತನ್ನ ಕಾರ್ಯದಲ್ಲಿ ಯಶಸ್ಸನ್ನು ಸಂಪಾದಿಸಲಾರನು. ಬಾಲಕನ ಮನಸ್ಸು ಯಾವ ಅವಸ್ಥೆಯಲ್ಲಿ ಹೇಗಿರುತ್ತದೆಂಬುದನ್ನು ಅರಿತುಕೊಂಡು ಅದಕ್ಕನುಗುಣವಾಗಿ ಅವನು ಶಿಕ್ಷಣವನ್ನು ಕೊಟ್ಟರೆ ಉಪಯುಕ್ತವಾಗುವುದು. ಶಿಕ್ಷಣಕಾರ್ಯದಲ್ಲಿ 'ಅವಧಾನ'ಕ್ಕೆ ಪ್ರಾಮುಖ್ಯವುಂಟು. ವಿದ್ಯಾರ್ಥಿಯ ಅಭಿರುಚಿಯು ಎಂತಿದೆಯೆಂಬುದನ್ನು ತಿಳಿದುಕೊಳ್ಳಬೇಕಾಗುವುದು. ವಿದ್ಯಾರ್ಥಿಯ ಅವಧಾನವು ಕಲಿಸುವಾಗ ಪಾಠದ ಕಡೆಗೆ ಇಲ್ಲದೆ ಹೋದರೆ, ಅದರ ಕಾರಣವನ್ನು ಶಿಕ್ಷಕನು ಕಂಡುಹಿಡಿದು ಅದನ್ನು ನಿವಾರಿಸಲು ಯತ್ನಿಸಬೇಕು; ಮತ್ತು ಪಾಠದ ಕಡೆಗೆ ಅಭಿರುಚಿಯನ್ನು ಹುಟ್ಟಿಸಲು ಪ್ರಯತ್ನಿಸಬೇಕು. ಇಲ್ಲವಾದರೆ, ಪಾಠದ ಕಾಲದಲ್ಲಿ ಗಲಭೆಯೆದ್ದು, ಶಿಕ್ಷಕನ ಪ್ರಯತ್ನವು ಬೋರ್ಗಲ್ಲ ಮೇಲೆ ಮಳೆಗರೆದಂತಾಗುವುದು.

ಪಾಠಕ್ರಮವನ್ನು ಗೊತ್ತುಪಡಿಸುವಾಗ ಮಾನಸಶಾಸ್ತ್ರದ ಉಪಯೋಗವು ಹೆಚ್ಚಾಗಿ ಆಗುತ್ತದೆ. ಏಕೆಂದರೆ, ಯಾವ ಯಾವ ವಯಸ್ಸಿನಲ್ಲಿ ವಿದ್ಯಾರ್ಥಿಯು ಯಾವ ಯಾವುದನ್ನು ಬಯಸುತ್ತಾನೆಂಬುದನ್ನು ಶಿಕ್ಷಕನು ಅರಿತಿರಬೇಕಾಗುತ್ತದೆ. ಬಾಲ್ಯದಲ್ಲಿ ಮಕ್ಕಳಿಗೆ ಆಟವು ಹೆಚ್ಚಾಗಿ ರುಚಿಸುತ್ತದೆ. ವಯಸ್ಸು ಹೆಚ್ಚಾಗುತ್ತ ಹೋದಂತೆ ಅವರ ಜ್ಞಾನದ ಸೀಮೆಯೂ ವಿಸ್ತಾರಗೊಂಡು ಅವರಿಗೆ ಆಟಕ್ಕಿಂತ ತಮ್ಮ ಅಭ್ಯಾಸವೇ ಹೆಚ್ಚಾಗಿ ರುಚಿಸತೊಡಗುತ್ತದೆ. ಯಾವ ಯಾವ ವಯಸ್ಸಿನಲ್ಲಿ ವಿದ್ಯಾರ್ಥಿಯು ಯಾವ

ಯಾವುದನ್ನು ಬಯಸುವನೊ ಅದನ್ನೇ ಮುಖ್ಯವಾಗಿಟ್ಟುಕೊಂಡು ಶಿಕ್ಷಣವನ್ನು ಕೊಟ್ಟರೆ ಉಪಯುಕ್ತವಾಗುವುದು. ವಿದ್ಯಾರ್ಥಿಯ ಒಲವು ಆಟದ ಕಡೆಗಿದ್ದಾಗ ಗಣಿತವನ್ನಾಗಲಿ, ಬೇರೆ ವಿಷಯವನ್ನಾಗಲಿ, ಕಲಿಸಹೋದರೆ ಅದರ ಉಪಯೋಗವಾಗದು.

ಆದುದರಿಂದ ಶಿಕ್ಷಣಕ್ಕೆ ಮಾನಸಶಾಸ್ತ್ರದ ಆವಶ್ಯಕತೆಯುಂಟೆಂಬುದನ್ನು ಶಿಕ್ಷಣಶಾಸ್ತ್ರಜ್ಞರೆಲ್ಲರೂ ಹೇಳುತ್ತಾರೆ. ಪೂರ್ವಕಾಲದಿಂದಲೂ ಈ ಶಾಸ್ತ್ರದ ಅಭ್ಯಾಸಕ್ಕೆ ಮನ್ನಣೆಯು ದೊರೆತಿದೆಯೆಂಬುದು ಮೇಲೆ ಕಾಣಿಸಿದ ರೂಸೋ, ಪೆಸ್ಟಾಲಜಿ, ಫ್ರೊಬೆಲ್, ಹರ್ಬರ್ಟ ಮೊದಲಾದ ತಜ್ಞರ ಮಾತುಗಳಿಂದ ಗೊತ್ತಾಗದೆ ಇರದು. ಈ ಮಹನೀಯರು ಮಾನಸಶಾಸ್ತ್ರದ ಉಪಯೋಗವು ಶಿಕ್ಷಣಕಾರ್ಯದಲ್ಲಿ ಹೇಗೆ ಆಗುತ್ತದೆಂಬುದನ್ನು ಕೆಳಗಿನಂತೆ ವಿವರಿಸಿದ್ದಾರೆ.

**ಪ್ಲೇಟೊ** ಎಂಬ ತತ್ತ್ವಜ್ಞಾನಿಯು "ಕಲಿಸತಕ್ಕ ವಿಷಯಗಳ ವಿವೇಚನೆ, ಕಲಿಯುವವನ ಮತ್ತು ಕಲಿಸುವವನ ಬಗ್ಗೆ ವಿಚಾರ, ಇವುಗಳಿಲ್ಲದೆ ಶಿಕ್ಷಣದ ಕಾರ್ಯವು ಯಶಸ್ವಿಯಾಗಲಾರದು. ಆದರೆ ಮುಖ್ಯವಾಗಿ ಶಿಕ್ಷಣಕಾರ್ಯದಲ್ಲಿ ಮನುಷ್ಯನ ಮನಸ್ಸಿಗೇ ಹೆಚ್ಚು ಪ್ರಾಧಾನ್ಯವಿರಬೇಕು. ಮಾನಸಿಕ ಪ್ರಗತಿಯು ಹೇಗಾಗುವುದೆಂಬುದನ್ನು ವಿಚಾರ ಮಾಡದೆ ಶಿಕ್ಷಣದ ಪದ್ಧತಿಗಳನ್ನು ವಿಚಾರಿಸುವುದು, ಪಚನಮಾಡುವ ಹೊಟ್ಟೆಯ ವಿಚಾರಮಾಡದೆ ಉತ್ತಮವಾದ ಆಹಾರವಾವುದೆಂಬುದನ್ನು ವಿಚಾರಿಸಿದಂತೆ, ಆಗುತ್ತದೆ" ಎಂದು ಹೇಳಿದ್ದಾನೆ. **ರೂಸೊ** ಎಂಬವನು "ಶಿಶುವಿನ ಒಲವುಗಳ ಅಭ್ಯಾಸಕ್ಕೆ ಮಹತ್ತ್ವವನ್ನು ಕೊಡಬೇಕಲ್ಲದೆ ವಿಷಯಕ್ಕೆ ಮಹತ್ತ್ವವನ್ನು ಕೊಡಬಾರದು" ಎಂದೂ **ಪೆಸ್ಟಾಲಜಿಯು** "ಶಿಕ್ಷಣವನ್ನು ಮಾನಸಶಾಸ್ತ್ರದ ಅಭ್ಯಾಸದ ಅಡಿಗಲ್ಲ ಮೇಲೆಯೆ ನಿಲ್ಲಿಸಬೇಕು" ಎಂದೂ **ಫ್ರೊಬೆಲ್ಲನು** "ಶಿಶುವಿನ ಸಹಜ ಪ್ರವೃತ್ತಿಗಳು ಮತ್ತು ಒಲವುಗಳು ನಿಜವಾದ ಶಿಕ್ಷಣದ ಮೂಲಸಾಧನಗಳು" ಎಂದೂ ಹೇಳಿದ್ದಾರೆ. ಈ ರೀತಿಯಾಗಿ ಮೊದಲಿನ ಶಿಕ್ಷಣಸುಧಾರಕರು ಮಾನಸಶಾಸ್ತ್ರದ ಮಹತ್ತ್ವವನ್ನು ಬಗೆಬಗೆಯಿಂದ ವ್ಯಕ್ತಗೊಳಿಸಿದ್ದಾರೆ.

ಕೆಲವರು ಮಾತ್ರ ಮಾನಸಶಾಸ್ತ್ರದ ವಿಷಯದಲ್ಲಿ ತಪ್ಪುತಿಳುವಳಿಕೆಗಳನ್ನು ಮಾಡಿಕೊಂಡಿದ್ದಾರೆ. ಮಾನಸಶಾಸ್ತ್ರವು ದರ್ಶನಶಾಸ್ತ್ರದಿಂದ ಬೇರೆಯಾಗಿದೆ; ಮನಸ್ಸು ಬೇರೆ, ಆತ್ಮ ಬೇರೆ, ಎಂದು ತಿಳಿದುಕೊಂಡಿದ್ದಾರೆ. ಪಾಶ್ಚಾತ್ಯರಲ್ಲಿಯೆ ಈ ವಿಷಯವಾಗಿ ತಪ್ಪುತಿಳುವಳಿಕೆಯು ಹೆಚ್ಚಾಗಿದೆ. ನಿಜವಾಗಿ ನೋಡಿದರೆ, ವಿಖ್ಯಾತ ತತ್ತ್ವಜ್ಞಾನಿಗಳಾದ ಪ್ಲೇಟೊ ಮತ್ತು ಅರಿಸ್ಟಾಟಲ್ ಇವರು ಅಲ್ಲಿ ದರ್ಶನದ ತಳಹದಿಯನ್ನು ಕೂಡಿಸಿದರು. ಅರಿಸ್ಟಾಟಲನು ಆತ್ಮದ ಬಗ್ಗೆ ಆಗಿದ್ದ ವಿಚಾರಗಳಿಗೆ ಒಂದು ರೂಪವನ್ನು ಕೊಟ್ಟನು. "ಮನುಷ್ಯಪ್ರಾಣಿಯ ಮುಖ್ಯ ಲಕ್ಷಣವು ಆತ್ಮ. ಆತ್ಮವಿಲ್ಲದ ಶರೀರವು ಮೃತದೇಹದಂತೆ. ಜೀವಿಯ ಇರುವಿಕೆಗೆ, ಮಾಡುವಿಕೆಗೆ, ಆಶೆ-ಆಕಾಂಕ್ಷೆಗಳಿಗೆ ಮುಖ್ಯ ಕಾರಣವು ಆತ್ಮವೇ. ಮನಷ್ಯನ ಆತ್ಮವು ತನ್ನ ಚಟುವಟಿಕೆಯನ್ನು ಸ್ಮರಣೆ, ಕಲ್ಪನಾ-ಶಕ್ತಿ, ವಿಚಾರಶಕ್ತಿ ಮುಂತಾದ ಶಕ್ತಿಗಳ ಮುಖಾಂತರವಾಗಿ ತೋರಿಸುವುದು. ಶಕ್ತಿಗಳಿಗೆ ಸ್ವತಂತ್ರವಾದ ಅಸ್ತಿತ್ವವಿಲ್ಲ. ಅವು ಅವಿಭಾಜ್ಯ ಆತ್ಮದ ಭಿನ್ನ ಭಿನ್ನ ಸ್ವರೂಪಗಳು" ಎಂದು ಅರಿಸ್ಟಾಟಲನು ಸಾರಿದನು. ಬರಬರುತ್ತ ಕೆಲವರು ಆತ್ಮಕ್ಕೆ ಎರಡು ದೆಸೆಗಳಿವೆ ಎಂದು ತಿಳಿಯತೊಡಗಿದರು— (೧) ಆಧ್ಯಾತ್ಮಿಕ (ಎಂದರೆ ಅಮರವಾದ ಆತ್ಮ ಅಥವಾ ಜೀವನದ ಜ್ಯೋತಿಗೆ ಸಂಬಂಧಿಸಿದ್ದ) ವಿಚಾರಗಳು. (೨) ಮಾನಸಿಕ (ಎಂದರೆ ಮನಸ್ಸಿಗೆ ಸಂಬಂಧಿಸಿದ) ವಿಚಾರಗಳು. ಮೊದಲನೆಯದರಿಂದ ಮನುಷ್ಯನು ಜಗತ್ತಿನ ಮೂಲ ತತ್ತ್ವದ ಸಂಬಂಧವಾಗಿ ಜ್ಞಾನವನ್ನು ಸಂಪಾದಿಸಬಲ್ಲನು; ಎರಡನೆಯದರಿಂದ ನಾನಾಸಂದರ್ಭಗಳಲ್ಲಿ ಮಾನಸಿಕ ಶಕ್ತಿಯನ್ನು ದೊರಕಿಸಬಲ್ಲನು. ಈ ರೀತಿಯಾಗಿ ಆಧ್ಯಾತ್ಮಿಕ, ಮಾನಸಿಕ ಎಂಬೆರಡು ಭೇದಗಳು ಉಂಟಾದೊಡನೆಯೆ ಆಧ್ಯಾತ್ಮಿಕ ಸ್ವರೂಪವು ಧರ್ಮಬೋಧಕರ ವಿಷಯವಾಯಿತು; ಮತ್ತು ಮಾನಸಿಕ ಸ್ವರೂಪವು ಮಾನಸಶಾಸ್ತ್ರಜ್ಞರ ವಿಷಯವಾಯಿತು.

ಅರಿಸ್ಟಾಟಲನು ಸೂಚಿಸಿದ ಮನಶ್ಶಕ್ತಿಗಳು ಮನಸ್ಸಿನ ಬೇರೆ ಬೇರೆಯಾದ ಸ್ವತಂತ್ರಶಕ್ತಿಗಳೆಂದೂ ಮಾನಸಿಕ ಜೀವನದ ಎಲ್ಲ ವ್ಯಾಪಾರವನ್ನು ತಿಳಿದುಕೊಳ್ಳಲು ಕಾರಣೀಭೂತವಾದ ಶಕ್ತಿಗಳೆಂದೂ ಜನರು ತಿಳಿಯತೊಡಗಿದರು. "ನಾವು ಕಣ್ಣುಗಳಿಂದ ವಸ್ತುಗಳನ್ನು ಹೇಗೆ

ನೋಡುವೆವೊ, ಕೈಗಳಿಂದ ಹೇಗೆ ಹಿಡಿಯುವೆವೊ ಹಾಗೆಯೆ 'ಸ್ಮರಣ' ಶಕ್ತಿಯಿಂದ ವಿಷಯಗಳನ್ನು ಮನಸ್ಸಿನಲ್ಲಿ ಹಿಡಿದಿಟ್ಟುಕೊಳ್ಳಬಲ್ಲೆವು; ವಿಚಾರಶಕ್ತಿಯಿಂದ ವಿಚಾರಿಸಬಲ್ಲೆವು; ಅನುಮಾನಶಕ್ತಿಯಿಂದ ಅನುಮಾನಿಸಬಲ್ಲೆವು" ಎಂದು ತಿಳಿಯಲಾರಂಭಿಸಿದರೆಂದು ಹೇಳಬಹುದು. ಈ ತರದ ವಿಚಾರಗಳ ಪರಿಣಾಮವು ಶಿಕ್ಷಣದ ಧ್ಯೇಯವನ್ನೇ ಮಾರ್ಪಡಿಸಿತು. ಶಿಕ್ಷಣದ ಉದ್ದೇಶವು 'ಮನಸ್ಸಿನ ನಾನಾತರದ ಶಕ್ತಿಗಳನ್ನು ಬೆಳೆಯಿಸಿ ತೀಕ್ಷ್ಣಗೊಳಿಸುವುದು' ಎಂದಾಯಿತು ಈ ಉದ್ದೇಶದಂತೆ ಕೆಲವು ಪ್ರಯತ್ನಗಳೂ ನಡೆದುವು. ವಿಶಿಷ್ಟ ವಿಷಯಗಳನ್ನು ನಿರ್ಧರಿಸದೆ, ಮನಸ್ಸಿನ ಕೆಲವು ಶಕ್ತಿಗಳನ್ನು ಕೆಲವು ವಿಷಯಗಳ ಅಭ್ಯಾಸದಿಂದ ವಶಪಡಿಸಿಕೊಳ್ಳುವುದೇ ಶಿಕ್ಷಣದ ಮುಖ್ಯ ಉದ್ದೇಶವೆಂಬ ತಪ್ಪಾದ ಕಲ್ಪನೆಯು ಜನರಲ್ಲುಂಟಾಯಿತು.

"ಮನುಷ್ಯನಿಗೆ ಚೈತನ್ಯವನ್ನು ಕೊಡುವುದೇ ಮನಸ್ಸಿನ ಮುಖ್ಯವಾದ ಕಾರ್ಯ; ಚಿತ್ತವೃತ್ತಿಗೆ ಮುಖ್ಯ ಕಾರಣ ಮನಸ್ಸು; ಮನಸ್ಸು ಕೇವಲ ಚಿತ್ತವೃತ್ತಿಯಲ್ಲಿಯೇ ಪ್ರಕಟವಾಗುತ್ತದೆ" ಎಂದು **ಡೆಕಾರ್ಟ**ನೆಂಬ ಜ್ಞಾನಿಯು ಹೇಳಿದನು. ಉಳಿದ ಜ್ಞಾನಿಗಳೂ ಚಿತ್ತವೃತ್ತಿಯನ್ನು ಕುರಿತು ವಿಚಾರಮಾಡತೊಡಗಿದರು. ಅದಕ್ಕೆ ಬಗೆಬಗೆಯ ಅರ್ಥಗಳನ್ನು ಕೊಡಲಾರಂಭಿಸಿದರು. ಅವುಗಳಲ್ಲಿ "ಜಾಗೃತಾವಸ್ಥೆಯಲ್ಲಿಯೇ ಮನುಷ್ಯನ ಚಿತ್ತವೃತ್ತಿಯು ಪ್ರಕಟವಾಗುತ್ತದೆ; ನಿದ್ರಿಸಿದಾಗ ಚಿತ್ತವೃತ್ತಿಯ ವ್ಯಾಪಾರಗಳು ತಿಳಿಯುವುದಿಲ್ಲ" ಎಂಬುದು ಸರಲವಾದುದು. ಚೈತನ್ಯವು ಆಂತರಾವಲೋಕನದಿಂದ ತಿಳಿಯುತ್ತದೆ; ಎಂದರೆ ಆಂತರಿಕವಾದ ನೋಟವೇ ಮನಸ್ಸಿನ ಸ್ಥಿತಿಯನ್ನು ಅಭ್ಯಸಿಸಲು ಮುಖ್ಯವಾದ ಸಾಧನವು. ಆದುದರಿಂದ ಕೆಲವು ಜ್ಞಾನಿಗಳು ಚೈತನ್ಯವನ್ನು ಕುರಿತು ವಿಚಾರ ಮಾಡುವುದೇ ತಮ್ಮ ಮುಖ್ಯ ಕರ್ತವ್ಯವೆಂದು ತಿಳಿದರು. ಕೆಲವೊಂದು ಕಾಲವು ಹೀಗೆ ಕಳೆದ ಬಳಿಕ "ಮನುಷ್ಯನು ತಾನು ಜರುಗಿಸುವ ಎಲ್ಲ ಕಾರ್ಯಭಾಗವನ್ನು ಚೈತನ್ಯಾವಸ್ಥೆಯಲ್ಲಿಯೇ ಮಾಡುತ್ತಾನೆ; ಮನುಷ್ಯನ ಎದುರಿನಲ್ಲಿ ಪ್ರಚೋದಕವು ಪ್ರಕಟವಾದಾಗಲೇ ಅವನು ಕೆಲವು ವಿಶಿಷ್ಟ ರೀತಿಯಿಂದ ಆಚರಿಸುವನು; ಆಚರಿಸುವಾಗ ಅವನಲ್ಲಿ ಚೇತನೆಯು

ವ್ಯಕ್ತಗೊಳ್ಳುತ್ತದೆ. ಆದುದರಿಂದ ಚೇತನೆಯ ಜ್ಞಾನವು ಮನುಷ್ಯನ ಆಚಾರದ ನಿರೀಕ್ಷಣೆಯಿಂದ ಉಂಟಾಗುತ್ತದೆ; "ಮನುಷ್ಯನ ಆಚಾರವನ್ನೂ ವ್ಯವಹಾರವನ್ನೂ ಚೆನ್ನಾಗಿ ನಿರೀಕ್ಷಿಸಿ ಅದರ ಸಾಹಾಯ್ಯದಿಂದ ಮಾನಸಿಕ ವ್ಯಾಪಾರಗಳನ್ನು ತಿಳಿದುಕೊಳ್ಳಬಹುದು" ಎಂದೂ ಕೆಲವರು ಪ್ರತಿಪಾದಿಸ ತೊಡಗಿದರು. ಹೀಗೆ ಮಾನಸಶಾಸ್ತ್ರದಲ್ಲಿ ಎರಡು ಮುಖ್ಯ ತರಗಳಾದುವು :— (೧) ಸಾಂಪ್ರದಾಯಿಕ ಮಾನಸಶಾಸ್ತ್ರ. (೨) ವ್ಯಾವಹಾರಿಕ ಮಾನಸಶಾಸ್ತ್ರ ( Behaviourism ).

ಚೈತನ್ಯದ ಮುಖ್ಯ ಸ್ವರೂಪವು ಆಚಾರವು ಎಂದು ತಿಳಿದ ಕೂಡಲೆ ಮಾನಸಶಾಸ್ತ್ರದ ಅಧ್ಯಯನದಲ್ಲಿ ಒಂದು ಹೊಸತನವು ಬಂದಿತು. ಅದರ ಅಧ್ಯಯನದ ವಿಧಾನವೂ ಬದಲಾಯಿತು. ಆಚಾರದಿಂದ ಪ್ರತಿಯೊಂದು ವಿಷಯವನ್ನು ಸಂಶೋಧಿಸಿ ನೋಡುವುದಕ್ಕೆ ಪ್ರಾರಂಭವಾಯಿತು. ಮೊದಲು ಕೇವಲ ಅಂತರಾವಲೋಕನದಿಂದ ಮನುಷ್ಯನ ಚೇತನೆಯನ್ನು ಕಂಡುಹಿಡಿಯಲು ಬರುತ್ತಿದ್ದಿತು. ಈಗ ವ್ಯವಹಾರ ಅಥವಾ ಆಚಾರದಲ್ಲಿ ಚೇತನೆಯು ಪ್ರಕಟವಾದುದರಿಂದ ಎಲ್ಲ ತೊಂದರೆಗಳೂ ದೂರಾದುವು. ಅಂತರಾವಲೋಕನವನ್ನು ಪ್ರತಿಯೊಬ್ಬ ವ್ಯಕ್ತಿಯು ಸ್ವತಃ ಮಾಡಿಕೊಳ್ಳ ಬಲ್ಲನು; ಆದರೆ ಅವನ ಆಚಾರವನ್ನು ಅನ್ಯರೂ ಪರಿಶೀಲಿಸಿ ಮನಸ್ಸಿನ ಸ್ಥಿತಿಯ ಬಗ್ಗೆ ಅಥವಾ ಆಂತರಿಕ ಹೇತುವಿನ ಬಗ್ಗೆ ಕೆಲವು ನಿರ್ಣಯಗಳನ್ನು ಕಲ್ಪಿಸಬಹುದು. ಮನುಷ್ಯನು ಉತ್ತೇಜನವು ದೊರೆತಾಗ ಕೆಲಸವನ್ನು ಸ್ಫೂರ್ತಿಯಿಂದ ಮಾಡಿಯೆ ಮಾಡುವನು; ಅವನ ಆ ಕಾರ್ಯ ಅಥವಾ ಆಚಾರವನ್ನು ನೋಡಿ, ಅವನ ಮನೋವೃತ್ತಿಯನ್ನು ಕಂಡುಹಿಡಿಯ ಬಹುದು. ಆದುದರಿಂದ, ಮಾನಸಶಾಸ್ತ್ರದಲ್ಲಿ ಪ್ರಾಯೋಗಿಕ ಶೈಲಿಯ, ಎಂದರೆ ವಾಸ್ತವಿಕ (Objective) ರೀತಿಯಿಂದ ಅಳೆದುನೋಡಬೇಕೆಂಬ ವಿಚಾರದ ಆರಂಭವಾಯಿತು. ಮನುಷ್ಯನ ಮೇಲೂ ನಾನಾ ಪ್ರಕಾರದ ಪ್ರಯೋಗಗಳು ನಡೆದುವು. ಈ ರೀತಿಯಾಗಿ ಮಾನಸಶಾಸ್ತ್ರದ ಅಧ್ಯಯನವು ರಸಾಯನಶಾಸ್ತ್ರ, ಪ್ರಾಣಿಶಾಸ್ತ್ರ ಮುಂತಾದ ಭೌತಿಕ ಶಾಸ್ತ್ರಗಳ ಅಧ್ಯಯನದಂತೆಯೆ ನಡೆದಿದೆ. ಆದರೆ ವ್ಯತ್ಯಾಸವಿಷ್ಟೇ:—ರಸಾಯನ ಮೊದಲಾದ-ಭೌತಿಕ-ಶಾಸ್ತ್ರಗಳಲ್ಲಿ ಜಡ-ವಸ್ತುಗಳ ಮೇಲೆ ಪ್ರಯೋಗವು

ಮಾಡಲ್ಪಡುತ್ತಿದೆ; ಮಾನಸಶಾಸ್ತ್ರದಲ್ಲಿ ಸಜೀವ ವಸ್ತುಗಳ ಮೇಲೆ ಪ್ರಯೋಗಗಳು ನಡೆಯುತ್ತಿವೆ.

ಮಾನಸಶಾಸ್ತ್ರದಲ್ಲಿ ಆಚಾರಕ್ಕೆ ಪ್ರಾಧಾನ್ಯವು ದೊರೆತಂದಿನಿಂದ ಶಿಕ್ಷಣಶಾಸ್ತ್ರದ ಮೇಲೂ ಆದರ ಪರಿಣಾಮವು ಸಾಕಷ್ಟಾಗಿದೆ. ಮಕ್ಕಳ ಆಚಾರಗಳ ನಿರೀಕ್ಷಣೆಯನ್ನು ಶಾಸ್ತ್ರೋಕ್ತರೀತಿಯಿಂದ ಮಾಡಲಾಗಿದೆ; ಮಾಡಲಾಗುತ್ತಲೂ ಇದೆ. ಅವರ ಮನೋವೃತ್ತಿಗಳನ್ನು ಅರಿತುಕೊಳ್ಳಲು ಬಗೆಬಗೆಯ ಪ್ರಯೋಗಗಳು ನಡೆದಿವೆ. ಬುದ್ಧಿಯ ಪ್ರಗತಿ, ಶಾರೀರಿಕ ಅಥವಾ ಮಾನಸಿಕ ದಣಿವು, ಕಲಿಯುವ ಉತ್ತಮಕ್ರಮ, ನೆನಪಿಡುವ ಶಕ್ತಿ, ಮರೆಯುವ ಸಂಭವ, ಭಾವನೆ, ಶೀಲ ಮುಂತಾದುವುಗಳ ವಾಸ್ತವಿಕ ಮಾಪನೆಗಳು ಪ್ರಚಾರದಲ್ಲಿ ಬಂದು ಶಿಕ್ಷಣಪ್ರಪಂಚದಲ್ಲಿ ಹೊಸಬೆಳಕನ್ನು ತಂದಿವೆ. ಮೇಲೆ ಹೇಳಿದ ಮಾನಸಶಾಸ್ತ್ರದ ಎರಡು ರೀತಿಗಳು ಶಿಕ್ಷಣದ ಸಮಸ್ಯೆಗಳನ್ನು ಎಷ್ಟರಮಟ್ಟಿಗೆ ಬಿಡಿಸಲು ಸಹಾಯ ವಾಗಬಹುದೆಂಬುದನ್ನು ಶಿಕ್ಷಕರೇ ನಿರ್ಣಯಿಸಬೇಕು. ಆದರೆ ಅವರು 'ಜೀವಿಸುವ ವಿಶಿಷ್ಟವ್ಯಕ್ತಿಗಳ', ಅರ್ಥಾತ್ ತಮ್ಮ ವಿದ್ಯಾರ್ಥಿಗಳ ಹಿತದ ಬಗ್ಗೆ ವಿಚಾರಿಸಬೇಕಲ್ಲದೆ ಕೆಲವೊಂದು ಪದ್ಧತಿಯ ಮಾನಸಶಾಸ್ತ್ರ ಗಳ ಗುಣಾವಗುಣಗಳನ್ನಾಗಲಿ ಯುಕ್ತಾಯುಕ್ತತೆಯನ್ನಾಗಲಿ ವಿಚಾರಿಸ ಬೇಕಾಗಿರುವುದಿಲ್ಲ; ಅಭ್ಯಸಿಸಬೇಕಾಗಿರುವುದಿಲ್ಲ. ಅವರು ಮಾನಸ ಶಾಸ್ತ್ರದ ಉಪಯೋಗವನ್ನು ಅವಶ್ಯವಾಗಿ ತಮ್ಮ ಶಿಕ್ಷಣಕ್ಷೇತ್ರದಲ್ಲಿ ಮಾಡಿಕೊಳ್ಳಬೇಕು; ಮಿತವ್ಯಯದಿಂದಲೂ ಪರಿಣಾಮಕಾರಿಯಾಗು ವಂತೆಯೂ ಕಲಿಯುವ ಅಥವಾ ಕಲಿಸುವ ನವೀನ ಸಾಧನಗಳನ್ನು ಮಾನಸಶಾಸ್ತ್ರಜ್ಞನು ತೋರಿಸಿದರೆ ಅವನ್ನು ಸ್ವೀಕರಿಸಬೇಕು. ಆದರೆ ಮಾನಸಶಾಸ್ತ್ರದ ಆಧಾರದ ಮೇಲೆಯೆ ಇಂಥ ವಿಷಯಗಳನ್ನು ಕಲಿಸ ಬೇಕೆಂದು ಅವನು ನಿರ್ಬಂಧಪಡಿಸಿದರೆ ಅವನ ಮಾರ್ಗದಂತೆಯೇ ನಡೆಯುವುದು ಶಿಕ್ಷಣಕಾರ್ಯದಲ್ಲಿ ತೊಡಕಾದೀತೇ ಹೊರತು ಶಿಕ್ಷಕನಿಗೆ ಸಹಕಾರಿಯಾಗದು. ಕೆಲವರು ಮಾನಸಶಾಸ್ತ್ರಜ್ಞರ ಸೂಚನೆ ಗಳು ಅತ್ಯವಶ್ಯವಾಗಿರುವಂತೆ ತೋರುತ್ತವೆಯೆಂದು ಹೇಳುತ್ತಾರೆ. ಅಮೇರಿಕೆಯಲ್ಲೂ ಬ್ರಿಟನದಲ್ಲೂ ಮಾನಸಶಾಸ್ತ್ರಜ್ಞರ ಸೂಚನೆಗಳನ್ನು

ಶಿಕ್ಷಣಕ್ಷೇತ್ರದಲ್ಲಿ ಕೆಲವರು ಪ್ರಯೋಗಿಸಿದ್ದಾರೆ. ಅಮೇರಿಕೆಯಲ್ಲಿ ವಿದ್ಯಾರ್ಥಿಗಳ 'ಬುದ್ಧಿಮಾಪನ'ವು ಅತಿಶಯವಾಗಿ ಬೆಳೆದುಹೋಗಿದೆ. ವಿದ್ಯಾರ್ಥಿಗಳ ಯೋಗ್ಯತೆಯನ್ನು ಸೂಚಿಸುವ ಪದ್ಧತಿಗಳೂ ಪರೀಕ್ಷೆಗಳ ಸಾಹಾಯ್ಯದಿಂದ 'ಶೋಧಿಸಿದ ಅಂಕಿಗಳೂ ವಿಪರೀತವಾಗಿ ಬೆಳೆದು ಹೋಗಿವೆ. ಈ ಕೃತ್ರಿಮ ಯೋಜನೆಗಳು ಅತಿರೇಕವಾಗಿ ಬೆಳೆಯುಹತ್ತಿ, ಶಿಕ್ಷಣದ ಧ್ಯೇಯಗಳ ಮತ್ತು ಗುಣಗ್ರಹಣದ ನಿಜವಾದ ಬೆಲೆಯು ಕಡಮೆಯಾಗತೊಡಗಿದೆ. ಆದರೆ ಅಮೇರಿಕೆಯಲ್ಲಿಯಂತೆ ಇಂಗ್ಲಂಡ್, ಸ್ಕಾಟಲಂಡ್, ಜರ್ಮನಿ ಮುಂತಾದ ದೇಶಗಳಲ್ಲಿ ಕೇವಲ ಆಚಾರಕ್ಕೂ ಬುದ್ಧಿಮಾಪನೆಗೂ ಪ್ರಾಧಾನ್ಯವು ಇಲ್ಲ; ಆಚಾರಕ್ಕೆ ತಕ್ಕ ಸ್ಥಾನವನ್ನು ಕೊಟ್ಟು ಅಂತರಾವಲೋಕನದ ಕಡೆಗೂ ಗಮನವನ್ನೀಯಲಾಗುತ್ತಿದೆ.

ಸಾರಾಂಶವೇನೆಂದರೆ, ನಮ್ಮ ಶೈಕ್ಷಣಿಕ ಉದ್ದೇಶಗಳನ್ನು ಮಿತಿಯಿಂದಲೂ ಯಶಸ್ವಿಯಾಗುವಂತೆಯೂ ಸಾಧಿಸಬೇಕಾದರೆ, ಮಾನಸ ಶಾಸ್ತ್ರವು ನೆರವಾಗಬಲ್ಲದು, ನೆರವಾಗುತ್ತಲೂ ಇದೆ ಎಂಬುದು ನಿರ್ವಿವಾದದ ಮಾತಾಗಿದೆ. ಅದು ಶಿಕ್ಷಕನ ಕೈದೀಪವೆಂದು ಎಲ್ಲ ಆಸ್ಥೆಯುಳ್ಳ ಶಿಕ್ಷಕರಿಗೆ ಹೊಳೆಯದೆ ಇರಲಾರದು.

೫

# ಶಿಕ್ಷಣದ ಧ್ಯೇಯಗಳು

ನಮ್ಮ ಶೈಕ್ಷಣಿಕ ಉದ್ದೇಶಗಳನ್ನು ಮಿತಿಯಿಂದಲೂ ಯಶಸ್ವಿಯಾಗುವಂತೆಯೂ ಸಾಧಿಸಬೇಕಾದರೆ ಮಾನಸಶಾಸ್ತ್ರದ ನೆರವು ಬೇಕು. ಆದರೆ ಆ ಶಿಕ್ಷಣದ ಧ್ಯೇಯವನ್ನು ಅಥವಾ ನಾವು ಯಾವ ಹಾದಿಯಿಂದ ಹೊರಡಬೇಕೆಂಬುದನ್ನು ನಿಶ್ಚಯಿಸಲು ಜೀವನದ ಸಿದ್ಧಾಂತದ ಕಡೆಗೆ ನಾವು ನಮ್ಮ ಗಮನವನ್ನು ತಿರುಗಿಸಬೇಕಾಗುವುದು. ಹಾಗೆಂದರೆ, ಗಹನವಾದ ಸಿದ್ಧಾಂತಗಳನ್ನೂ ಪದ್ಧತಿಗಳನ್ನೂ ತಿಳಿದುಕೊಂಡು ಅವುಗಳಲ್ಲೊಂದನ್ನು ಎತ್ತಿಕೊಳ್ಳಬೇಕೆಂದಲ್ಲ ; ಮಕ್ಕಳಿಗೆ ಶಿಕ್ಷಣವನ್ನು ಯಾವ ಉದ್ದೇಶದಿಂದ ಕೊಡಬೇಕೆಂಬುದನ್ನು ಅಥವಾ ಯಾವ ವಿಷಯಗಳ ಜ್ಞಾನವು ಅವರಿಗೆ ಉಪಯೋಗವುಳ್ಳದಾಗಬಹುದೆಂಬುದನ್ನು ಶೈಕ್ಷಣಿಕ ಸಂಸ್ಥೆಗಳು ನಿರ್ಧರಿಸಬೇಕು ; ಹಾಗೆ ಮಾಡುವುದರಿಂದ ವಿದ್ಯಾರ್ಥಿಗಳಲ್ಲಿ ಶೀಲವನ್ನೊ ವ್ಯಕ್ತಿತ್ವವನ್ನೊ ವರ್ಚಸ್ಸನ್ನೊ ಸಿದ್ಧಗೊಳಿಸಬೇಕೆಂಬ ನಮ್ಮ ಗುರಿಯನ್ನು ವ್ಯಕ್ತಪಡಿಸಿದಂತಾಗುವುದು. ಸಂಪ್ರದಾಯಾನುಯಾಯಿಗಳೂ ಸುಧಾರಕರೂ ಮನುಷ್ಯಸಂಬಂಧವಾದ ವಿಷಯಗಳನ್ನು ಸಮರ್ಥಿಸುವರು. ನೈಸರ್ಗಿಕ ವಿಷಯಗಳ ಪ್ರತಿಪಾದಕರು ಬಂಧನಸಹಿತವಾದ ಮತ್ತು ಬಂಧನರಹಿತ 'ಕಟ್ಟು' ಗಳೆಂಬ ಭೇದಗಳಿಗೆ ಮಾನವ ಜೀವನದ ಗುರಿಗಳ ಬೆಲೆಯನ್ನು ಬೇರೆ ಬೇರೆ ದೃಷ್ಟಿಯಿಂದ ಕಟ್ಟಿದುದೇ ಕಾರಣವೆಂದು ತೋರದೆ ಇರಲಾರದು. ಯಾವುದಾದರೊಂದು ಶಾಲೆಯವರು ಹುಡುಗರಿಗೆ ಸ್ವಚ್ಛತೆ ಮುಂತಾದ ಉತ್ತಮ ಗುಣಗಳ ಅಭ್ಯಾಸಗಳನ್ನು ಮಾಡಿಸುವುದಕ್ಕಿಂತ ಲೆಕ್ಕ ಮಾಡುವುದಕ್ಕಾಗಲಿ, ಕೆಲವು ಪ್ರಶ್ನೆಮಾಲೆಗಳಿಗೆ ಉತ್ತರಗಳನ್ನು ಬರೆಯಲು ಕಲಿಸುವುದಕ್ಕಾಗಲಿ ಹೆಚ್ಚಿನ ಮಹತ್ತ್ವವನ್ನು ಕೊಟ್ಟರೆ, ಅವರು ಪ್ರಪಂಚದಲ್ಲಿ ಅವಶ್ಯವಾದ ಸಿದ್ಧಾಂತವೊಂದನ್ನು ತಮ್ಮ ಉದ್ದೇಶವನ್ನಾಗಿ ಇಟ್ಟುಕೊಂಡಂತಾಯಿತು. ಮಾನಸಶಾಸ್ತ್ರಜ್ಞನು ಇಂತಹ ಪ್ರಸಂಗದಲ್ಲಿ ಲೆಕ್ಕಮಾಡುವ, ದೇಹವನ್ನೂ ಮನಸ್ಸನ್ನೂ ಶುದ್ಧವಾಗಿ ಇಟ್ಟುಕೊಳ್ಳುವ,

ಮಾಡಿಕೆಯು ಹೇಗೆ ಅಂಟಿಕೊಳ್ಳಬಹುದು ಎಂಬುದನ್ನು ಹೇಳಲು ಯತ್ನಿಸುವನು. ಆದರೆ ತತ್ತ್ವಜ್ಞಾನಿಯು ಧ್ಯೇಯಗಳ ಸಾರಾಸಾರ ವಿಚಾರವನ್ನು ಮಾಡುವನು. ಆದುದರಿಂದ, ಕಲಿಸುವ ವಿಷಯಗಳು ಅಥವಾ ಶಿಕ್ಷಣದ ಧ್ಯೇಯಗಳು ಸಿದ್ಧಿಯ ಕಡೆಗೆ ಹೋಗುವಂತೆ ಮಾಡುವಾಗ ತಾತ್ತ್ವಿಕ ವಿಚಾರವನ್ನೇ ಮಾಡಬೇಕು.

ಕಳೆದ ಜಾಗತಿಕ ಯುದ್ಧದ ಮುಂಚಿನ ಕಾಲದಲ್ಲಿ, ಜರ್ಮನಿಯಲ್ಲಿ ಜೀವನದ ಧ್ಯೇಯವು ಜರ್ಮನಿಯ ಉಚ್ಚ ಸಂಸ್ಕೃತಿಯ ಆಧಾರದ ಮೇಲೆ ಕಟ್ಟಲ್ಪಟ್ಟಿತ್ತು. ರಾಷ್ಟ್ರೀಯ ಸಂಸ್ಕೃತಿಯ ಲಾಭವನ್ನು ಪರಿಪೂರ್ಣವಾಗಿ ಪಡೆದವನೇ ಸಂಪೂರ್ಣನಾದ ಜರ್ಮನನೆಂದು ತಿಳಿಯುತಿದ್ದರು ಅಲ್ಲಿಯ ಮುಂದಾಳುಗಳು. ಆದುದರಿಂದ ಅಲ್ಲಿ ಶಿಕ್ಷಣಕ್ಕೆ ಅತ್ಯುತ್ತಮವಾದ ಸ್ಥಾನವು ದೊರೆಯಿತು. ಅದರ ಪರಿಣಾಮವಾಗಿ ರಾಷ್ಟ್ರೀಯ ಭಾವನೆಯು ವಿದ್ಯಾಲಯಗಳಲ್ಲಿ ಪ್ರವೇಶಿಸಿ 'ಶಿಕ್ಷಣವೆಂದರೆ ಬೌದ್ಧಿಕ ಸಂಪತ್ತನ್ನೂ ಸಂಸ್ಕೃತಿಯನ್ನೂ ಜನರಲ್ಲಿ ಬೆಳೆಯಿಸುವುದು' ಎಂದು ಗೊತ್ತಾಯಿತು. ಶಿಕ್ಷಣದಿಂದ ಶೀಲಸಂವರ್ಧನೆಯ ಕಾರ್ಯವು ಸಾಧ್ಯವಿದೆಯೆಂದು ಅಲ್ಲಿಯ ಕೆಲವು ಶಿಕ್ಷಣಜ್ಞರು ಹೇಳಿದರೂ, ಶಿಕ್ಷಣದ ಕಾರ್ಯವನ್ನು ಸರಕಾರದವರೇ ಕೈಕೊಳ್ಳಬೇಕೆಂದು ನಿರ್ಧಾರವಾಯಿತು. ಅಮೇರಿಕೆಯಲ್ಲಿಯ ಧ್ಯೇಯವು ಶಾಲೆಗಳನ್ನು ಪ್ರಜೆಗಳೇ ತಮ್ಮಸಲುವಾಗಿ ನಿರ್ಮಿಸಬೇಕೆಂದು ಗೊತ್ತಾದರೆ, ಜರ್ಮನಿಯಲ್ಲಿ ಶಾಲೆಗಳ ನಿರ್ಮಾಪಕ ಶಕ್ತಿಯು ಸರಕಾರವು, ಎಂದರೆ, ಶಾಲೆಯು ಸರಕಾರದ ಹಿತಕ್ಕಾಗಿ ನಿಯೋಜಿಸಿದ ಸಂಸ್ಥೆಯೆಂದು ಸಿದ್ಧವಾಯಿತು. ಆದುದರಿಂದ ಜೀವನದ ಗೊತ್ತುಗುರಿಗಳೇ ಶಿಕ್ಷಣದ ಗೊತ್ತುಗುರಿಗಳು ಎಂದು ತಿಳಿಯಬೇಕೆಂದು ಧ್ವನಿತವಾಯಿತು. ಈ ಎಲ್ಲ ವಿವರಣೆಗಳನ್ನು ಒಂದೆರಡು ಮಾತುಗಳಲ್ಲಿಯೆ ಹೇಳುವುದಾದರೆ— **"ಜೀವನದ ಸಿದ್ಧಾಂತವು ಜೀವನದ ಧ್ಯೇಯವನ್ನು ನಿರ್ಣಯಿಸುವುದು; ಜೀವನದ ಧ್ಯೇಯವು ಶಿಕ್ಷಣದ ಧ್ಯೇಯವನ್ನು ನಿರ್ಣಯಿಸುವುದು"** ಎಂದು ಹೇಳಬಹುದು. ಇದೇ ತತ್ತ್ವವು ಈಗಿರುವ ಶಿಕ್ಷಣದ ಎಲ್ಲ ಧ್ಯೇಯಗಳಲ್ಲಿ ಒಂದಿಲ್ಲೊಂದು ಸ್ವರೂಪದಲ್ಲಿ ಒಡಮೂಡಿರುವುದು.

ಶಿಕ್ಷಣದ ಧ್ಯೇಯುಗಳು ಬಗೆಬಗೆಯಾಗಿವೆ. ಬೇರೆ ಬೇರೆ ಶಿಕ್ಷಣ ಶಾಸ್ತ್ರಜ್ಞರು ಶಿಕ್ಷಣದ ಧ್ಯೇಯುಗಳನ್ನು ತಮತಮಗೆ ಉಚಿತವೆಂದು ತೋರಿದಂತೆ ಹೇಳಿದ್ದಾರೆ. ವಿಶಾಲದೃಷ್ಟಿಯಿಂದ ಪರ್ಯಾಲೋಚಿಸಿದರೆ, ಅವೆಲ್ಲವನ್ನೂ ಎರಡು ಗುಂಪುಗಳನ್ನಾಗಿ ವಿಂಗಡಿಸಬಹುದು:— (೧) ವ್ಯಾವಹಾರಿಕ ಧ್ಯೇಯ; (೨) ನೈತಿಕ ಧ್ಯೇಯ. ನೈತಿಕ ಧ್ಯೇಯುವೇ ಶಿಕ್ಷಣದ ಕೊನೆಯ ಧ್ಯೇಯುವೆಂದು ಎಲ್ಲರೂ ಒಪ್ಪುತ್ತಾರೆ. ಪ್ರಮುಖವಾದ ಇವೆರಡು ಧ್ಯೇಯುಗಳಲ್ಲಿಯೂ ಅಡಕವಾಗಿರುವ ಬಗೆಬಗೆಯ ಒಳಗುರಿಗಳನ್ನು ಕುರಿತು ವಿಚಾರಿಸೋಣ.

**(೧) ಉಪಜೀವನದ ಸಾಧನಗಳನ್ನು ದೊರಕಿಸುವುದು.—** ಈ ಧ್ಯೇಯುಸಾಧನೆಗಾಗಿಯೇ ತಮ್ಮ ಮಕ್ಕಳನ್ನು ಶಾಲೆಗೆ ಕಳುಹುವವರೇ ಬಹಳ ಜನ. ಮನುಷ್ಯನು ತನ್ನ ಉಪಜೀವನವನ್ನು ಚೆನ್ನಾಗಿ ಸಾಗಿಸಿಕೊಂಡು ಹೋಗಬೇಕಾದುದೇನೊ ನಿಜ. ಉಪಜೀವನವನ್ನು ಸಾಗಿಸಿಕೊಂಡು ಹೋಗುವುದಕ್ಕೆ ಶಿಕ್ಷಣವು ಬೇಕೇಬೇಕು. ಶಿಕ್ಷಣವನ್ನು ಪಡೆದವನು ಅದರ ಸಾಹಾಯ್ಯದಿಂದ, ಅದನ್ನು ಪಡೆಯದೆ ಇದ್ದವನಿಗಿಂತ ಹೆಚ್ಚು ಮೇಲ್ತರದ ಉಪಜೀವನದ ಸಾಧನಗಳನ್ನು ದೊರಕಿಸುವುದೇ ಶಿಕ್ಷಣದ ಧ್ಯೇಯುವೆಂದು ಕೆಲವರು ಹೇಳುತ್ತಾರೆ. ಆದರೆ ಈ ಉದ್ದೇಶವು ವೈಯುಕ್ತಿಕವಾಗಿದೆ. ಆದರೂ, ಅದು ಸಾಮಾಜಿಕ ಜೀವನಕ್ಕೆ ಸಹಾಯುವಾಗುವುದರಿಂದಲೂ ಆತ್ಮೋನ್ನತಿಯುನ್ನು ಪಡೆಯಲು ಅನುಕೂಲವಾಗುವುದರಿಂದಲೂ ಸ್ತುತ್ಯವೆಂದೆನಿಸಬಹುದು. ಏಕೆಂದರೆ, ವ್ಯಕ್ತಿಯು ಸಮಾಜದ ಮೇಲೆ ಭಾರವನ್ನು ಹಾಕದೆ ತನ್ನ ಪೋಷಣೆಯುನ್ನು ತಾನೇ ಮಾಡಿಕೊಳ್ಳಬೇಕು; ಪರಾವಲಂಬಿಯಾಗಿರಬಾರದು. ಈ ದೃಷ್ಟಿಯಿಂದ ಈ ಧ್ಯೇಯುವು ಹುಟ್ಟಿರುವುದು. ಇದರಲ್ಲಿ ತೊಡಕುಗಳೂ ಇಲ್ಲ; ಇದು ಹೆಚ್ಚು ಸ್ಪಷ್ಟವೂ ಆಗಿದೆ. ಆದರೆ ಕೇವಲ ಉತ್ತಮರೀತಿಯಿಂದ ಉಪಜೀವನವನ್ನು ಸಾಗಿಸಿಕೊಂಡು ಹೋಗುವುದಿಷ್ಟೇ ಮಾನವ ಜೀವನದ ಗುರಿಯು ಆಗಿರುವುದಿಲ್ಲ. ಇದೊಂದೇ ಶಿಕ್ಷಣದ ಗುರಿಯಾದರೆ, ಮಾನವನಿಗೂ ಬೇರೆ ಪ್ರಾಣಿಗಳಿಗೂ ಭೇದವು ಉಳಿಯಲಿಕ್ಕಿಲ್ಲ. ಕೇವಲ ಉಪ-ಜೀವನವನ್ನು ಸಾಗಿಸಿಕೊಂಡು ಹೋಗಲು ಸುಲಭವಾದ ಸಾಧನಗಳನ್ನು

ದೊರಕಿಸಿಕೊಡುವುದಿಷ್ಟೇ ಶಿಕ್ಷಣದ ಧ್ಯೇಯವಾದರೆ, ಅದು ಕೆಳಗಿನ ತರಗತಿಯ ಧ್ಯೇಯವಾಗುವುದು. ಈ ಧ್ಯೇಯವು ಮಾನವನಲ್ಲಿ ಸಂಕುಚಿತ ದೃಷ್ಟಿಯನ್ನು ಹುಟ್ಟಿಸುವುದು. ಮಾನಸಿಕ ಹಾಗೂ ನೈತಿಕ ಉನ್ನತಿಯ ದೃಷ್ಟಿಯಿಂದ ನೋಡಿದರೆ, ಈ ಧ್ಯೇಯವು ತ್ಯಾಜ್ಯವೆನಿಸುವುದು. ಈ ತರದ ಧ್ಯೇಯವುಳ್ಳವರ ಜೀವನದ ಮಟ್ಟವು ಉದಾತ್ತ ಶಿಕ್ಷಣವನ್ನು ಪಡೆದವನ ಜೀವನದ ಮಟ್ಟಕ್ಕಿಂತ ಕಡಮೆತರದ್ದಾಗುವುದು. ಅಲ್ಲದೆ, ಅವನು ವ್ಯಾವಹಾರಿಕವಾದ ಉಪಯುಕ್ತತೆಯ ಸಲುವಾಗಿ ಅದೂರ ದೃಷ್ಟಿಯುವನೆಂಬ ದೋಷಕ್ಕೂ ಒಳಗಾಗಬೇಕಾಗುವುದು. ಒಂದೇ ಸಮಯದಲ್ಲಿ ಒಬ್ಬನು ವಿಶಾಲವಾದ ದೃಷ್ಟಿಯುಳ್ಳವನೂ ಸಂಕುಚಿತ ದೃಷ್ಟಿಯುವನೂ ಆಗಿರಲಾರನು.

(೨) **ವಿರಾಮುಕಾಲವನ್ನು ದೊರಕಿಸುವುದು.**— ಒಂದು ಕಾಲ ದಲ್ಲಿ ಮನುಷ್ಯನ ಕಾರ್ಯಮಯ ಜೀವನವು ಎರಡು ವಿಭಾಗಗಳಲ್ಲಿ ವಿಂಗಡಿಸಲ್ಪಡುತ್ತಿದ್ದಿತು; ಅಥವಾ ಸಾಮಾನ್ಯ ಮನುಷ್ಯನ ವೇಳೆಯು ಎರಡು ವಿಭಾಗಗಳಲ್ಲಿ ಹಂಚಲ್ಪಡುತ್ತಿದ್ದಿತೆಂದೂ ಹೇಳಬಹುದು :— (೧) ಕೆಲಸ, (೨) ಆಟ ಅಥವಾ ವಿರಾಮ. ಕಾರ್ಯದ ಕಾಲವು ಆಗ ಬಹಳವಾಗಿರುತ್ತಿದ್ದಿತು. ಅದರಿಂದ ಒಂದುಬಗೆಯಾಗಿ ಮನುಷ್ಯನ ಜೀವನಕ್ಕೆ ಅಷ್ಟೊಂದು ಸುಖವಿರಲಿಲ್ಲವೆಂದೂ ಇಲ್ಲವೆ ಸುಖವಿದ್ದರೂ ಅದು ಕ್ಷಣಿಕವಾಗಿರುತ್ತಿದ್ದಿತೆಂದೂ ಹೇಳಬಹುದು. ಆದರೆ ಯಾಂತ್ರಿಕ ಯುಗವು ಬಂದಂದಿನಿಂದ ಕೆಲಸದ ಅವಧಿಯು ಮೊದಲಿಗಿಂತ ಬಹಳ ಕಡಮೆಯಾಗಿ ವಿರಾಮದ ವೇಳೆಯೆ ಹೆಚ್ಚಾಗಿ ಹೋಗಿರುವುದು. ಈ ವಿರಾಮದ ವೇಳೆ ಯನ್ನು ಹೇಗೆ ಉಪಯೋಗಿಸಿಕೊಳ್ಳಬೇಕೆಂಬುದೇ ಈಗ ಜಟಿಲ-ಪ್ರಶ್ನೆ ಯಾಗಿದೆ. ಆದುದರಿಂದ ಈ ಎರಡೂ ವಿಭಾಗಗಳನ್ನು ಕೆಲಸ, ಆಟ ಮತ್ತು ವಿರಾಮುಕಾಲ—ಹೀಗೆ ಮೂರು ಭಾಗಗಳಲ್ಲಿ ವಿಂಗಡಿಸಿದರೆ ಒಳಿತಾಗುವುದು. ಬಹಳ ದಿನಗಳ ಹಿಂದೆಯೆ ಅರಿಸ್ಟಾಟಲನು ಈ ಮೂರು ಭೇದಗಳನ್ನು ಮಾಡಿರುವನು :—(೧) **ಕೆಲಸ.** ಎಂದರೆ ಏನಾದರೊಂದು ಸಾಧನದ (ಶ್ರೀಮಂತಿಕೆ, ಹೊಟ್ಟೆತುಂಬಿಕೊಳ್ಳುವಿಕೆ ಮುಂತಾದುವು) ಸಲುವಾಗಿ ಕೈಕೊಂಡ ಚಟುವಟಿಕೆ. (೨) **ಮನೋರಂಜನ** ಅಥವಾ

**ಆಟ.** ಕೆಲಸದಿಂದ ಕಷ್ಟಪಟ್ಟ ಮನಸ್ಸು ಮತ್ತು ದೇಹ ಇವಕ್ಕೆ ಇದರಿಂದ ಸಮತೋಲತೆಯೂ ದೊರೆಯುವುದು; ಪುನಃ ಕಾರ್ಯಕ್ಕೆ ಹುರುಪೂ ಬರುವುದು. (೩) **ವಿರಾಮಕಾಲ.** ಪ್ರೀತಿಯ ಅಥವಾ ಮೆಚ್ಚಿಕೆಯ ವಿಷಯಗಳನ್ನು ಬೇರೆ ಯಾವ ಉದ್ದೇಶವೂ ಇಲ್ಲದೆ, ಕೇವಲ ಆ ವಿಷಯದ ಮಹತ್ತ್ವದ ಜ್ಞಾನಕ್ಕಾಗಿ ಅಥವಾ ಆನಂದವನ್ನು ಪಡೆಯುವುದಕ್ಕಾಗಿ ಸ್ಫೂರ್ತಿಯಿಂದ ಕೈಕೊಂಡ ಚಟುವಟಿಕೆಯ ಕಾಲವೇ ವಿರಾಮಕಾಲವು. ಸಂಸಾರದಲ್ಲಿಯ ಉತ್ತಮ ಭಾಗವೇ ಇದು. ಮನಸ್ಸನ್ನು ಆನಂದದಲ್ಲಿ ಓಲಾಡಿಸುವ ಕಾವ್ಯ ವಾಚನ, ಸಂಗೀತ ಶ್ರವಣ, ಗುಣಗಳನ್ನು ಗ್ರಹಿಸುವ ದೃಷ್ಟಿಯಿಂದ ಕೈಕೊಂಡ ಗೆಳೆಯರ ಒಡನಾಟ, ಆಧ್ಯಾತ್ಮಿಕ ವಿಚಾರ—ಮುಂತಾದುವುಗಳಲ್ಲಿ ತೊಡಗಿರುವುದೇ ವಿರಾಮಕಾಲದ ಉತ್ತಮವಾದ ಉಪಯೋಗವು. ಈ ಬಗೆಯ ವಿರಾಮವನ್ನು ಪಡೆಯುವುದರಲ್ಲಿಯೇ ಜೀವನದ ಜೀವಾಳವಿದೆ. ಇದು ಕೆಲಸದಿಂದ ಇಲ್ಲವೆ ಮನೋರಂಜನೆಯಿಂದ ದೊರಕುವ ಆನಂದಕ್ಕಿಂತಲೂ ಮಿಗಿಲಾದ ಆನಂದವನ್ನೀಯುವುದು. ಇದರಿಂದಲೇ ಮನುಷ್ಯನ ಆತ್ಮವು ತನ್ನ ಶಕ್ತಿಯನ್ನು ಬೆಳೆಯಿಸಿಕೊಳ್ಳುವುದು. ಇಂತಹ ವಿರಾಮಕಾಲವು ಆತ್ಮಶಕ್ತಿಯನ್ನು ಬೆಳೆಯಿಸುವ ಸಂಜೀವಿನಿಯು.

ವಿರಾಮದ ಆವಶ್ಯಕತೆ, ಉಪಯೋಗ—ಇವುಗಳ ಮಹತ್ತ್ವವನ್ನು ಶಿಕ್ಷಣ ಸುಧಾರಕರು ಕಂಡುಹಿಡಿಯದಿದ್ದರೆ, ಶಿಕ್ಷಣದ ವಿಷಯಗಳಲ್ಲಿ ಸಾಹಿತ್ಯ, ಸಂಗೀತ, ನೃತ್ಯ, ಚಿತ್ರಕಲೆ ಮುಂತಾದ ವಿಷಯಗಳಿಗೆ ಸ್ಥಾನವು ಸಿಕ್ಕುತ್ತಿರಲಿಲ್ಲ. ವೃತ್ತಿಶಿಕ್ಷಣದಿಂದ ವಿಂಗಡಿಸಿದ ಸಾಮಾನ್ಯವಾದ ಅಥವಾ ಉದಾರವಾದ ಶಿಕ್ಷಣವು ವಿರಾಮಕಾಲವನ್ನು ಒದಗಿಸಿಕೊಡಬೇಕೆಂಬ ಮುಖ್ಯ ತತ್ತ್ವವನ್ನು ತನ್ನ ಧ್ಯೇಯನ್ನಾಗಿರಿಸಿಕೊಂಡಿದೆ.

(೩) **ಜ್ಞಾನಾರ್ಜನೆ.**— ಈ ಧ್ಯೇಯವು ಮೊದಲನೆಯ ಧ್ಯೇಯದ ವಿರುದ್ಧ ದಿಶೆಯನ್ನು ಹಿಡಿದಿದೆಯೆಂದು ಹೇಳಬಹುದು. ಮೊದಲನೆಯದು ಬಾಳಿನ ಆಧಿಭೌತಿಕ ಧ್ಯೇಯವಾದರೆ, ಇದು ದೈನಿಕ ಆಧಿಭೌತಿಕ ಧ್ಯೇಯವನ್ನು ಜರೆದು ಉಚ್ಚತರದ ಆದರ್ಶವನ್ನು ಎತ್ತಿಹಿಡಿಯುವುದು.

ಮೊದಲನೆಯದು ಜೀವನ ಕಲಹಕೆ ಪ್ರತಿನಿಧಿಯಾದರೆ, ಇದು ವಿಶ್ರಾಮ ಕಾಲದ ಪ್ರತಿನಿಧಿಯಾಗಿರುವುದು.

ರೂಢಿಯಲ್ಲಿ ಮಾತ್ರ ಈ ಧ್ಯೇಯಗಳು ಒಂದುಗೂಡಿ ನಡೆಯ ಬಹುದು. ಮಾನವಕುಲದ ಅನುಭವವನ್ನು ದೊರಕಿಸುವುದೇ ಜ್ಞಾನದ ಉದ್ದೇಶವೆಂದು ಕಲ್ಪಿಸಿದರೆ, ಇವೆರಡು ಉದ್ದೇಶಗಳಲ್ಲಿಯೂ ವ್ಯತ್ಯಾಸವು ಕಂಡು ಬರುವುದಿಲ್ಲ. ಆದರೆ, "ಜ್ಞಾನವು ಕೆಲವು ಸಾಂಪ್ರಾದಾಯಿಕ ಕಲ್ಪನೆಗಳ ಸಂಗ್ರಹವು "ಎಂದು ತಿಳಿದುಕೊಂಡರೆ, ಈ ಉದ್ದೇಶವು ಸಫಲ ವಾಗಲಾರದು. ಜೀನನು ಚಿನ್ನವನ್ನು ಸಂಚಯಿಸಿದಂತೆ ಮಾನವರು ಜ್ಞಾನವನ್ನು ಸಂಚಯಿಸಿದರೆ ಅದರ ಸರಿಯಾದ ಉಪಯೋಗವು ಆಗ ಲಾರದು. ಸಂಸಾರದ ಮಾರ್ಗವು ಸುಗಮವಾಗಿ ಸಾಗುವುದಕ್ಕೋಸ್ಕರ ಅನುಭವಗಳ ಉಪಯೋಗವನ್ನು ಮಾಡಿಕೊಂಡರೆ ಮಾತ್ರ ಈ ಉದ್ದೇಶ ದಿಂದ ಉತ್ತಮ ಫಲವನ್ನು ಸಾಧಿಸಿದಂತಾಗುವುದು.

ಇದರಲ್ಲಿ ಬುದ್ಧಿಯ ಬೆಳವಣಿಗೆಯೆ ಮುಖ್ಯವಾದ ಉದ್ದೇಶವಾಗಿದೆ ಯೆಂದು ಕೆಲವರು ಇದನ್ನು ಹೀಯಾಳಿಸುವರು. ಏಕೆಂದರೆ, ಈ ಉದ್ದೇಶವು ಬೌದ್ಧಿಕ ಸಂಪತ್ತಿಗೆ ಹೆಚ್ಚಿನ ಮಹತ್ತ್ವವನ್ನು ಕೊಟ್ಟು ವ್ಯಾವಹಾರಿಕ ಉಪಯುಕ್ತತೆಯ ವಿಚಾರವನ್ನು ಬಿಟ್ಟುಬಿಟ್ಟಿರುವುದು ; 'ಜ್ಞಾನವೇ ಬಲವು' ಎಂದು ಸಾರುತ್ತಿರುವುದು. ಈಗಿನ ಕಾಲದಲ್ಲಿ ಜ್ಞಾನಾರ್ಜನೆಯು ಹಣವಂತರಿಗಷ್ಟೇ ಸಾಧ್ಯವಿರುವುದರಿಂದ ವೃತ್ತಿಯ ವಿಚಾರಕ್ಕೆ ಇದರಲ್ಲಿ ಪ್ರವೇಶವು ದೊರಕುವ ಸಂಭವವಿಲ್ಲ.

(೪) **ಸಂಸ್ಕೃತಿಯನ್ನು ಪಡೆಯುವುದು.**—ಎಲ್ಲರೂ ಸಂಸ್ಕೃತಿ ಯನ್ನು ಪಡೆಯಬೇಕಾದುದು ಅವಶ್ಯವು. ಸಂಸ್ಕೃತಿಯಿಲ್ಲದವನಿಗೆ ಸಮಾಜದಲ್ಲಿ ಮಾನವು ಕಡಮೆಯೆಂಬ ಮಾತೂ ಸರಿಯೆ. ಶಿಕ್ಷಣವು ಇತರ ಸಂಗತಿಗಳೊಡನೆ ಈ ಸಂಸ್ಕೃತಿಯನ್ನೂ ಒದಗಿಸಿಕೊಡಬೇಕು. ಸುಸಂಸ್ಕೃತ ಮನುಷ್ಯನನ್ನು ನಿರ್ಮಾಣಮಾಡುವುದೂ ಶಿಕ್ಷಣದ ಒಂದು ಧ್ಯೇಯವಾಗಿರಬೇಕು. ಈ ಸಾಮಾನ್ಯ ಸಂಸ್ಕೃತಿಯನ್ನು ಒದಗಿಸಿಕೊಡ ಬೇಕೆಂಬುದೂ ಜ್ಞಾನಸಂಪಾದನೆಯ ಧ್ಯೇಯಕ್ಕೆ ಸಂಬಂಧಿಸಿದೆ.

ಆದರೆ, ಸಾಂಸ್ಕೃತಿಕ ವಿಷಯುಗಳ ಲಾಭವನ್ನು ವ್ಯಾವಹಾರಿಕ ಜೀವನಕ್ಕೆ ಅನುಗುಣವಾಗುವಂತೆ ಪಡೆಯುವುದು ಸಾಧ್ಯವಿಲ್ಲ. ಒಂದೊಂದು ಕಾಲದಲ್ಲಿ ಆಯಾ ದೇಶಗಳ ಜನರು ಲ್ಯಾಟಿನ್, ಗ್ರೀಕ್, ಸಂಸ್ಕೃತ, ಅರಬ್ಬಿ, ಫಾರಸಿ ಮುಂತಾದ ಭಾಷೆಗಳ ಅಭ್ಯಾಸವು ಸಂಸ್ಕೃತಿಯ ಮೂಲಾಧಾರವೆಂದೂ ಇವುಗಳನ್ನು ಕಲಿತವನು ಸುಸಂಸ್ಕೃತ ಮನುಷ್ಯನೆಂದೂ ತಿಳಿದಿದ್ದರು. ಆಗ ಇವುಗಳನ್ನು ಕಲಿತವನಿಗೆ ಸಮಾಜದಲ್ಲಿ ಮಾನಸನ್ಮಾನಗಳೂ ಈಗ ಆಂಗ್ಲಭಾಷೆಯನ್ನು ಕಲಿತವನಿಗೆ ದೊರೆಯುವಂತೆ ದೊರೆಯುತ್ತಿದ್ದವು. ಆದುದುರಿಂದಲೇ ಆ ವಿಷಯುಗಳಿಗೆ ಪಠ್ಯವಿಷಯುಗಳಲ್ಲಿ ಅಗ್ರಸ್ಥಾನವೂ ದೊರೆಯುತ್ತಿದ್ದಿತು. ಆದರೆ, ಈಗ ಈ ಸ್ಥಿತಿಯು ಹೋಗಿದೆ. ಜನತೆಯ ಜೀವನದಲ್ಲಿಯೆ ಮಹಾಕ್ರಾಂತಿಯಾಗಿದೆ. ಆ ವಿಷಯುಗಳು ಇಂದಿನ ಜನಜೀವನಕ್ಕೆ ಅಷ್ಟು ಲಾಭಕರವಾಗಿರುವುದಿಲ್ಲ. ಆದುದರಿಂದ ಇತ್ತೀಚೆಯ ಶಾಲೆಗಳಲ್ಲಿ ಆ ವಿಷಯುಗಳ ಮಹತ್ತ್ವವು ಕಡಮೆಯಾಗಿದೆ.

ಸಂಸ್ಕೃತಿಯ ಕಲ್ಪನೆಗಳೂ ಕಾಲಕಾಲಕ್ಕೆ ಬದಲಾಗುವುವು. ಹಿಂದಿನ ಕಾಲದ ಸಂಸ್ಕೃತಿಯ ಕಲ್ಪನೆಗಳು ಈಗ ಉಳಿದಿಲ್ಲ. ಆದುದರಿಂದ ಈ ಧ್ಯೇಯವು ಸ್ವಲ್ಪ ದೋಷಯುಕ್ತವಾಗಿ ಇದೆಯೆಂದು ಕಂಡುಬರುವುದು. ಅಲ್ಲದೆ ಪಾಠ್ಯಕ್ರಮುವನ್ನು ರಚಿಸುವಾಗ ಈ ಉದ್ದೇಶವು ಅಷ್ಟೊಂದು ಉಪಯೋಗಕ್ಕೆ ಬಾರದು.

**(೫) ಸಂಪೂರ್ಣ ಜೀವನದ ಸಿದ್ಧತೆ.**—'ಸಂಪೂರ್ಣ ಜೀವನಕ್ಕೆ ಒಳ್ಳೆಯ ಸಿದ್ಧತೆಯನ್ನು ಮಾಡಿಕೊಡುವುದೇ ಶಿಕ್ಷಣವು' ಎಂದು ಶಿಕ್ಷಣ ಶಾಸ್ತ್ರಜ್ಞರಲ್ಲಿ ಅಗ್ರಗಣ್ಯನಾಗಿರುವ **ಹರ್ಬರ್ಟ ಸ್ಪೆನ್ಸರನು** ಹೇಳಿರುವನು. ಈ ಉದ್ದೇಶವನ್ನು ಮುಂದೆ ಮಾಡುವಾಗ ಅವನು 'ಸಿದ್ಧತೆ' ಗೆ ಬಹಳ ಮಹತ್ತ್ವವನ್ನು ಕೊಟ್ಟಿರುವನು. ಆದರೆ ಹುಡುಗನು ಹುಡುಗನಂತೆ ಇರಲು, ವಿಚಾರಿಸಲು, ಮಾತನಾಡಲು, ತಿಳಿದುಕೊಳ್ಳುವ ಬಾಧ್ಯತೆಯ ವಿಚಾರವನ್ನು ಈತನು ಚೆನ್ನಾಗಿ ಗಮನಕ್ಕೆ ತಂದಿರುವುದಿಲ್ಲ. ಹುಡುಗನು ಹುಡುಗತನವನ್ನು ಬೇಗ ಬಿಟ್ಟುಬಿಡಬೇಕೆಂದು ಈತನ ಹಂಬಲು.

ಪ್ರೌಢ ಮನುಷ್ಯನ ಜೀವನದ ಸಿದ್ಧತೆಯು ಹುಡುಗನ ದೃಷ್ಟಿಯಿಂದ ಸರಿಹೋಗಲಾರದು. ಆದುದರಿಂದ ಈ ಧ್ಯೇಯವು ಬಾಲಕರ ಶಿಕ್ಷಣಕ್ಕೆ ಅನುಗುಣವಾಗಿ ತೋರಲಾರದು.

**(೬) ನಾಗರಿಕತೆ.—** ಹರ್ಬರ್ಟನು ನಾಗರಿಕತೆಯ ಶಿಕ್ಷಣವನ್ನೂ 'ಜೀವನದ ಸಿದ್ಧತೆ' ಯಲ್ಲಿಯೆ ಸೇರಿಸಿರುವನು. ಅವನು 'ನಾಗರಿಕನಾಗಲು ಹುಡುಗನನ್ನು ಅನುಗೊಳಿಸುವುದೇ ಶಿಕ್ಷಣ'ವು ಎಂದೂ ಪ್ರತಿಪಾದಿಸಿದ್ದನು. ನಾಗರಿಕತೆಯೆಂದರೆ ಯಾವುದಾದರೊಂದು ವಿಶಿಷ್ಟ ದೇಶದ ನಾಗರಿಕತೆ ಎಂದು ತಿಳಿಯದೆ 'ಪ್ರಪಂಚದ ನಾಗರಿಕತೆ' ಎಂದು ಕಲ್ಪಿಸಬೇಕು. ದೇಶಾಭಿಮಾನವೇ ನಾಗರಿಕತೆಯ ಲಕ್ಷಣವೆಂದು ಕೆಲವರು ತಿಳಿಯುವರು. ದೇಶಾಭಿಮಾನದ ಈ ಸಾಮಾನ್ಯ ಕಲ್ಪನೆಯು ಅಷ್ಟೊಂದು ಸರಿಯಾಗಿ ತೋರುವುದಿಲ್ಲ. ಅದರಲ್ಲಿ ಬದಲಾವಣೆಯನ್ನು ಮಾಡುವುದು ಅವಶ್ಯವಾಗಿರುವುದು. ಏಕೆಂದರೆ, ಉಜ್ವಲವಾದ ದೇಶಭಕ್ತಿಯು ಸ್ವಾರ್ಥಮಯವಾದ ವಿಚಾರಗಳಿಂದ ಪ್ರೇರಿತವಾಗಿರುವುದಿಲ್ಲ; ಹಾಗೆ ಪ್ರೇರಿತವಾಗಿರುವುದು ಅವಶ್ಯವಿಲ್ಲವೆಂದೂ ನಾವು ಒಪ್ಪಬೇಕು. ನಾವು ನಮ್ಮ ದೇಶವನ್ನು ಪ್ರೀತಿಸುತ್ತಿರುವಾಗಲೂ ಉಳಿದ ದೇಶಗಳೊಡನೆ ಪ್ರೀತಿಯಿಂದ ವರ್ತಿಸಬಹುದೆಂದೂ ಹಾಗೆ ಇತರ ದೇಶಗಳೊಡನೆ ಸಹಾನುಭೂತಿಯಿಂದ ವರ್ತಿಸುವುದು ಸಾಧ್ಯವಿದೆಯೆಂದೂ ಹೇಳಬೇಕು. ಇದು ಒಳ್ಳೆಯ ನಾಗರಿಕತೆಯ ಲಕ್ಷಣ. ಇಂತಹ ಪ್ರವೃತ್ತಿಯನ್ನು ಹುಟ್ಟಿಸುವುದೇ ಶಿಕ್ಷಣದ ಧ್ಯೇಯವಾಗಬೇಕು.

**(೭) ವೈಯಕ್ತಿಕತೆ.—** 'ಯೋಗ್ಯವೇ ಇರಲಿ, ಅಯೋಗ್ಯವೇ ಇರಲಿ, ನನ್ನ ದೇಶವೇ ಮೇಲು' ಎಂದು ಒಬ್ಬನು ಹೇಳಿದರೆ, ಇನ್ನೊಬ್ಬನು 'ವ್ಯಕ್ತಿಗೆ ನ್ಯಾಯವಾದುದಲ್ಲದುದು ದೇಶಕ್ಕೆ ಯೋಗ್ಯವಾಗಲಾರದು' ಎಂದು ಹೇಳುವನು. ಇವೆರಡೂ ಉದ್ಗಾರಗಳಲ್ಲಿ ಎರಡನೆಯವನದೇ ಶಿಕ್ಷಣದ ಉದ್ದೇಶವಾಗಬೇಕು. ಹಾಗಾಗದೆ ಹೋದಲ್ಲಿ, ೧೯೧೪ ನೆಯ ಇಸವಿಯ ಜಾಗತಿಕ ಯುದ್ಧದಂತೆ ಬೇರೆ ಯುದ್ಧಗಳು ಸಂಭವಿಸಬಹುದು. ಸದ್ಯದ (೧೯೩೯) ಘೋರವಾದ ಜಾಗತಿಕ ಯುದ್ಧವೇ ಈ ಮಾತಿಗೆ ಸಾಕ್ಷಿ.

ಜರ್ಮನಿಯಲ್ಲಿ ' ದೇಶದ ಹಿತಕ್ಕೋಸ್ಕರ ವ್ಯಕ್ತಿ, ವ್ಯಕ್ತಿಯ ಹಿತಕ್ಕೋಸ್ಕರ ದೇಶವಲ್ಲ ' ಎಂಬ ತತ್ತ್ವದ ಪ್ರಚಾರವಾಗಿದ್ದಿತು. ಈ ತತ್ತ್ವಕ್ಕಾಗಿಯೆ ಹಿಂದಿನ ಮಹಾಯುದ್ಧವು ಸಂಭವಿಸಿತು. ಇದೇ ತತ್ತ್ವವು ಜರ್ಮನಿಯಲ್ಲಿ ಶಿಕ್ಷಣಕ್ರಮವನ್ನೆಲ್ಲ ವ್ಯಾಪಿಸಿತು. ಅದು ವೈಯಕ್ತಿಕತೆಗೆ ಆಸ್ಪದವನ್ನೀಯದೆ ಒಂದು ವಿಶಿಷ್ಟ ಧ್ಯೇಯದ ನಾಗರಿಕರನ್ನು ಸಿದ್ಧಗೊಳಿಸಿತು. ಸ್ವಲ್ಪ ಹೆಚ್ಚು ಕಡಮೆಯಾಗಿ ಅದೇ ದೃಷ್ಟಿಯಿಂದ ಇಂಗ್ಲಂಡದಲ್ಲಿಯೂ ಶಿಕ್ಷಣ ಕ್ರಮವು ಸಾಮಾಜಿಕ ಹಾಗೂ ವೈಯಕ್ತಿಕ ದೃಷ್ಟಿಯಿಂದ ಒಂದು ವಿಶಿಷ್ಟ ಬಗೆಯ ನಾಗರಿಕನನ್ನು ತಯಾರಿಸಬೇಕೆಂಬ ಪ್ರಯತ್ನವು ನಡೆದಿದ್ದಿತು. ಈತರದ ಪ್ರವೃತ್ತಿಯನ್ನು ಹೋಗಲಾಡಿಸುವಂತಹ ಶಿಕ್ಷಣದ ಧ್ಯೇಯವನ್ನು ಹುಡುಕಿಕೊಳ್ಳಬೇಕಾದುದು ಅವಶ್ಯವಾಗಿರುವುದು. ಇಂದಿನ ಶಿಕ್ಷಣ ಶಾಸ್ತ್ರಜ್ಞರು " ಪ್ರತಿಯೊಬ್ಬ ವ್ಯಕ್ತಿಗೆ ತನ್ನ ವೈಯಕ್ತಿಕತೆಯನ್ನು ಉತ್ತಮವಾದ ರೀತಿಯಿಂದ ವಿಕಾಸಗೊಳಿಸಿಕೊಳ್ಳಲು ಅನುಕೂಲವಾದ ಪರಿಸ್ಥಿತಿಯನ್ನು ಕಲ್ಪಿಸಿಕೊಡಬೇಕು " ಎಂದು ಆವೇಶದಿಂದ ಹೇಳುತ್ತಿರುವರು.

ಒಂದೇ ತರದ ನಾಗರಿಕನನ್ನು ಸಿದ್ಧಗೊಳಿಸಬೇಕೊ ಅಥವಾ ತರತರದ ವೈಯಕ್ತಿಕ ಸ್ವರೂಪವುಳ್ಳ ನಾಗರಿಕರನ್ನು ಸಜ್ಜುಗೊಳಿಸಬೇಕೊ ಎನ್ನುವ ಗೊಂದಲದಲ್ಲಿ ಶಿಕ್ಷಣದ ವ್ಯಾಖ್ಯೆಯನ್ನು ಹೇಗೆ ಸರಿಪಡಿಸಬೇಕೆಂಬ ಪ್ರಶ್ನೆಯು ತಲೆದೋರುವುದು. ಅದಕ್ಕೆ ಉತ್ತರವನ್ನು ಹೀಗೆ ಕೊಡಬಹುದು— ವೈಯಕ್ತಿಕತೆಯೆಂದರೆ ವಿಕ್ಷಿಪ್ತತೆಯಲ್ಲ. ಆದರೂ ವೈಯಕ್ತಿಕತೆಗೆ ನಾವು ಹೆಚ್ಚಿನ ಮಹತ್ತ್ವವನ್ನು ಕೊಟ್ಟರೆ, ಜಗತ್ತಿನಲ್ಲಿ ಸರ್ವಸಾಮಾನ್ಯ ಮನುಷ್ಯನ ಉದಾರವಾದ ಧ್ಯೇಯಗಳನ್ನು ತಾತ್ಸಾರ ಮಾಡಿದಂತಾಗುವುದು. ಆದುದರಿಂದ ಶಿಕ್ಷಣದ ಧ್ಯೇಯವನ್ನು ಹೀಗೆ ಹೇಳುವುದು ಒಳಿತೆಂದು ತೋರುವುದು:—

" ಪ್ರತಿಯೊಂದು ವ್ಯಕ್ತಿಗೂ ತನ್ನ ತನ್ನ ವಿಶಿಷ್ಟ ಸಮಾಜದ ಆದರ್ಶ ಸ್ತ್ರೀಪುರುಷರಾಗುವ ಅನುಕೂಲತೆಯನ್ನು ಮಾಡಿಕೊಡುವುದಲ್ಲದೆ, ಆಯಾ ವ್ಯಕ್ತಿಗೆ ವೈಯಕ್ತಿಕತೆಯನ್ನು ಪಡೆಯುವ ಯೋಗ್ಯ ಸಂಧಿಗಳನ್ನು ಒದಗಿಸಿಕೊಡುವುದು ಶಿಕ್ಷಣದ ಗುರಿಯಾಗಿರಬೇಕು. "

**ಡಾ. ನನ್** ಅವರು "ವೈಯಕ್ತಿಕ ಸಂಪೂರ್ಣತೆಯೆ ಶಿಕ್ಷಣದ ಮುಖ್ಯವಾದ ಧ್ಯೇಯವು" ಎಂದು ಹೇಳುವರು. ವ್ಯಕ್ತಿಯ ಸಂಪೂರ್ಣ ವಿಕಾಸಕ್ಕೆ—ಮನೋವಿಕಾಸಕ್ಕೆ—ಅವನ ಸ್ವಾಭಾವಿಕ ಅಭಿರುಚಿ, ಒಲವುಗಳು, ಶಕ್ತಿಗಳು ಇವೇ ಮುಖ್ಯವಾದ ಆಧಾರಗಳಾಗಿರಬೇಕು. ಒಂಟಿಗನಾಗಿ ಉಳಿದು ವ್ಯಕ್ತಿಯು ವಿಕಾಸಹೊಂದಲಾರನು. ಆದುದರಿಂದ ಸಾಮಾಜಿಕ ಸುಖಜೀವನವೇ ಶಿಕ್ಷಣದ ಗುರಿಯೆಂದು ಅವರ ಅಭಿಪ್ರಾಯವಾಗಿರುವುದು.

**(೮) ಸರ್ವಾಂಗಸುಂದರ ವಿಕಾಸ ಅಥವಾ ಬೆಳೆವಣಿಗೆ**— ಮನುಷ್ಯನ ಶಾರೀರಿಕ, ಮಾನಸಿಕ, ನೈತಿಕ ಶಕ್ತಿಗಳನ್ನು ಸರ್ವಾಂಗ ಸುಂದರವಾಗಿ ವಿಕಾಸಗೊಳಿಸುವುದು ಶಿಕ್ಷಣದ ಉದ್ದೇಶವು. ಈ ಉದ್ದೇಶವು ಎಲ್ಲಬಗೆಯ ವಿಕಾಸವೂ ಪರಸ್ಪರ ಸಹಾಯಕವಾಗುವಂತೆ ಸಮಸಮವಾಗಿ ನಡೆಯಬೇಕು, ಯಾವುದೂ ಅತಿರೇಕಕ್ಕೆ ಹೋಗಕೂಡದು; ಒಂದನ್ನುಳಿದು ಬೇರೆಯದು ಮುಂಬರಿಯಬಾರದು; ಎಂಬ ವಿಚಾರಗಳಿಗೆ ಪ್ರಾಶಸ್ತ್ಯವನ್ನು ಕೊಡುವುದು. ಈ ಉದ್ದೇಶಕ್ಕನುಸಾರವಾಗಿ ಐಚ್ಛಿಕ ವಿಷಯಗಳಲ್ಲದೆ ಅನೇಕ ಅನಾವಶ್ಯಕ ವಿಷಯಗಳು ಪಠ್ಯ ವಿಷಯಗಳಲ್ಲಿ ಸೇರುವುವು. ಇದರಲ್ಲಿ ವೈಯಕ್ತಿಕತೆಗೆ ಆಸ್ಪದವೇ ಇಲ್ಲ. ಇಂತಿಷ್ಟು ವಿಷಯಗಳನ್ನು ಕಲಿಸಬೇಕೆಂಬ ನಿಯಮವು ಇದರಲ್ಲಿ ಅಡಕವಾಗಿರುವುದು. ಆದರೆ ಕೇವಲ ವೈಯಕ್ತಿಕ ಅಭಿರುಚಿಗಳಿಗೆ ಮಹತ್ತ್ವವನ್ನು ಕೊಡುವುದು ಸಹ ಸಮಾಧಾನಕರವಾದ ಪರಿಣಾಮವನ್ನು ಉಂಟುಮಾಡುವುದಿಲ್ಲ. ಆದುದರಿಂದ ಸಮತೋಲನವನ್ನಿಡುವ ಪಠ್ಯಕ್ರಮವಿದ್ದು, ವೈಯಕ್ತಿಕತೆಗೆ ತಕ್ಕಷ್ಟು ಆಸ್ಪದವಿರಬೇಕೆಂಬುದು ಸ್ಪಷ್ಟವಿರುವುದು. ಈ ಉದ್ದೇಶವು ಗ್ರೀಸದೇಶದಲ್ಲಿ ಮಾನ್ಯತೆಯನ್ನು ಪಡೆದಿದ್ದಿತು; ಈಗ ಜರ್ಮನಿಯಲ್ಲಿಯೂ ಒಪ್ಪಿಗೆಯನ್ನು ಪಡೆದಿರುವುದು.

ಈ ಧ್ಯೇಯದಲ್ಲಿ ಕೆಲವು ದೋಷಗಳು ಇರುವುವು. ಅವುಗಳನ್ನು ಈ ರೀತಿಯಾಗಿ ವಿಂಗಡಿಸಿ ಹೇಳಬಹುದು—(೧) ಇದು ಮಾನವನ ಸರ್ವ ಶಕ್ತಿಗಳನ್ನು ಸಮನ್ವಿತರೀತಿಯಿಂದ ವಿಂಗಡಿಸಿ ಬೆಳೆಯಿಸಬಹುದಾದರೂ,

ಪ್ರತಿಯೊಂದು ಶಕ್ತಿಯನ್ನು ಅತ್ಯುತ್ತಮವಾದ ಸ್ಥಿತಿಗೊಯ್ಯುವುದು ಇದರಿಂದ ಸಾಧ್ಯವಿಲ್ಲ. (೨) ಎಲ್ಲವನ್ನೂ ಬಲ್ಲವನು ಒಂದರಲ್ಲಾದರೂ ಸರಿಯಾಗಿ ಬಲ್ಲಿದನಾಗುವುದು ಅಸಾಧ್ಯ. (೩) ಸರ್ವಶಕ್ತಿಗಳನ್ನೂ ಬೆಳೆಯಿಸುವುದು ಅವಶ್ಯವಿರುವುದರಿಂದ ಒಟ್ಟಿನಲ್ಲಿ ಪರಸ್ಪರ ವಿರೋಧ ವುಂಟಾಗಿ ಲಾಭವಾಗದೆ ಹಾನಿಯೇ ಆಗುವುದು. (೪) ಈ ಧ್ಯೇಯದಲ್ಲಿ ನಿಶ್ಚಿತತೆಯೂ ಸರಿಯಾದ ದೃಷ್ಟಿಕೋನವೂ ಇಲ್ಲ. ಅಲ್ಲದೆ, ಶಕ್ತಿಗಳಿಗೆ ಸ್ವತಂತ್ರವಾದ ಅಸ್ತಿತ್ತ್ವವಿದೆಯೆಂಬ ಹಳೆಯ ಮಾನಸಶಾಸ್ತ್ರದ ಆಧಾರ ದಿಂದಲೇ ಈ ಉದ್ದೇಶವು ಕಲ್ಪಿಸಲಾಗಿರುವುದು.

**(೬) ಶೀಲಸಂವರ್ಧನೆ (ನೈತಿಕಸಾಮರ್ಥ್ಯದ ಬೆಳೆವಣಿಗೆ)—** ಈ ಉದ್ದೇಶವು ಇಲ್ಲಿಯವರೆಗೆ ಹೇಳಿದ ಉದ್ದೇಶಗಳಿಂದ ಭಿನ್ನವಾಗಿರು ವುದು; ಹೆಚ್ಚು ಸ್ಪಷ್ಟವೂ ನಿಶ್ಚಿತವೂ ಆಗಿರುವುದು. ಇದೇ ಶಿಕ್ಷಣದ ಕೊನೆಯ ಧ್ಯೇಯವೆಂದು ಅರಿಸ್ಟಾಟಲ್, ಹರ್ಬಾರ್ಟ ಮೊದಲಾದ ತತ್ತ್ವಜ್ಞಾನಿಗಳು ಚೆನ್ನಾಗಿ ಪ್ರತಿಪಾದಿಸಿರುವರು. ಅರಿಸ್ಟಾಟಲನು ಮನುಷ್ಯನಲ್ಲಿ ತಾಮಸ ಮತ್ತು ಸಾತ್ತ್ವಿಕ ಎಂಬ ವೃತ್ತಿಗಳು ಇರುವು ವೆಂದು ಅಭಿಪ್ರಾಯಪಡುವನು. ಮನುಷ್ಯನು ಸಾತ್ತ್ವಿಕವೃತ್ತಿಯಿಂದ ತಾಮಸವೃತ್ತಿಯನ್ನು ಗೆಲ್ಲಬೇಕೆಂದು ಹೇಳುವನು. ಸುಧಾರಿಸದೆ ಇದ್ದ ಮನುಷ್ಯನು ಇಂದ್ರಿಯಜನ್ಯವಾದ ಸುಖವನ್ನು ಪಡೆಯುವುದೇ ತನ್ನ ಗುರಿಯೆಂದು ತಿಳಿದರೆ, ನೈತಿಕಜ್ಞಾನವುಳ್ಳ ಮನುಷ್ಯನು ಬೌದ್ಧಿಕ ಆನಂದ ವನ್ನು ಹೊಂದಲು ಹವಣಿಸುವನು ಎಂಬುದು ಅವನ ಅಭಿಪ್ರಾಯ. ಹರ್ಬಾರ್ಟನಾದರೂ ನೀತಿಯ ಕಟ್ಟಡವನ್ನು ಸಹಾನುಭೂತಿಯ ತಳ ಹದಿಯ ಮೇಲೆಯೆ ಕಟ್ಟುವನು; ಮನುಷ್ಯನ ನೈತಿಕ ಸಾಮರ್ಥ್ಯವನ್ನು ಬೆಳೆಯಿಸುವುದೇ ಶಿಕ್ಷಣದ ಉತ್ತಮ ಧ್ಯೇಯವೆಂದು ಹೇಳುವನು; ಮೇಲ್ತರದ ಸುವಿಚಾರಗಳ ಸಾಹಾಯ್ಯದಿಂದ ನೀಚವಿಚಾರಗಳ ಪ್ರಾಬಲ್ಯ ವನ್ನು ಕುಗ್ಗಿಸುವುದೇ ಶಿಕ್ಷಣದ ಧ್ಯೇಯವಾಗಿರುವುದು; ಶಿಕ್ಷಣವು ನೈತಿಕ ಬಲವನ್ನು ಪುಷ್ಟೀಕರಿಸಬೇಕು ಎಂದು ಹೇಳಿ ಇಂದ್ರಿಯನಿಗ್ರಹವೇ ಇದಕ್ಕೆ ಉಪಾಯವೆಂದು ಸೂಚಿಸುವನು.

ಅವನು ನೈತಿಕ ಕೃತಿಯನ್ನು ಕುರಿತು ಹೀಗೆನ್ನುವನು:— ಹಸಿವಿನಿಂದ ಬಳಲುತ್ತಿರುವಾಗಲೂ ಎರಡನೆಯವರ ಆಹಾರವನ್ನು ಅಪಹರಿಸಬಾರದು. ಇಂಥ ಸಂದರ್ಭದಲ್ಲಿ ಪರರ ವಸ್ತುವನ್ನು ಅಪಹರಿಸಬಾರದೆಂಬ ವಿಚಾರವು ನೈತಿಕ ವಿಚಾರವು; ಕಾರ್ಯವು ನೈತಿಕ ಕೃತಿಯು; ಸುಶೀಲ ಸಂಪನ್ನನಾದ ಮನುಷ್ಯನಿಂದ ಅನ್ಯಾಯವು ಎಂದೂ ಘಟಿಸಲಾರದು. ನೈತಿಕ ಕೃತಿಗಳನ್ನೇ ಯಾವಾಗಲೂ ಮಾಡುತ್ತಿರಬೇಕೆಂಬ ಹಂಬಲಿನ ಪರಿಣಾಮವೇ ಶೀಲವು.

ಶೀಲಸಂವರ್ಧನೆಯೇ ಶಿಕ್ಷಣದ ಮುಖ್ಯ ಧ್ಯೇಯವಾಗಿರಬೇಕೆಂದು ಹರ್ಬಾರ್ಟನ ಅಭಿಪ್ರಾಯ. ಉಳಿದೆಲ್ಲ ಧ್ಯೇಯಗಳಿಗಿಂತ ಇದು ಶ್ರೇಷ್ಠವಾಗಿದೆಯೆಂಬುದು ಕೆಳಗಿನ ಕಾರಣಗಳಿಂದ ತಿಳಿಯುವುದು.

(೧) 'ಆಚಾರ ವಿಚಾರಗಳಲ್ಲಿ ನೈತಿಕ ಶ್ರೇಷ್ಠತೆಯನ್ನು ಪಡೆಯುವುದೇ ವ್ಯಕ್ತಿಯ ಪರಿಪೂರ್ಣತೆ'. ಶಾರೀರಿಕ, ಬೌದ್ಧಿಕ, ಕಲಾತ್ಮಕ ಮುಂತಾದ ಎಲ್ಲ ಸಂಸ್ಕೃತಿಯ ಹಿರಿಮೆಯೇ ನೈತಿಕೋನ್ನತಿಯಾಗಿ ಪರಿಣಮಿಸುವುದು. **ಕಾಂಟ** ಒಬ್ಬ ತಜ್ಞನು "ಜಗತ್ತಿನಲ್ಲಿ ಅತ್ಯುತ್ತಮವಾದ ಗುಣವೆಂದರೆ ಸೌಜನ್ಯಪ್ರೇರಿತವಾದ ಇಚ್ಛಾಶಕ್ತಿ." ಎಂದಿರುವನು.

(೨) 'ಸಮಾಜವು ವ್ಯಕ್ತಿಯಿಂದ ಬೇಡುವ ಮುಖ್ಯ ಬೇಡಿಕೆಯೆಂದರೆ ಸಾಮಾಜಿಕ ಸಂಬಂಧಗಳಿಗೆ ಅನ್ವಯಿಸಿದ ನೈತಿಕ ಧರ್ಮವನ್ನು ಪಾಲಿಸುವ ಯೋಗ್ಯತೆ.' ವಿದ್ಯಾರ್ಥಿಗಳನ್ನು ಉತ್ತಮ ನಾಗರಿಕರಾಗುವಂತೆ, ಸಾಮಾಜಿಕ ಘಟಕಗಳಾಗುವಂತೆ, ಸಿದ್ಧಗೊಳಿಸುವುದೇ ಶಿಕ್ಷಣದ ಗುರಿ. ಸಾಮಾಜಿಕ ಜೀವನದಲ್ಲಿಯೇ ನೈತಿಕ ಗುಣಗಳು ಪ್ರಕಟವಾಗುತ್ತವೆ.

(೩) 'ನೈತಿಕ ಸಂಬುದ್ಧಿಯೂ (Enlightenment) ಮತ್ತು ನೈತಿಕ ಜೀವನದ ಬೆಳೆವಣಿಗೆಯೂ ಮಾನಸಿಕ ಸಂಸ್ಕೃತಿಯ ಬೇರೆ ಸ್ವರೂಪದ ನಿಯಮಗಳಿಗೇ ಒಳಗಾಗಿವೆ.' ನೈತಿಕ ಒಲವುಗಳಿಗೆ ಯೋಗ್ಯ ಮಾರ್ಗವನ್ನು ತೋರಿಸಿ ವ್ಯಕ್ತಿಯನ್ನು ಶ್ರೇಷ್ಠ ಜೀವಿಯನ್ನಾಗಿ ಮಾಡುವುದೇ ಶಿಕ್ಷಕರ ಮುಖ್ಯ ಕರ್ತವ್ಯ.

(೪) 'ಪಠ್ಯವಿಷಯಗಳಲ್ಲಿಯು ಅನೇಕ ಮಹತ್ತ್ವದ ವಿಷಯಗಳು ನೈತಿಕ ಶಿಕ್ಷಣಕ್ಕೆ ಬೇಕಾಗಿರುವ ಬಲವಾದ ಮತ್ತು ಯೋಗ್ಯವಾದ ಸಾಧನ ಸಾಮಗ್ರಿಯನ್ನು ಪೂರೈಸುತ್ತವೆ.' ಇತಿಹಾಸ, ಸಾಹಿತ್ಯ, ಮುಂತಾದ ವಿಷಯಗಳನ್ನು ಶೀಲಸಂವರ್ಧನೆಗೆ ಸಹಾಯವಾಗುವಂತೆ ಕಲಿಸುವ ಆವಶ್ಯಕತೆಯನ್ನು ಎಂಬುದನ್ನು ಯಾರೂ ಅಲ್ಲಗಳೆಯರು.

(೫) 'ಶಾಲೆಯು ನೀತಿಶಾಸ್ತ್ರದ ಸಿದ್ಧಾಂತಗಳ ವಿಚಾರಗಳಿಗೆ ಮಾತ್ರ ನಿರ್ಬಂಧಿಸಲ್ಪಟ್ಟಿಲ್ಲ. ಸಾಮಾಜಿಕ ಸಂಸ್ಥೆಯಂತೆ ಅದು ತನ್ನ ಶಿಸ್ತು ಚಟುವಟಿಕೆಗಳ ಮುಖಾಂತರವಾದ ಸಿದ್ಧಾಂತವನ್ನು ಕೃತಿಯಲ್ಲಿ ತರುವ ಕಾರ್ಯಕ್ಷೇತ್ರವಾಗಬಹುದು.' ನೈತಿಕ ನಿರ್ಣಯಗಳು ವೈಯಕ್ತಿಕವ್ಯವಹಾರದಲ್ಲಿ ಪರಿವರ್ತಿತವಾಗುವಂತೆ ಶಿಕ್ಷಣದ ಸ್ವರೂಪವನ್ನು ಶಿಕ್ಷಕರು ಮಾರ್ಪಡಿಸಬೇಕು.

(೬) 'ನೀತಿಶಾಸ್ತ್ರ ಮತ್ತು ಶಿಕ್ಷಣಶಾಸ್ತ್ರ ಇವುಗಳ ಆಧಾರದ ಮೇಲೆ ರಚಿಸಿದ ಪರಿಪೂರ್ಣ ನೈತಿಕಶಿಕ್ಷಣದ ರೂಪರೇಷೆಗಳನ್ನೊಳಗೊಂಡ ಪಠ್ಯ ಕ್ರಮವನ್ನು ಶಿಕ್ಷಕರು ಸುಲಭವಾಗಿ ಸಿದ್ಧಗೊಳಿಸಬಹುದು'.

ಈ ಉದ್ದೇಶವು ಕೂಡ ಸಾಕಷ್ಟು ವಿಸ್ತೃತವಾಗಿ ಅಥವಾ ವ್ಯಾಪಕವಾಗಿ ಇಲ್ಲ; ಪಠ್ಯವಿಷಯಗಳನ್ನು ನಿರ್ಣಯಿಸಲು ಸಹಾಯಕವಾಗುವುದಿಲ್ಲ. ನಮ್ಮ ಶಾಲೆಗಳಲ್ಲಿ ಭಿನ್ನ ಭಿನ್ನವಾದ ಧರ್ಮದವರು ಇರುವರು; ಒಂದು ಧರ್ಮದ ಹೆಸರಿನಿಂದ ಮಾಡುವ ನೈತಿಕ ವಿಚಾರಗಳು ಮತ್ತು ಆಚಾರಗಳು ಬೇರೊಂದು ಧರ್ಮದವರಿಗೆ ಸಮಾಧಾನಕರವೆನಿಸವು.

**(೧೦) ಸಾಮಾಜಿಕ ಅರ್ಹತೆಯನ್ನು ವಿಕಾಸಗೊಳಿಸುವುದು.**– ಇದೇ ಶಿಕ್ಷಣದ ಅಂತಿಮ ಧ್ಯೇಯವು ಎಂದು ಅಮೇರಿಕನ್ನರ ಅಭಿಪ್ರಾಯ. ನೈತಿಕಬಲವನ್ನು ವೃದ್ಧಿಗೊಳಿಸುವ ಧ್ಯೇಯಕ್ಕಿಂತ ಈ ಧ್ಯೇಯವು ಹೆಚ್ಚು ಸ್ಪಷ್ಟವೂ ಸಮಂಜಸವೂ ಆಗಿರುವುದು. ಸಾಮಾಜಿಕ ಹಿತವು ಸಾಧಿಸುವಂತೆ ಶಾಲೆಯ ಚಟುವಟಿಕೆಗಳು ನಡೆಯಬೇಕೆಂದು ಈ ಉದ್ದೇಶವು ಸಾರಿಹೇಳುವುದು. ಶಾಲೆಗಳು ಸಮಾಜದ ನೆರವಿನಿಂದಲೇ ನಡೆಯುವುವು. ಆದುದರಿಂದ ಈ ಧ್ಯೇಯಕ್ಕೆ ಶಾಲೆಗಳಲ್ಲಿ ಸ್ಥಾನವಿರುವುದು ಯೋಗ್ಯ

ವಾದುದಾಗಿದೆ. ಶಾಲೆಯು ಈ ಉಚ್ಚ ಧ್ಯೇಯವನ್ನು ತನ್ನ ಮುಂದಿಟ್ಟು ಕೊಂಡು ವ್ಯಕ್ತಿಯ ಹಿತವನ್ನೂ ಸಮಾಜದ ಕಲ್ಯಾಣವನ್ನೂ ಸಾಧಿಸುವಂತಹ ಸರ್ವಜನಾದರಣೀಯ ಸಂಸ್ಥೆಯಾಗಿರಬೇಕು. ಈ ದೃಷ್ಟಿಯಿಂದ ಸಾಮಾಜಿಕಸುಖಜೀವನವೇ ಶಿಕ್ಷಣದ ಅಂತಿಮ ಧ್ಯೇಯವೆಂದು ಹೇಳಿದಂತಾಯಿತು. ಹಾಗಾದರೆ ಸಾಮಾಜಿಕ ಅರ್ಹತೆಯೆಂದರೇನು? ಸಾಮಾನ್ಯವಾಗಿ ಈ ಪ್ರಶ್ನೆಯನ್ನು ಹೀಗೆ ವಿವರಿಸಿ ಹೇಳಬಹುದು.

(೧) ಸಾಮಾಜಿಕ ಅರ್ಹತೆಯುಳ್ಳವನು ಸಮಾಜಕ್ಕೆ ಎಂದೂ ಭಾರವಾಗಿರನು; ಎಂದರೆ, ತಾನೇ ಪ್ರತ್ಯಕ್ಷವಾಗಿ ಜೀವನದ ಸಾಧನಗಳನ್ನು ಹುಟ್ಟಿಸುವುದರಿಂದಾಗಲಿ, ಅಪ್ರತ್ಯಕ್ಷರೀತಿಯಿಂದ ಅವುಗಳ ಉತ್ಪಾದನೆಗೆ ಆವಶ್ಯಕವಾದ ಸಾಹಾಯ್ಯದಿಂದಾಗಲಿ, ಇವನು ತನ್ನ ಭಾರವನ್ನು ವಹಿಸುತ್ತಾನೆ.

(೨) ತನ್ನ ಭಾರವನ್ನು ತಾನು ವಹಿಸುವನಲ್ಲದೆ, ಈತನು ಎರಡನೆಯವರ ಪ್ರಯತ್ನಗಳಿಗೆ ಎಂದೂ ವಿಘ್ನವನ್ನು ತಂದೊಡ್ಡುವುದಿಲ್ಲ.

(೩) ಸಾಮಾಜಿಕ ಪ್ರಗತಿಗಾಗಿ ತನ್ನ ಸಾಮರ್ಥ್ಯವನ್ನು ಎಡೆಬಿಡದೆ ಮನಃಪೂರ್ವಕವಾಗಿ ಉಪಯೋಗಿಸುವನು.

ಈ ಉದ್ದೇಶದಲ್ಲಿ ನಿಃಸ್ವಾರ್ಥದೃಷ್ಟಿಯಿಂದ ಜೀವನದ ಸಾಧನವನ್ನು ದೊರಕಿಸಿಕೊಳ್ಳುವ ಗುರಿಯೂ ಅಡಕವಾಗಿದೆ; ಜ್ಞಾನಸಂಪಾದನೆಯ ಪ್ರಯೋಜನವೂ ಸೇರಿಕೊಂಡಿದೆ; ಯಥಾರ್ಥಜ್ಞಾನವಿಲ್ಲದೆ ಸಮಾಜವು ಪ್ರಗತಿಯ ಹೆಜ್ಜೆಗಳನ್ನು ಇಡಲಾರದು; ಸರ್ವಾಂಗಸುಂದರವಾದ ಬೆಳವಣಿಗೆಯ ಗುರಿಯನ್ನೂ ಇದು ಒಳಗೊಂಡಿದೆ; ಸಮಾಜದ ಹಿತಕ್ಕೆ ಬೇಕಾಗುವ ಶಕ್ತಿಗಳನ್ನೇ ಹೆಚ್ಚಾಗಿ ಪ್ರೋತ್ಸಾಹಿಸುವ ಅನುಕೂಲತೆಯನ್ನು ಈ ಧ್ಯೇಯವು ಒದಗಿಸಿಕೊಡುವುದು; ನೈತಿಕ ಬಲಸಂವರ್ಧನೆಯ ಉದ್ದೇಶವೂ ಇದರಲ್ಲಿ ಗೋಚರವಾಗುತ್ತಿದೆ; ಸಂಸ್ಕೃತಿವರ್ಧನೆಯೂ ಕೂಡಿಕೊಂಡಿದೆ. ಒಟ್ಟಿನಲ್ಲಿ ಈ ಧ್ಯೇಯವು ಹಿಂದೆ ಹೇಳಿದ ಎಲ್ಲ ಉದ್ದೇಶಗಳ ಜನನಿಯಾಗಿದೆಯೆಂದೂ ಅಥವಾ ಸರ್ವ ಧ್ಯೇಯಗಳೂ ಇದರ ಛತ್ರಚ್ಛಾಯೆಯನ್ನು ಆಶ್ರಯಿಸಿವೆಯೆಂದೂ ಹೇಳಿದರೆ ಅತಿಶಯೋಕ್ತಿಯಾಗಲಾರದು.

ಪ್ರತಿಯೊಂದು ಶಾಲೆಯು ತನ್ನಲ್ಲಿ ವಿದ್ಯಾಭ್ಯಾಸಮಾಡುವವನಿಗೆ ಮೇಲೆ ವಿವರಿಸಿದ 'ಸಾಮಾಜಿಕ ಅರ್ಹತೆ'ಯನ್ನು ತಂದುಕೊಡಬೇಕು. ಗತಿಸಿಹೋದ ಭೂತಕಾಲದ ಅಥವಾ ಆಕಾಶಕುಸುಮದಂತಿರುವ ಮನೋಹರವಾದ ಭವಿಷ್ಯತ್ಕಾಲದ ಸಲುವಾಗಿ ಸಿದ್ಧಗೊಳಿಸದೆ, ತೀರ ಸಮೀಪದಲ್ಲಿರುವ ವಿದ್ಯಾರ್ಥಿಯ ಬೇಡಿಕೆಗಳ ಪೂರೈಕೆಯಾಗುವಂತೆ ಶಾಲೆಯು ತನ್ನ ಕಾರ್ಯವನ್ನು ನೆರವೇರಿಸಬೇಕು. ಹೀಗೆ ಮಾಡುವ ಶಾಲೆಯೇ ಆದರ್ಶ ಶಾಲೆ.

**(೧೧) ಆತ್ಮವಿಕಾಸ (ಸ್ವವಿಚಾರಗಳ ಪ್ರಕಟನೆ)**— ಹಿಂದೆ ಹೇಳಿದ 'ವೈಯಕ್ತಿಕತೆ'ಯನ್ನು ಸಾಧಿಸಬೇಕೆಂಬ ಉದ್ದೇಶವನ್ನು ಅತಿ ರೇಕಕ್ಕೆ ಒಯ್ಯುವುದರಿಂದ ಶಿಕ್ಷಣದ ಧ್ಯೇಯವು 'ಸ್ವವಿಚಾರಗಳ ಪ್ರಕಟನೆ' ಅಥವಾ 'ಆತ್ಮವಿಕಾಸ'ವೆಂಬ ರೂಪಕ್ಕೆ ಬರುವುದು; ಸಂಪ್ರದಾಯ ಗಳನನುಸರಿಸಿ ವ್ಯಕ್ತಿಯ ಮೇಲೆ ಹಾಕಿದ, ಮತ್ತು ಸಮಾಜರೂಢಿಯ ಬಲದಿಂದ ಬಂದ,ಬಂಧನಗಳಿಂದಮುಕ್ತವಾಗುವುದು; ತನ್ನ ಸ್ವಭಾವಕ್ಕನು ಸರಿಸಿ ಸಹಜಪ್ರವೃತ್ತಿಗಳಿಗೂ ಒಲವುಗಳಿಗೂ ಅಬಾಧಿತ ಸ್ವಾತಂತ್ರ್ಯವನ್ನು ಕೊಡುವುದು, ವೈಯಕ್ತಿಕಜೀವನವನ್ನು ಸಾಗಿಸುವುದು— ಇವೇ ಮುಂತಾದ ರೂಪಗಳನ್ನು ಈ ಉದ್ದೇಶವು ತಾಳುವುದು. ಸ್ವಾಭಾವಿಕ ವಿಚಾರಗಳನ್ನು ಬತ್ತಿಡುವುದರಿಂದ ಶಾರೀರಿಕ, ಮಾನಸಿಕ ತೊಂದರೆ ಗಳುಂಟಾಗಬಹುದು. ಆದರೆ, ಈ ಉದ್ದೇಶವು ನಿರಂಕುಶ ಅಭಿಪ್ರಾಯ ಗಳನ್ನು ಹೆಚ್ಚಿಸಿ, ಸಮಾಜವಿರೋಧಕಸ್ಥಿತಿಯನ್ನು ತಂದು, ಇಷ್ಟಾರ್ಥವು ಈಡೇರುವಂತೆ ಮಾಡುವುದಿಲ್ಲ. ಸಹಜಪ್ರವೃತ್ತಿಗಳಿಗೆ ನಿರಂಕುಶ ಪ್ರಭುತ್ವವು ದೊರೆತರೆ, ಸಾಮಾಜಿಕ ಜೀವನವು ಅಶಕ್ಯವಾಗಿ ಅನರ್ಥ ವುಂಟಾಗುವುದು.

ವೈಯಕ್ತಿಕ ಸ್ವಾತಂತ್ರ್ಯವು ಪರರ ಸ್ವಾತಂತ್ರ್ಯಕ್ಕೆ ಬಾಧಕವಾಗ ದಂತೆ ಅದನ್ನು ಮಿತಿಯಲ್ಲಿಡಬೇಕು. ಪರರ ಸ್ವಾತಂತ್ರ್ಯಕ್ಕೆ ಇದರಿಂದ ಬಾಧೆಯುಂಟಾದರೆ, ಅದು ಸ್ವಚ್ಛಂದತೆ ಅಥವಾ ಸ್ವೈರವೃತ್ತಿಯೆನಿಸು ವುದು. ಸ್ವೈರವೃತ್ತಿಯು ವ್ಯಕ್ತಿಗೂ ಹಾನಿಕರ, ಸಮಾಜಕ್ಕೂ ಅಹಿತಕರ.

**(೧೨) ಆತ್ಮಸಿದ್ಧಿ.**—ಈ ಉದ್ದೇಶದಲ್ಲಿ ವ್ಯಕ್ತಿಯು ಸ್ವಾನುವರ್ತನದಿಂದ ಹೇಗೆ ಪರರಿಗೆ ಆದರ್ಶವಾಗಿರಬೇಕೆಂಬುದು ಸೂಚಿಸಲ್ಪಟ್ಟಿದೆ. 'ಆತ್ಮವಿಚಾರ ಪ್ರಕಟನೆ' ಯಲ್ಲಿ 'ಆತ್ಮ' ಶಬ್ದದ ಅರ್ಥವು ಅದು 'ವಸ್ತುತಃ ಸ್ವಾಭಾವಿಕವಾಗಿ ಇದ್ದಂತೆ' ಎಂದಿದೆ. ಆತ್ಮವಿಕಾಸವು ಆತ್ಮಸಮರ್ಥನದಿಂದ ಸಾಧ್ಯವಾಗುವುದು; ಆತ್ಮಸಮರ್ಥನವು ಪ್ರಾಮುಖ್ಯವಾಗಿ ವೈಯಕ್ತಿಕ ವಿಚಾರಗಳಿಗೆ ಪ್ರಾಶಸ್ತ್ಯವನ್ನು ಕೊಡುವುದು. 'ಆತ್ಮಸಿದ್ಧಿ' ಯಲ್ಲಿಯ 'ಆತ್ಮ' ದ ಅರ್ಥವು ಉದಾತ್ತ-ವ್ಯಾಪಕ-ವಿಶ್ವಕುಟುಂಬದ ವಿಚಾರಗಳಿಂದ ಪ್ರೇರಿತವಾಗಿರುವುದು. ಸ್ವಾರ್ಥದಿಂದ ಸಾಮಾಜಿಕ ಹಿತವು ಬೆಳೆಯಬೇಕಲ್ಲದೆ ಸಮಾಜದ ನಾಶವಾಗಬಾರದೆಂದು ಈ ವ್ಯಾಪಕ ವಿಚಾರವು ಬೋಧಿಸುತ್ತದೆ. ಆತ್ಮಸಿದ್ಧಿಯು ಸ್ವಾರ್ಥಪರಾಯಣವಾಗದೆ ಆದರ್ಶವಾದ ಸ್ವಾರ್ಥದಿಂದ ಸಮಾಜದ ಆತ್ಮವನ್ನು ಪರಿಪೋಷಿಸುತ್ತದೆ. ಆದರ್ಶವಾಗುವ ಸಾಮಾಜಿಕ ಜೀವನದಲ್ಲಿಯೇ, ಎಂದರೆ, ಆತ್ಮಗಳ ಸಮ್ಮೇಲನದಲ್ಲಿಯೇ, ಆತ್ಮಸಿದ್ಧಿಯು ಲಭಿಸುವುದು.

ಈ ದೃಷ್ಟಿಯಿಂದ ವಿಚಾರಿಸಿದರೆ, ಶಿಕ್ಷಣವು ವಿದ್ಯಾರ್ಥಿಗಳ ಶಕ್ತಿಯ ಮೇಲ್ಮೆ-ಕೀಳ್ಮೆಗಳನ್ನು ಶೋಧಿಸಿ ಆತ್ಮೋನ್ನತಿಯನ್ನು ಸಾಧಿಸುವ ಅನುಕೂಲತೆಯನ್ನು ಅವರಿಗೆ ಒದಗಿಸಿಕೊಡಬೇಕು. ಹೀಗೆ ಮಾಡಿದರೆ, ವಿದ್ಯಾರ್ಥಿಗಳು ತಾವು ಕಂಡುಹಿಡಿದ ಅನುಭವಗಳಿಂದ ಜನತೆಯ ಸಾಮಾನ್ಯಜ್ಞಾನಭಾಂಡಾರದ ಬೆಳೆವಣಿಗೆಗೆ ಸಹಾಯಕವಾಗುವ ಸಂಭವವಿದೆ. ಆಧ್ಯಾತ್ಮಿಕ ಜೀವನದ ಜಾಗೃತಿಯನ್ನು ಹುಟ್ಟಿಸುವುದೇ ಈ ಧ್ಯೇಯದ ತಿರುಳೆಂದು ಸ್ಪಷ್ಟವಾಗುವುದು.

ಇಲ್ಲಿಯ ವರೆಗೆ ಶಿಕ್ಷಣದ ಹನ್ನೆರಡು ಬೇರೆ ಬೇರೆ ಧ್ಯೇಯಗಳನ್ನು ವಿವರಿಸಿದಂತಾಯಿತು. ಅವುಗಳನ್ನು ಕಲ್ಪಿಸುವಾಗ ಅವು ಶಿಕ್ಷಣದ ಬೇರೆ ಬೇರೆ ಸ್ವರೂಪಗಳನ್ನು ವಿಚಾರಕ್ಷೇತ್ರದಲ್ಲಿ ತರುವುವು. ಶಿಕ್ಷಣದ ಅನಂತ ಸ್ವರೂಪವನ್ನು ಚಿಕ್ಕದಾದ ವ್ಯಾಖ್ಯೆಯ ಕಟ್ಟಿನಲ್ಲಿ ಬಂಧಿಸುವುದು ಸಾಧ್ಯವಿಲ್ಲ. ಶಿಕ್ಷಣವೆಂದರೆ ಬೆಳೆವಣಿಗೆಯೆಂದೂ ಸಾಮಾಜಿಕ ಪ್ರಶ್ನೆಯೆಂದೂ ಜೀವನಸಿದ್ಧತೆಯೆಂದೂ ಕಲಿಸುವ ಕ್ರಮವೆಂದೂ ಉತ್ತಮ ರೂಢಿಗಳನ್ನು

ಕಲಿಸುವುದೆಂದೂ ಆತ್ಮವಿಕಾಸವೆಂದೂ ಜೀವನವು ಸರಾಗವಾಗಿ ನಡೆಯು ವಂತೆ ಹಣವನ್ನು ಪೂರೈಸುವ ಸಾಧನವೆಂದೂ— ಹೀಗೆ ನಾನಾರೀತಿ ಯಾಗಿ ವಿಚಾರಿಸಿದೆವು. ಈ ಎಲ್ಲ ಸ್ವರೂಪಗಳನ್ನು ಒಟ್ಟುಗೂಡಿಸುವ ಸರ್ವವ್ಯಾಪಕವಾದ ವ್ಯಾಖ್ಯೆಯು ಈ ವರೆಗೂ ಯಾರಿಂದಲೂ ಸಿದ್ಧವಾ ಗಿಲ್ಲ. ಆದುದರಿಂದ ಕೆಳಗಿನ ಹಿರಿಯ ಮಾತಿನಿಂದಲೇ ಸಮಾಧಾನ ಪಡೆಯಬೇಕಾಗಿದೆ. "ಸತ್ಯವನ್ನು ಕಂಡುಹಿಡಿದಾಗ ಆಗುವ ಆನಂದ ಕ್ಕಿಂತಲೂ ಸತ್ಯಾನ್ವೇಷಣೆಯೇ ಹೆಚ್ಚಿನ ಆನಂದವನ್ನು ಕೊಡುವುದು ಆಶೆಯ ಕಿರಣಗಳ ಪ್ರಕಾಶದಿಂದ ಮುಂದೆ ಸಾಗುತ್ತ ಹೋಗುವುದೇ ನಿರ್ದಿಷ್ಟ ಸ್ಥಳಕ್ಕೆ ಹೋಗಿಮುಟ್ಟುವುದರಿಂದ ಉಂಟಾಗುವ ಆನಂದ ಕ್ಕಿಂತಲೂ ಶ್ರೇಷ್ಠವಾದ ಆನಂದವನ್ನೀಯುವುದು"

ಉದಾರ ಶಿಕ್ಷಣವಾದಿಯಾದ **ಜೆ. ಎಚ್. ನ್ಯೂಮನ್ನನು** ವಿಷಯ ಗಳನ್ನು ಅವುಗಳ ಮಹತ್ತ್ವದ ಮತ್ತು ಆನಂದದ ಸಲುವಾಗಿಯೇ ಅಭ್ಯಸಿಸಬೇಕೆಂದು ನಿರ್ಬಂಧಪಡಿಸುವನು; ಆದರೆ, ಪ್ರಜಾಸತ್ತಾತ್ಮಕ ವಾತಾವರಣದಲ್ಲಿ ಬೆಳೆದ ಅಮೇರಿಕೆಯ **ಡಾ. ಜಾನ್ ಡ್ಯೂಯಿ** ಎಂಬವನು ಯಾವ ವಿಷಯಗಳನ್ನು ಕೈಕೊಂಡರೂ, ಅವುಗಳ ಉಪಯುಕ್ತತೆಯ ವಿಚಾರವಿಲ್ಲದೆ ಅವುಗಳನ್ನು ಅಭ್ಯಾಸಿಸಿದರೆ, ಅಭ್ಯಾಸವು ಚೆನ್ನಾಗಿ ನಡೆಯು ಲಾರದೆಂದು ಆಕ್ಷೇಪಿಸುವನು. ಶಿಕ್ಷಣದ ಯಾವ ಧ್ಯೇಯವಾದರೂ ಸಮಾಜಸುಧಾರಕರ ದೃಷ್ಟಿಯಿಂದಲೇ ಕೈಕೊಳ್ಳಲ್ಪಟ್ಟಿದೆಯೆಂದು ಅವನ ಅಭಿಪ್ರಾಯ. **ಟಿ. ಎಚ್. ಹಕ್ಸ್ಲೆಯು** ಶಿಕ್ಷಣದ ಎಲ್ಲ ಉದ್ದೇಶಗಳು ಈಡೇರುವಂತೆ ಉದಾರಶಿಕ್ಷಣದ ವಿಷಯವಾಗಿ ತನ್ನ ವಿಚಾರಗಳನ್ನು ಮುಂದೆ ಹೇಳಿದಂತೆ ವಿವರಿಸಿದ್ದಾನೆ. ಶಿಕ್ಷಣಪ್ರೇಮಿಗಳು ಈತನ ವಿಚಾರಗಳನ್ನು ಗಮನಿಸಲೇಬೇಕು.

"ಉದಾರಶಿಕ್ಷಣವನ್ನು ಪಡೆದವನಲ್ಲಿ ಕೆಳಗಿನ ಲಕ್ಷಣಗಳು ತೋರು ವುವು. ತಾರುಣ್ಯದಲ್ಲಿ ದೊರೆತ ಶಿಕ್ಷಣದ ಫಲದಿಂದ ಅವನ ದೇಹವು ಅವನ ಇಚ್ಛಾನುಸಾರಿಯಾಗಿ ನಡೆಯುವುದು. ಅದು ಯಂತ್ರದಂತೆ ತನಗೆ ಸಾಧ್ಯವಿದ್ದ ಮಟ್ಟಿಗೆ ಆಯಾ ಕಾರ್ಯವನ್ನು ಅನಾಯಾಸವಾಗಿಯೂ

ಆನಂದದಿಂದಲೂ ಜರುಗಿಸುವುದು. ಅವನ ಬುದ್ಧಿಯು ತರ್ಕಬದ್ಧವಾದ ಭಾವನಾರಹಿತವಾದ 'ಎಂಜಿನ'ದಂತೆ ಇರುವುದು. ಅದರ ಎಲ್ಲ ಭಾಗಗಳೂ ಅಚ್ಚುಕಟ್ಟಾಗಿದ್ದು ಉತ್ತಮಸಿದ್ಧತೆಯ ಸ್ಥಿತಿಯಲ್ಲಿರುವುವು; ಉಗಿಯ ಯಂತ್ರದಂತೆ ಬೇಕಾದ ಕಾರ್ಯವನ್ನು ಕೈಕೊಳ್ಳಲು ಸಿದ್ಧವಿರುವುದು. ಜೇಡಹುಳುವಿನ ಎಳೆಯಂತಹ ಸೂಕ್ಷ್ಮವಿಚಾರಗಳಲ್ಲಿಯಾಗಲಿ, ಮನಸ್ಸಿನಲ್ಲಿಯ ಸ್ಥಿರವಾದ ವಿಚಾರಗಳನ್ನು ಸಿದ್ಧಗೊಳಿಸುವುದರಲ್ಲಿಯಾಗಲಿ, ಅದು ಸದಾ ತತ್ಪರವಾಗಿರುವುದು. ಅವನ ಮನಸ್ಸು ಅದ್ಭುತವಾದ ಸೃಷ್ಟಿಯ ನಿಜಸ್ವರೂಪಗಳಿಂದ ಮತ್ತು ಅವುಗಳ ಸಾಮಾನ್ಯ ನಿಯಮಗಳಿಂದ ತುಂಬಿರುವುದು. ಅವನ ಮನೋವಿಕಾರಗಳು ಅವನ ಬಲವಾದ ಇಚ್ಛಾಶಕ್ತಿಯ ದಾಸಾನುದಾಸರಂತೆ ವರ್ತಿಸುವುವು. ಅವನ ಇಚ್ಛಾಶಕ್ತಿಯು ಸೂಕ್ಷ್ಮವಾದ ವಿವೇಕಬುದ್ಧಿಯ ಸೇವಕನಂತೆ ಇರುವುದು. ಅವನು ಸ್ವಾಭಾವಿಕವಾದ ಅಥವಾ ಕೃತ್ರಿಮವಾದ ಸೌಂದರ್ಯವನ್ನು ಪ್ರೀತಿಸುವನು; ನೀಚತ್ತ್ವವನ್ನು ಜರೆಯುವನು; ಪರರನ್ನು ತನ್ನಂತೆ ಬಗೆಯುವನು. ಈ ಎಲ್ಲ ಗುಣಗಳನ್ನು ಪಡೆದವನು ಮಾನವನಿಗೆ ಸಾಧ್ಯವಿದ್ದಮಟ್ಟಿಗೆ ಸೃಷ್ಟಿಯ ಅಥವಾ ನಿಸರ್ಗದ ಕೂಡ ಐಕ್ಯದಿಂದ ನಡೆಯಬಲ್ಲನು; ನಿಸರ್ಗದಿಂದ ಸರ್ವಲಾಭವನ್ನೂ ಪಡೆಯುವನು. ನಿಸರ್ಗವೂ ಅವನಿಗೆ ಎಲ್ಲ ಬಗೆಯ ಲಾಭವನ್ನು ದೊರಕಿಸಿಕೊಡುವುದು. ವ್ಯಕ್ತಿ-ನಿಸರ್ಗಗಳ ಸಹಕಾರವು ಇಲ್ಲಿ ಆದರ್ಶವಾಗಿ ಕಂಡುಬರುವುದು. ನಿಸರ್ಗವು ಅವನನ್ನು ಉಪಚರಿಸುವ ತಾಯಿಯಂತೆಯೂ ಅವನು ಅವಳ ಮುಖದಂತೆಯೂ ಅವಳ ಜೀವಕಳೆಯಿಂದ ತುಂಬಿದ ಆತ್ಮನಂತೆಯೂ ಅವಳ ಅರ್ಚಕನಂತೆಯೂ ಅವಳ ಗೂಢಾರ್ಥವನ್ನು ಅಧಿಕಾರವಾಣಿಯಿಂದ ಜಗತ್ತಿಗೆ ತಿಳಿಹೇಳುವವನಂತೆಯೂ ಗೋಚರಿಸುವನು."

ಮುಂಬಯಿ ಸರಕಾರದ ಮಾನ್ಯ ಮುಖ್ಯ ಮಂತ್ರಿಗಳೂ ಶಿಕ್ಷಣ ಮಂತ್ರಿಗಳೂ ಆಗಿದ್ದ **ಶ್ರೀ. ಬಿ. ಜಿ. ಖೇರರು** ಧಾರವಾಡದಲ್ಲಿ (೧೨-೧-೧೯೪೨) ಶಿಕ್ಷಣದ ಧ್ಯೇಯಗಳ ಸಮಾರೋಪವನ್ನು ಮಾಡುವಾಗ ಹೊರಹೊಮ್ಮಿಸಿದ ವಿಚಾರಗಳನ್ನು ಗಮನಿಸಿದರೆ, ಸರ್ವಮಾನ್ಯವಾದ

ಧ್ಯೇಯವನ್ನು ನಾವು ಕಂಡುಹಿಡಿದಂತಾಗುವುದು. ಅವರು ಹೀಗೆ ತಮ್ಮ ಅಭಿಪ್ರಾಯವನ್ನು ವ್ಯಕ್ತಗೊಳಿಸಿದರು :—

" ಜೀವನದ ಧ್ಯೇಯವೇ ಶಿಕ್ಷಣದ ಧ್ಯೇಯವು. ನಮ್ಮ ಜೀವನವು ಸುಖಮಯವಾಗಿ ಸಾಗುವಂತೆ ಶಾರೀರಿಕ, ಬೌದ್ಧಿಕ, ಆಧ್ಯಾತ್ಮಿಕ, ಭಾವನಾಪರ—ಸಂಸ್ಕಾರಗಳನ್ನು ಪಡೆಯುವುದೇ ಶಿಕ್ಷಣವು. ಇಂತಹ ಶಿಕ್ಷಣದ ಕ್ಷೇತ್ರವು ಜೀವನದಷ್ಟೇ ವಿಶಾಲವಾಗಿರುವುದು. ಜೀವನವು ಪರಮಾತ್ಮನು ನಮಗೆ ಕೊಟ್ಟ ಆಹ್ವಾನವು. ಜೀವನದಲ್ಲಿಯ ಅನೇಕ ಸಂಕಟಗಳನ್ನು ನಿವಾರಿಸಿಕೊಂಡು ನಮ್ಮ ಜೀವನವನ್ನು ಸಾರ್ಥಕ ಗೊಳಿಸಿ ತೋರಿಸಿದರೆ, ಆ ಆಹ್ವಾನಕ್ಕೆ ತಕ್ಕ ಉತ್ತರವನ್ನು ಕೊಟ್ಟಂತಾಗುವುದು. ಆದುದರಿಂದ ತನ್ನನ್ನು ತಾನು ಮರೆತು ಪರಹಿತಕ್ಕಾಗಿ ದುಡಿಯುವಂಥ ಶ್ರೇಷ್ಠ ಜನರನ್ನು—ಪರಿಪೂರ್ಣ ಮಾನವರನ್ನು—ಸಿದ್ಧಗೊಳಿಸುವುದೇ ಶಿಕ್ಷಣದ ಧ್ಯೇಯವು. "

ಈ ಎಲ್ಲ ವ್ಯಾಖ್ಯೆಗಳಲ್ಲಿಯೂ ಶಿಕ್ಷಣದ ಕೆಲಕೆಲವು ಅಂಶಗಳು ಇದ್ದೇ ಇವೆ. ಆದರೆ ಯಾವ ವ್ಯಾಖ್ಯೆಯಲ್ಲಿಯೂ ಯಾವ ಉದ್ದೇಶದಲ್ಲಿಯೂ ಅದರ ಎಲ್ಲ ಸ್ವರೂಪಗಳೂ ಕಂಡುಬರುವುದಿಲ್ಲ. ಆದಾಗ್ಯೂ ವ್ಯಾವಹಾರಿಕ ಉಪಯೋಗವಾಗುವಂತೆ ಶಿಕ್ಷಣದ ಧ್ಯೇಯಗಳ ಸಾರವನ್ನೊಳಗೊಂಡ ಸಾಮಾನ್ಯ ಸ್ವರೂಪವನ್ನು ಗೊತ್ತುಪಡಿಸುವ.

ಮಾನವ ಜೀವನಕ್ಕೆ ಸಂಬಂಧಿಸಿದ ಸಾಮಾನ್ಯ ವಿಚಾರಗಳಲ್ಲಿ ಪೌರ್ವಾತ್ಯ ಮತ್ತು ಪಾಶ್ಚಾತ್ಯ ದೇಶಗಳು ಭಿನ್ನಾಭಿಪ್ರಾಯವುಳ್ಳವುಗಳು ಆಗಿವೆಯೆಂದು ಅನೇಕರು ಹೇಳುತ್ತಾರೆ. ಅದರಂತೆ ಶಿಕ್ಷಣಕ್ಷೇತ್ರದಲ್ಲಿಯೂ ಅವು ಸಮಾನ ಧ್ಯೇಯಗಳನ್ನಿಟ್ಟುಕೊಳ್ಳಲಾರವೆಂದು ಹಲವರು ಅಭಿಪ್ರಾಯ ಪಡುತ್ತಾರೆ. ಆದರೆ ಮಾನವನು ಮನಸ್ಸುಮಾಡಿದರೆ, ಯಾವುದು ತಾನೆ ಅಸಾಧ್ಯ? ಪಾಶ್ಚಾತ್ಯ ರಾಷ್ಟ್ರಗಳ ಶೈಕ್ಷಣಿಕ ಧ್ಯೇಯಗಳ ಪ್ರತಿನಿಧಿಗಳು ಎಂದರೆ ಅಮೇರಿಕೆಯ ಜಾನ್ ಡ್ಯೂಯಿಯವರು; ಪೌರ್ವಾತ್ಯ ರಾಷ್ಟ್ರಗಳ ಶಿಕ್ಷಣದ ಧ್ಯೇಯಗಳ ಪ್ರತಿನಿಧಿಗಳು ದಿವಂಗತ ಕವೀಂದ್ರ ರವೀಂದ್ರನಾಥ

ಠಾಕೂರರು. ಇವರಿರ್ವರ ಶಿಕ್ಷಣದ ಗುರಿಗಳು ಒಂದೇ ಧ್ಯೇಯವುಳ್ಳ ಪ್ರಪಂಚದ ಉದಾತ್ತ ಶಿಕ್ಷಣದ ಗುರಿಯಾಗುವುವು.

**ಪಾಶ್ಚಾತ್ಯ ದೇಶಗಳ ಧ್ಯೇಯವಾದ ಸಾಮಾಜಿಕ ಸುಖಜೀವನ** ( Social Efficiency ) **ಮತ್ತು ಪೌರ್ವಾತ್ಯ ದೇಶಗಳ ಗುರಿಯಾದ ಆತ್ಮಸಿದ್ಧಿ** (Self-Realisation) **ಇವೆರಡೂ ಗುರಿಗಳನ್ನು ಸಾಧಿಸುವ ಧ್ಯೇಯವೇ ಆದರ್ಶ ಧ್ಯೇಯವಾಗುವುದು.** ಈ ಧ್ಯೇಯವನ್ನು ಆಚರಣೆಯಲ್ಲಿ ತರುವುದರಿಂದಲೇ ಮಾನವ ಕುಟುಂಬದ ಮೇಲ್ಮೆಯ ಮಂದಿರವು ಶೋಭಿಸುವುದು. ಜಗತ್ತಿನಲ್ಲಿ ಸುಖ-ಶಾಂತಿ-ಸಂಸ್ಕೃತಿಗಳ ಸಾಮ್ರಾಜ್ಯವು ನೆಲಸುವುದು.

೬

# ನೂತನ ಶಿಕ್ಷಣದ ವೈಶಿಷ್ಟ್ಯಗಳು

ಇತ್ತೀಚೆಗೆ ಪ್ರಪಂಚದಲ್ಲಿ ಒಂದು ನವಮನ್ವಂತರದ ಪ್ರಾರಂಭವಾಗಿದೆ. ಮಾನವಜೀವನಕ್ಕೆ ಸಂಬಂಧಿಸಿದ ಪ್ರತಿಯೊಂದು ಕ್ಷೇತ್ರದಲ್ಲಿ-ರಾಜಕೀಯ, ಸಾಮಾಜಿಕ, ಧಾರ್ಮಿಕ, ನೈತಿಕ, ವೈಜ್ಞಾನಿಕ, ಸಾಂಸ್ಕೃತಿಕ-ಇತ್ಯಾದಿಗಳಲ್ಲಿ ಹೊಸತನವು ಕಾಣಬರುತ್ತಲಿದೆ. ಶೈಕ್ಷಣಿಕ-ಕ್ಷೇತ್ರದಲ್ಲಿಯೂ ಈ ಹೊಸತನವು ಗೋಚರಿಸುತ್ತಲಿದೆ. ಈ ಕ್ಷೇತ್ರದಲ್ಲಿ ದುಡಿಯುವ ಶಿಕ್ಷಕರಲ್ಲಿಯೂ ಆತ್ಮಜಾಗೃತಿಯಾಗಿದೆ. ಅವರು ತಮ್ಮ ಹೊಣೆಗಾರಿಕೆಯನ್ನು ಚೆನ್ನಾಗಿ ತಿಳಿದುಕೊಂಡಿದ್ದಾರೆ; ತಮ್ಮಲ್ಲಿ ಸಂಘಟನೆಯನ್ನೂ ಮಾಡಿಕೊಂಡಿದ್ದಾರೆ; ಶಿಕ್ಷಣದಲ್ಲಿ ಸಾಕಷ್ಟು ಕೌಶಲ್ಯವನ್ನು ಒದಗಿಸಿಕೊಂಡಿದ್ದಾರೆ; ತಮ್ಮ ಹೋರಿಯು ಲೋಕಸೇವೆ ಎಂದು ನಂಬಿ, ರಾಷ್ಟ್ರನಿರ್ಮಾಣ ಕಾರ್ಯವು ತಮ್ಮಿಂದ ಹೇಗೆ ಸಮರ್ಪಕವಾಗಿ ಜರುಗೀತೆಂಬ ಪ್ರಶ್ನೆಯನ್ನು ತಾವೇ ಬಿಡಿಸತೊಡಗಿದ್ದಾರೆ. ಶಿಕ್ಷಕರ ಸಂಘಗಳು ಸ್ಥಾಪಿಸಲ್ಪಟ್ಟಿವೆ. ಪ್ರಾಥಮಿಕ, ಮಾಧ್ಯಮಿಕ, ಪ್ರೌಢತರಗತಿಗಳ ವಿದ್ಯಾಲಯಗಳ ಶಿಕ್ಷಕರ ಸಮ್ಮೇಲನಗಳು ಜರುಗತೊಡಗಿವೆ. ಅವುಗಳಲ್ಲಿ ಶಿಕ್ಷಣವನ್ನು ಕುರಿತು ಅನೇಕ ಸಮಸ್ಯೆಗಳನ್ನು ಬಿಡಿಸುವ ಮಾರ್ಗಗಳನ್ನು ಶೋಧಿಸಲಾಗುತ್ತಿದೆ. ಇದುವರೆಗೆ ನಿರ್ಮಿತವಾದ ಶಿಕ್ಷಣ ಪದ್ಧತಿಗಳಲ್ಲಿ ಸುಧಾರಣೆಗಳು ಆಗಲಾರಂಭಿಸಿವೆ. ಬೇರೆ ಬೇರೆ ಪಠ್ಯ ವಿಷಯಗಳನ್ನು ಕಲಿಸುತಿರುವ ಶಿಕ್ಷಕರ ಬೇರೆ ಬೇರೆ ಸಂಘಗಳೂ ಅಸ್ತಿತ್ವಕ್ಕೆ ಬಂದಿವೆ. ಶಿಕ್ಷಕರು ತಮ್ಮನ್ನು ಬೇರೆ ಹೋರಿಯವರೊಡನೆ ಹೋಲಿಸಿಕೊಂಡು ತಮಗೆ ಹೆಚ್ಚಿನ ಹೊಣೆಗಾರಿಕೆಯುಂಟು, ತಮ್ಮದೇ ಆದ ವ್ಯಕ್ತಿತ್ವವೂ ತಮಗೆ ಇದೆಯೆಂಬುದನ್ನು ಕಂಡುಹಿಡಿದು ಶಿಕ್ಷಣಕ್ಷೇತ್ರದಲ್ಲಿ ಮುಂದುವರಿಯಲು ಪ್ರಾರಂಭಿಸಿದ್ದಾರೆ; ತಮ್ಮನ್ನು ನವಮನ್ವಂತರಕ್ಕೆ ಅನುಗುಣವಾಗಿ ಸುಧಾರಿಸಿಕೊಂಡು ನೂತನ ಶಿಕ್ಷಣಕಾರ್ಯಕ್ಕೆ ತಾವು

ಸಿದ್ಧರಾಗಿದ್ದೇವೆಯೆಂಬುದನ್ನು ತೋರಿಸುತ್ತಿದ್ದಾರೆ. ಅವರಲ್ಲಿಯು ಹಳೆಯ ಸಾಂಪ್ರದಾಯಿಕ ವಿಚಾರಗಳು ಮಾಯವಾಗಲಾರಂಭಿಸಿವೆ; ನೂತನ ಜಾಗೃತಿಯು ನಲಿಯತೊಡಗಿದೆ.

ಈ ಆತ್ಮಜಾಗೃತಿಯ ಫಲವಾಗಿ ಅನೇಕ ನೂತನ ಶಿಕ್ಷಣ ಪದ್ಧತಿಗಳು ಜನ್ಮತಾಳಿವೆ. ಮಾಂಟೇಸರಿ ಪದ್ಧತಿ, ಡಾಲ್ಟನ್ ಪದ್ಧತಿ, ಕ್ರೀಡನ ಪದ್ಧತಿ, ವರ್ಧಾಶಿಕ್ಷಣ ಪದ್ಧತಿ, ವಿದ್ಯಾಮಂದಿರ ಪದ್ಧತಿ ಮುಂತಾದ ಶಿಕ್ಷಣ ಪದ್ಧತಿಗಳು ಶಿಕ್ಷಣಕ್ಷೇತ್ರದಲ್ಲಿ ಕ್ರಾಂತಿಯನ್ನುಂಟುಮಾಡಿವೆ. ಈ ಪದ್ಧತಿಗಳು ನೂತನ ಶಿಕ್ಷಣದ ಕೈದೀಪಗಳು; ಹೊಂಬೆಳಕಿನ ಕಿರಣಗಳು.

ಹಳೆಯ ಶಿಕ್ಷಣಪದ್ಧತಿಯಲ್ಲಿ ವಿಷಯಕ್ಕೆ ಹೆಚ್ಚಿನ ಮಹತ್ತ್ವವನ್ನು ಕೊಡಲಾಗುತ್ತಿದ್ದಿತು. ನೂತನ ಶಿಕ್ಷಣ ಪದ್ಧತಿಗಳಲ್ಲಿ **ವಿಷಯಕ್ಕೆ** ಪ್ರಾಧಾನ್ಯವಿಲ್ಲ; **ಶಿಶುವಿಗೆ** ಪ್ರಾಧಾನ್ಯವಿದೆ. ಶಿಶುವಿನ ಸ್ವಭಾವವನ್ನು ತಿಳಿದಹೊರತು ವಿಷಯವನ್ನು ಚೆನ್ನಾಗಿ ಕಲಿಸಲಾಗುವುದಿಲ್ಲ; ಶಿಶುವಿನ ಸ್ವಭಾವಕ್ಕನುಗುಣವಾದ ವಿಷಯವೇ ಅದರ ಮನಸ್ಸಿಗೆ ಬೇಗನೆ ಚೆನ್ನಾಗಿ ಹಿಡಿಯುವುದು. ಆದುದರಿಂದ ಶಿಶುವೇ ನೂತನ ಶಿಕ್ಷಣದ ಅಧಿಪತಿಯಾಗಿದೆ. ಈ ಮಾತನ್ನು ಮೊದಲು ಕಂಡುಹಿಡಿದು ಶಿಶುವಿಗೆ ಪ್ರಾಧಾನ್ಯವನ್ನು ಕೊಟ್ಟವರಲ್ಲಿ **ರೂಸೋ** ಎಂಬವನು ಮೊದಲಿಗನು. ಅವನಿಂದ ಈ ಹೋರಾಟವು ನಡೆದು ಬಂದು, ಈಗ ಶಿಕ್ಷಣದಲ್ಲಿ ಶಿಶುವಿಗೇ ಪ್ರಾಧಾನ್ಯವು ದೊರಕಿದೆ. ಇದೇ ನೂತನ ಶಿಕ್ಷಣದ ತಳಹದಿಯೂ ವೈಶಿಷ್ಟ್ಯವೂ ಆಗಿದೆ.

ಈ ತತ್ತ್ವವನ್ನೇ ಆಧುನಿಕ ಶಿಕ್ಷಣ ಪದ್ಧತಿಗಳಲ್ಲಿ ಅನುಸರಿಸಲಾಗಿದೆ. ಮಾಂಟೇಸರಿ ಪದ್ಧತಿಯಾಗಲಿ, ಡಾಲ್ಟನ್ ಪದ್ಧತಿಯಾಗಲಿ ಶಿಶುವನ್ನೇ ಮುಂದಿಟ್ಟುಕೊಂಡಿದೆ. ಕ್ರೀಡನ ಪದ್ಧತಿಯೂ ಶಿಶುವಿನ ಒಲವಿನಂತೆಯೇ ಸಿದ್ಧಪಡಿಸಲ್ಪಟ್ಟಿದೆ. ಯೋಜನಾಪದ್ಧತಿಯೂ ಶಿಶುವಿನ ದೃಷ್ಟಿಗೇ ಶರಣು ಹೋಗಿದೆ.

ಈ ನೂತನ ಶಿಕ್ಷಣದಲ್ಲಿ ಶಿಕ್ಷಕನು ಹೇಳಿಕೊಡುವುದು ಕಡಿಮೆಯಾಗಿದೆ; ಮಕ್ಕಳು ತಾವಾಗಿಯೆ ಕೇಳಿ, ತಿಳಿದುಕೊಳ್ಳಲು ಅವಕಾಶವನು

ಕಲ್ಪಿಸಿಕೊಡಲಾಗಿದೆ. ಇದರಿಂದ ಮಕ್ಕಳಲ್ಲಿ ಹೆಚ್ಚು ಹೆಚ್ಚು ತೀವ್ರವಾಗಿ ಸ್ವಯಂಶಿಕ್ಷಣವನ್ನು ಪಡೆಯಬೇಕೆಂಬ ಆತುರತೆಯು ಕಂಡುಬರುವುದು. ಅವರಲ್ಲಿ ಸ್ವಾವಲಂಬನವೃತ್ತಿಯು ಬೆಳೆಯುವುದು. ಆದರೂ ಒಮ್ಮೊಮ್ಮೆ ಶಿಕ್ಷಕನು ಮಕ್ಕಳಿಗೆ ಸಹಾಯಕನಾಗಿ ನಿಂತು ಅವರಲ್ಲಿ ಜ್ಞಾನದ ಅಭಿರುಚಿಯನ್ನು ಹುಟ್ಟಿಸಲು ಪ್ರಯತ್ನಿಸಬೇಕಾಗುವುದು; ಸೋಮಾರಿತನದಿಂದ ಹಾನಿಯಾಗುವುದೆಂಬದನ್ನೂ ಚುರುಕುತನದಿಂದ ಲಾಭವಿದೆಯೆಂಬುದನ್ನೂ ಅವರು ತಿಳಿಯುವಂತೆ ಮಾಡಬೇಕಾಗುವುದು; ಅವರಲ್ಲಿ ವೈಯಕ್ತಿಕ ಚಟುವಟಿಕೆಯನ್ನು ಪ್ರಚೋದಿಸುವ, ಧ್ಯೇಯವನ್ನು ಅಪ್ರತ್ಯಕ್ಷ ರೀತಿಯಿಂದ ಸಾಧಿಸುವ, ಯೋಜನೆಯನ್ನು ಮಾಡಬೇಕಾಗುವುದು. ಈ ನೂತನ ಶಿಕ್ಷಣ ಕ್ರಮಗಳಲ್ಲಿ ಶಿಕ್ಷಕನು ಸಹಾಯಕನೂ ಮಾರ್ಗದರ್ಶಕನೂ ಆಗಿರುವನು; ತನ್ನ ವಿಚಾರಗಳನ್ನೇ ವಿದ್ಯಾರ್ಥಿಯ ಮೇಲೆ ಬಿಂಬಿಸಿ ಅವನನ್ನು ತನ್ನ ಮಾರ್ಗಕ್ಕೆ ಎಳೆಯುವವನಾಗಿರುವುದಿಲ್ಲ; ತನ್ನ ಶಕ್ತಿಗೆ ಸಾಧ್ಯವಿದ್ದಷ್ಟು ಕಾರ್ಯವನ್ನು ಮಾಡಲು ವಿದ್ಯಾರ್ಥಿಗೆ ಇಂಬುಗೊಡುವವನಾಗಿರುವನು.

ಈ ನೂತನ ಶಿಕ್ಷಣದಲ್ಲಿ ಪಠ್ಯಪುಸ್ತಕಗಳ ಸ್ಥಾನ-ಮಾನಗಳೇನೆಂಬುದನ್ನು ಕುರಿತು ಅರಿತುಕೊಳ್ಳುವುದೂ ಅವಶ್ಯವಾಗಿದೆ. ಇದು ವರೆಗೆ ಪಠ್ಯಪುಸ್ತಕಗಳು ಶಿಕ್ಷಕನನ್ನು ಧ್ಯೇಯವಾಗಿಟ್ಟುಕೊಂಡು ಸಿದ್ಧಗೊಳಿಸಲ್ಪಡುತ್ತಿದ್ದವು. ಶಿಕ್ಷಕನ ಜ್ಞಾನವು ಬೆಳೆದರೆ, ವಿದ್ಯಾರ್ಥಿಯ ಜ್ಞಾನವನ್ನು ಬೆಳೆಯಿಸಲು ಸಾಹಾಯ್ಯವಾಗುವುದೆಂಬ ವಿಚಾರವು ಹಳೆಯ ಜನರಲ್ಲಿ ಇದ್ದಿತು. ಆದುದರಿಂದ ಅವರು ವಿಷಯದ ಕಡೆಗೆ ಹೆಚ್ಚಿನ ಗಮನವನ್ನು ಕೊಡುತ್ತಿದ್ದರು. ಈಗಲೂ ಎರಡು ದೃಷ್ಟಿಗಳಿಂದ ಪಠ್ಯಪುಸ್ತಕಗಳು ಸಿದ್ಧವಾಗುತ್ತಲಿವೆ:— (೧) ವಿಷಯದ ದೃಷ್ಟಿಯಿಂದ. (೨) ವಿದಾರ್ಥಿಯ ಅನುಕೂಲತೆಯ ದೃಷ್ಟಿಯಿಂದ. ಎರಡನೆಯ ದೃಷ್ಟಿಯೆ ಈಗ ಹೆಚ್ಚಾಗಿ ಅನುಸರಿಸಲ್ಪಡುತ್ತಿದೆ. ಇದರಲ್ಲಿ ತರ್ಕಬದ್ಧ ವಿವೇಚನೆಗಿಂತ ಮಾನಸಶಾಸ್ತ್ರಕ್ಕನುಸರಿಸಿ ವಿಷಯನಿರೂಪಣೆಯನ್ನು ಮಾಡುವುದು ಕಂಡುಬರುತ್ತಿದೆ. ಈ ದೃಷ್ಟಿಯಿಂದ ಪುಸ್ತಕಗಳನ್ನು ಸಿದ್ಧಮಾಡಿದ ಬಳಿಕ ವಿದ್ಯಾರ್ಥಿಗೆ ಶಿಕ್ಷಕನ ಆವಶ್ಯಕತೆಯು ಉಂಟೋ ಇಲ್ಲವೋ ಎಂಬುದೊಂದು ಪ್ರಶ್ನೆಯು

ಉದ್ಭವಿಸುತ್ತದೆ. ಆದರೆ ಅದನ್ನು ಬಿಡಿಸುವುದು ಕಠಿನವಾದುದಲ್ಲ. ಏಕೆಂದರೆ, ಶಿಕ್ಷಕನ ಆವಶ್ಯಕತೆಯು ಉಳಿಯದಂತೆ ಪಠ್ಯಪುಸ್ತಕಗಳನ್ನು ಸಿದ್ಧಪಡಿಸುವುದೆಂದರೆ ಗಾಳಿಯಲ್ಲಿ ಗೋಪುರವನ್ನು ಕಟ್ಟಿದಂತೆ, ಮರಳಿನ ಮೇಲೆ ಮನೆಯನ್ನು ಕಟ್ಟಿದಂತೆಯೆ ಸರಿ. ಪಠ್ಯಪುಸ್ತಕಗಳಲ್ಲಿ ವರ್ಣಿತವಾದ ವಿಷಯುಗಳನ್ನು ಕಲಿಯುವಾಗ ಶಿಕ್ಷಕನ ಉಪಯೋಗವು ಹೇಗೆ ಉತ್ತಮ ರೀತಿಯಿಂದ ದೊರೆಯುವುದೆಂಬುದೇ ಇಲ್ಲಿ ನಿಜವಾದ ಪ್ರಶ್ನೆಯಾಗಿದೆ. ಶಿಕ್ಷಕನ ಮೇಲೆ ಅವಲಂಬಿಸಿರುವುದು ಆದಷ್ಟು ಕಡಮೆಯಾಗಬೇಕೆಂಬುದನ್ನೇ ನೂತನ ಶಿಕ್ಷಣವು ಬಯಸುತ್ತದೆ. ಶಿಕ್ಷಕನನ್ನು ಅವಲಂಬಿಸುವುದು ಕಡಮೆಯಾದಂತೆ ಶಿಕ್ಷಣವು ಯಶಸ್ವಿಯಾಯಿತೆಂದು ಹೇಳಬಹುದು. ಆದರೆ, ಪಠ್ಯಪುಸ್ತಕಗಳ ಉಪಯೋಗವನ್ನು ಹೇಗೆ ಉತ್ತಮ ರೀತಿಯಲ್ಲಿ ಮಾಡಬೇಕೆಂಬುದನ್ನು ಕಲಿಸಿದರೆ, ಶಿಕ್ಷಕನಿಲ್ಲದೆ ಶಿಕ್ಷಣವು ಚೆನ್ನಾಗಿ ಸಾಗುವುದು. ಆದುದರಿಂದ ಪಠ್ಯಪುಸ್ತಕಗಳು ಶಿಕ್ಷಕನನ್ನು ದೃಷ್ಟಿಯಲ್ಲಿಟ್ಟುಕೊಂಡು ಬರೆಯಲ್ಪಡದೆ, ವಿದ್ಯಾರ್ಥಿಯ ದೃಷ್ಟಿಯನ್ನಿಟ್ಟುಕೊಂಡು ಬರೆಯಲ್ಪಡಬೇಕೆಂಬ ಮಾತು ಸರ್ವಸಮ್ಮತವಾಗಿದೆ. ಈಗ ವಿದ್ಯಾರ್ಥಿಯನ್ನು ಗಮನದಲ್ಲಿಟ್ಟುಕೊಂಡು ಬರೆದ ಪುಸ್ತಕಗಳು ನಿರ್ಮಿತವಾಗಿವೆಯೆಂಬುದು ನೂತನ ಶಿಕ್ಷಣದ ಹೆಗ್ಗುರುತಾಗಿದೆ.

ಶಿಕ್ಷಣವನ್ನು ಕೊಡುವಾಗ ವರ್ಗಕ್ಕೆಲ್ಲ ಮಹತ್ತ್ವವನ್ನು ಕೊಟ್ಟು ವಿಷಯವನ್ನು ಕಲಿಸಬೇಕೊ ವೈಯಕ್ತಿಕವಾಗಿ ವಿದ್ಯಾರ್ಥಿಯ ಕಡೆಗೆ ಲಕ್ಷ್ಯ ಕೊಟ್ಟು ಕಲಿಸಬೇಕೊ ಎಂಬುದೊಂದು ಪ್ರಶ್ನೆಯೂ ನೂತನ ಶಿಕ್ಷಣದ ಕ್ಷೇತ್ರದಲ್ಲಿ ಬರುವುದು. ಆಗ ಶಿಕ್ಷಕನು ವರ್ಗಕ್ಕೆ ಕಲಿಸುವ ಪದ್ಧತಿಯ ವಿಷಯವಾಗಿ ಹೊಸ ಬಲವನ್ನು ತಳೆಯಬೇಕಾಗುವುದು. ವಿದ್ಯಾರ್ಥಿಯ ಕಡೆಗೆ ವೈಯಕ್ತಿಕವಾಗಿ ಲಕ್ಷ್ಯ ಕೊಡುವುದು ಅವಶ್ಯವಿದ್ದಾಗ ವರ್ಗಕ್ಕೆ ಕಲಿಸುವ ಪದ್ಧತಿಯನ್ನು ವ್ಯಕ್ತಿ ಶಿಕ್ಷಣಕ್ಕೆ ಹೇಗೆ ಹೊಂದಿಕೆಯಾಗುವಂತೆ ಮಾಡಬೇಕು? ವೈಯಕ್ತಿಕ ವಿದ್ಯಾರ್ಥಿಯ ಸಲುವಾಗಿ ಸ್ವತಂತ್ರವಾಗಿ ನೇಮಿಸಲ್ಪಟ್ಟ ಶಿಕ್ಷಕನು ತನ್ನ ಶಿಷ್ಯನಿಗೆ ಬೇಕಾದ ಸಾಹಾಯ್ಯವನ್ನು ಕೊಡಬಲ್ಲನು; ಆದರೆ ವರ್ಗದಲ್ಲಿ ಇದು ಸಾಧ್ಯವಿಲ್ಲ; ವರ್ಗಕ್ಕೆ ಕಲಿಸುವುದನ್ನು ತೀರ ಬಿಟ್ಟುಬಿಡುವುದೂ ಸಾಧ್ಯವಿಲ್ಲ ; ಹೇಗಿದ್ದರೂ ವರ್ಗಪದ್ಧತಿಯು

ಒಂದು ಅನಿಷ್ಟವೇ ಎಂದು ಎಷ್ಟೋ ಶಿಕ್ಷಕರು ಭಾವಿಸಬಹುದು. ಹಲವು ಅಂಶಗಳಿಂದ ಇದು ನಿಜವೂ ಇದೆ. ಏಕೆಂದರೆ, ವ್ಯಕ್ತಿಯ ಹಿತವನ್ನು ಸಾಮೂಹಿಕ ಹಿತದ ಸಲುವಾಗಿ ಅನೇಕ ಸಲ ಬಿಟ್ಟುಬಿಡಬೇಕಾಗುವುದು. ಆದರೆ ವರ್ಗಶಿಕ್ಷಣದಲ್ಲಿಯೂ ಹಲವು ಲಾಭಗಳಿರುವವೆಂಬುದನ್ನು ನಾವು ಮರೆಯಕೂಡದು. ವರ್ಗದಲ್ಲಿ ನಾನಾತರದ ಯೋಗ್ಯತೆಯ ಹುಡುಗರು ಇರುವುದರಿಂದ, ಕಲಿಯುವಾಗ ಅವರಲ್ಲಿ ಸಹಜವಾಗಿ ಮೇಲಾಟವು ಉಂಟಾಗಿ. ಅದರ ಲಾಭವು ಎಲ್ಲರಿಗೂ ದೊರೆಯುವುದು. ಶಿಕ್ಷಕನು ಕೂಡ ಎಲ್ಲರಿಗೂ ತಿಳಿಯುವಂತೆ ವಿಷಯವನ್ನು ನಿರೂಪಿಸಬೇಕಾಗುವುದು; ವಿಷಯವನ್ನು ಒಂದಕ್ಕಿಂತ ಹೆಚ್ಚು ದೃಷ್ಟಿಗಳಿಂದ ನೋಡಿ ತರತರದ ದೃಷ್ಟಾಂತಗಳನ್ನು ಕೊಡಬೇಕಾಗುವುದು. ಜಾಣ ಹುಡುಗರಿದ್ದಲ್ಲಿ ಆ ಪದ್ಧತಿಯಿಂದ ವರ್ಗಕ್ಕೆ ಕಲಿಸುವುದು ನಿರರ್ಥಕವಾದರೂ, ದಡ್ಡ ಹುಡುಗರಿಗಿಂತ ಅವರಿಗೆ ವಿಷಯಜ್ಞಾನವು ಹೆಚ್ಚು ದೃಢವಾಗುವುದು.

ಡಾ. ಮಾಂಟೇಸರಿಯು ತನ್ನ ಶಿಕ್ಷಣಪದ್ಧತಿಯಲ್ಲಿ ಸಾಮೂಹಿಕ ಅಥವಾ ವರ್ಗಶಿಕ್ಷಣಪದ್ಧತಿಗೆ ತೀರ ಕಡಮೆಯ ಸ್ಥಾನವನ್ನು ಕೊಟ್ಟಿದ್ದಾಳೆ. ಚಿಕ್ಕಮಕ್ಕಳ ಶಿಕ್ಷಣದ ವಿಷಯವಾಗಿ ಬರೆಯುವಾಗ ಈ ಮಾತನ್ನು ಅವಳು ಹೇಳಿದ್ದಾಳೆ. ಚಿಕ್ಕಮಕ್ಕಳಿಗೆ ಕೂಡಿ ಕೆಲಸಮಾಡುವ ಸ್ಫೂರ್ತಿಯು ಬರಬೇಕಾದರೆ ಕೆಲಮಟ್ಟಿನ ಪರಿಪಕ್ವತೆಯು ಬರಬೇಕು. ವರ್ಗಪದ್ಧತಿಯ ಸಾವನ್ನು ಸೂಚಿಸುವ ಗಂಟೆಯನ್ನು ಅವಳು ತನ್ನ ಶಿಕ್ಷಣಪದ್ಧತಿಯ ಮೂಲಕವಾಗಿ ಬಾರಿಸಿದ್ದಾಳೆಂದು ಹೇಳಿದರೆ ಅತಿಶಯೋಕ್ತಿಯಾಗ ಬಹುದು. ಆದರೂ ಅವಳ ಪದ್ಧತಿಯನ್ನು ವಿಮರ್ಶಿಸುವವರು ಮಾಂಟೇಸರಿ ಪದ್ಧತಿಯಲ್ಲಿ ಸಾಮೂಹಿಕವಾದ ಚಟುವಟಿಕೆಗಳಿಗೆ ಸ್ಥಾನವನ್ನು ಕೊಟ್ಟಿಲ್ಲವೆಂದು ಟೀಕಿಸುತ್ತಾರೆ. ಕಿಂಡರಗಾರ್ಟನ್ ಪದ್ಧತಿಯಲ್ಲಿ ಸಾಮೂಹಿಕ ಚಟುವಟಿಕೆಗೆ ಹೆಚ್ಚಿನ ಪ್ರಾಶಸ್ತ್ಯವನ್ನು ಕೊಡಲಾಗಿದೆ. ಕೂಚುಮಾಡುವುದು, ಹಾಡುವುದು, ಕುಣಿಯುವುದು ಚಿಕ್ಕಮಕ್ಕಳ ಸ್ವಭಾವ. ಅವರನ್ನು ಒಂದು ಕೋಣೆಯಲ್ಲಿ ಹಾಕಿದರೆ, ಅವರ ಕೂಡಿನಡೆಯುವ ವಿಚಾರಗಳನ್ನು ಹತ್ತಿಕ್ಕಿದಂತಾಗುವುದೆಂದು ವರ್ಗಪದ್ಧತಿಯ ವಿರೋಧಕರಾದ ಕಿಂಡರಗಾರ್ಟನ್ ಪದ್ಧತಿಯವರು

ಹೇಳುತ್ತಾರೆ. ಅಲ್ಲದೆ ಅವರು ವ್ಯಕ್ತಿಶಿಕ್ಷಣಪದ್ಧತಿ, ವರ್ಗಶಿಕ್ಷಣಪದ್ಧತಿ, ಇವೆರಡನ್ನೂ ಸ್ವತಂತ್ರವಾಗಿ ವಿಂಗಡಿಸಬೇಕೆಂದೂ ಹೇಳುತ್ತಾರೆ. ಮಾಂಟೇಸರಿಯು ಮೊನ್ನೆ ಮೊನ್ನೆ ಬರೆದ ಗ್ರಂಥಗಳಲ್ಲಿ ತನ್ನ ಶಿಕ್ಷಣ ಪದ್ಧತಿಯಲ್ಲಿ ಕೆಲವು ಪಾಠಗಳಿಗಾದರೂ ವರ್ಗಶಿಕ್ಷಣಪದ್ಧತಿಯು ಬೇಕೆಂದು ಬರೆದಿರುವಳು. ಇದೆಲ್ಲವನ್ನೂ ನೋಡಿದರೆ, ಇವೆರಡೂ ಪದ್ಧತಿಗಳು ಕೂಡಿನಡೆಯಲು ಸಾಧ್ಯವಿದೆಯೆಂದೆನಿಸುವುದು. ಆದುದ ರಿಂದ ವೈಯಕ್ತಿಕವಾಗಿ ಕಲಿಸುವ ಪದ್ಧತಿ, ವರ್ಗಕ್ಕೆ ಕಲಿಸುವ ಪದ್ಧತಿ, ಇವೆರಡರ ಸಮಾವೇಶವಾಗಬೇಕು. ವರ್ಗಕ್ಕೆ ಕಲಿಸುವಾಗ ಕೆಲವು ಸಾರೆ ವೈಯಕ್ತಿಕ ದೃಷ್ಟಿಯಿಂದ, ಕೆಲವು ಸಾರೆ ಸಾಮೂಹಿಕ ದೃಷ್ಟಿ ಯಿಂದ, ಪಾಠಹೇಳುವ ಕೌಶಲ್ಯವನ್ನು ಶಿಕ್ಷಕನು ತೋರಿಸಿದರೆ ಮಾತ್ರ ಎರಡೂ ಪದ್ಧತಿಗಳ ಸಹಕಾರವಾದಂತಾಗುವುದು.

ವೈಯಕ್ತಿಕ ಶಿಕ್ಷಣಕ್ಕೆ ಹೆಚ್ಚಿನ ಗಮನಕೊಡಬೇಕೆಂದು ನೂತನ ಶಿಕ್ಷಣವು ಹೇಳುವುದು ನಿಜವಾದರೂ ಅದು ವರ್ಗಶಿಕ್ಷಣವನ್ನು ತಿರಸ್ಕರಿ ಸಿಲ್ಲ; ವಿದ್ಯಾರ್ಥಿಗಳಿಗೆ ತಮ್ಮ ಹಾದಿಯಂತೆ ಹೋಗಲು ಅವಕಾಶವನ್ನು ಕಲ್ಪಿಸಿಕೊಟ್ಟರೂ ಸ್ವಚ್ಛಂದವೃತ್ತಿಗೆ ಎಡೆಯನ್ನಿತ್ತಿಲ್ಲ; ಎರಡೂ ಪದ್ಧತಿ ಗಳನ್ನು ವಿಂಗಡಿಸಿ ಪ್ರತಿಯೊಂದು ಪದ್ಧತಿಗೂ ಸ್ಥಾನವನ್ನು ಕಲ್ಪಿಸಿ ಕೊಡಬೇಕೆಂದೂ ವಿಷಯಗಳನ್ನು ಕಲಿಸುವ ಕ್ರಮಗಳ ಅಭ್ಯಾಸದ ಕಡೆಗೆ ಗಮನವನ್ನೀಯಬೇಕೆಂದೂ ನೂತನ ಶಿಕ್ಷಣವು ಸಾರುತ್ತದೆ.

ಇದುವರೆಗೆ ನೂತನ ಶಿಕ್ಷಣದ ಬಗೆಗೆ ಅನೇಕ ವಿಷಯಗಳನ್ನು ಹೇಳಿದುದಾಯಿತು; ಇದರ ವೈಶಿಷ್ಟ್ಯಗಳನ್ನು ಕುರಿತು ವರ್ಣನೆ ಮಾಡಿದುದಾಯಿತು. ಇದರ ಬಗೆಯಲ್ಲಿ ಕೆಲವು ಆಕ್ಷೇಪಗಳೂ ಇವೆ. ಅವನ್ನೂ ಸಂಕ್ಷೇಪದಲ್ಲಿ ಅರಿತುಕೊಳ್ಳುವುದು ಆವಶ್ಯವಾಗಿದೆ. ನೂತನ ಶಿಕ್ಷಣವು 'ಮೃದುವಾದ ಶಿಕ್ಷಣವು' ಎಂದು ತುಚ್ಛವಾಗಿ ಕೆಲವರು ಹೇಳುತ್ತಾರೆ. ವೈಯಕ್ತಿಕ ಮಹತ್ತ್ವ, ತಪ್ಪುತಡೆಗಳ ನಿವಾರಣೆ, ವರ್ಗದ ಪ್ರತಿಯೊಬ್ಬ ವಿದ್ಯಾರ್ಥಿಯ ವೈಯಕ್ತಿಕ ದೃಷ್ಟಿಯ ಮಾನ್ಯತೆ ಇವೆಲ್ಲವು ಕಲಿಸುವ ಕಾರ್ಯದಲ್ಲಿ ಹೆಂಗರುಳನ್ನುಂಟುಮಾಡುವುವೆಂದು

ಈ ನೂತನ ಶಿಕ್ಷಣದ ವಿರುದ್ಧವಾಗಿ ಕೆಲವರ ಆರೋಪ. ಶಿಕ್ಷಣದ ಹೋರೆಯ ಗೌರವವನ್ನೂ ಸಾಮರ್ಥ್ಯವನ್ನೂ ಪ್ರತಿಪಾದಿಸುವಂತಹ ಕೆಲವರು ನೂತನ ಶಿಕ್ಷಣವು ವಿದ್ಯಾರ್ಥಿಗಳಿಗೆ ದಾಕ್ಷಿಣ್ಯವನ್ನು ತೋರಿಸುವುದೆಂದೂ ಸ್ವಪ್ರಯತ್ನವನ್ನು ಮಾಡಲು ಅವರನ್ನು ಹುರಿದುಂಬಿಸುವುದಿಲ್ಲವೆಂದೂ ದೂಷಿಸುವರು. ಇಂತಹವರಿಂದ ಯಾರೂ ಭಯಪಡಬೇಕಾಗಿಲ್ಲ. ಶಿಕ್ಷಣದ ಮಾರ್ಗವು ರಾಜಮಾರ್ಗದಂತೆ ಸುಗಮವಾದುದಲ್ಲ; ಅದು ಸುಲಭಸಾಧ್ಯವಿಲ್ಲ ಎಂಬುದು ಈಗಲೂ ನಿಜವಿದೆ. ವಿದ್ಯಾರ್ಥಿಗಳು ಕಲಿಯುವ ಮಾರ್ಗದಲ್ಲಿ ಇರುವ ತೊಂದರೆಗಳಿಗೇನೂ ಕೊರತೆಯಾಗಿರುವುದಿಲ್ಲ.

ನೂತನ ಶಿಕ್ಷಣದಲ್ಲಿ ಅಭಿರುಚಿಗೆ ಮಹತ್ತ್ವ ಕೊಟ್ಟುದನ್ನು ಹಳೆಯ ಸಂಪ್ರದಾಯದವರು ಸಹಾನುಭೂತಿಯಿಂದ ನೋಡಲಾರರು; ಅವರಿಗೆ ಅದರ ಸೇರಿಕೆಯಿಲ್ಲ. "ಶಿಕ್ಷಣವನ್ನು ಮನೋರಂಜಕವಾಗುವಂತೆ ಏಕೆ ಮಾಡಬೇಕು?" ಎಂದು ಅವರು ಕೇಳುವರು. ಜಗದಲ್ಲಿ ಮುಂಬರುವ ಎಡರು-ತೊಡರುಗಳನ್ನು ವಿದ್ಯಾರ್ಥಿಗಳು ಎದುರಿಸಬೇಕಾಗುತ್ತದೆ. ಆದುದರಿಂದ ಶಾಲೆಯಲ್ಲಿ ಶಕ್ಯವಿದ್ದಷ್ಟು ಶ್ರಮಸಹಿಷ್ಣುತೆಯನ್ನು ಅವರಿಗೆ ಕಲಿಸಬೇಕೆಂದು ಇವರು ಹೇಳುವರು. ಇವರಿಗೆಇಷ್ಟೇ ಉತ್ತರ—ಸಂಸಾರದಿಂದ ಬೇಸತ್ತು ಆತ್ಮಹತ್ಯೆಯನ್ನು ಮಾಡಿಕೊಳ್ಳಲು ಸಿದ್ಧರಾದವರಿಂದ ಇಂತಹ ಮಾತುಗಳು ಬರುವುವು. ನಮ್ಮ ಜೀವನವು ನಿಸ್ಸಾರವಾದುದೆಂದು ನಾವು ತಿಳಿಯುವುದಿಲ್ಲ. ನಮ್ಮ ಹಿತವನ್ನು ಸಾಧಿಸಿಕೊಳ್ಳಲು ನಾವು ಈ ಕಾರ್ಯಗಳನ್ನು ಮಾಡಬೇಕಾಗುವುದು. ನೂತನ ಶಿಕ್ಷಣವು ತಾಂತ್ರಿಕ ತಾಂತ್ರಿಕಶ್ರಮವನ್ನು(Drudgery)ಪೂರ್ಣವಾಗಿ ತೆಗೆದುಹಾಕುವುದಿಲ್ಲ; ಪ್ರತಿಯೊಂದನ್ನು ಮನೋರಂಜಕವಾಗುವಂತೆ ಮಾಡಲೂ ಪ್ರಯತ್ನಿಸುವುದಿಲ್ಲ. ಅದು ಶಾಲೆಯಲ್ಲಿಯ ಶಿಕ್ಷಣಕ್ಕೆ ಯಥಾರ್ಥವಾದ ಅರ್ಥವನ್ನು ಹಚ್ಚುವುದು. "ಇದನ್ನೆಲ್ಲ ಏಕೆ ಕಲಿಯಬೇಕು? ಇಷ್ಟೆಲ್ಲ ಶ್ರಮಪಡುವುದರ ಅರ್ಥವೇನು?" ಎಂಬ ಪ್ರಶ್ನೆಗಳು ಜಾಣಮಕ್ಕಳ ಮನಸ್ಸಿನಲ್ಲಿ ಹುಟ್ಟುವುವು. ಮಂದಬಾಲಕರ ಮನಸ್ಸಿನಲ್ಲಿಯೂ ಈ ಬಗೆಯ ಪ್ರಶ್ನೆಗಳು ಹುಟ್ಟಬೇಕು. ಸಾರಾಂಶ—ಅವುಗಳಿಗೆ ಸಮರ್ಪಕವಾದ ಉತ್ತರಗಳನ್ನು

ಕೊಡುವುದೂ ಪ್ರಯತ್ನದಿಂದ ವಿದ್ಯಾರ್ಥಿಗಳನ್ನು ಬಿಡುಗಡೆ ಮಾಡಲಿಕ್ಕೆ ಯತ್ನಿಸದೆ ಯೋಗ್ಯ ಪರಿಶ್ರಮವನ್ನು ಕೈಕೊಳ್ಳುವಂತೆ ಅವರನ್ನು ಪ್ರೋತ್ಸಾಹಿಸುವುದೂ; ತಾಂತ್ರಿಕ ಶ್ರಮವನ್ನು ಹೋಗಲಾಡಿಸಲು ಯತ್ನಿಸದೆ ಸರಿಯಾದ ಕಾರಣವನ್ನು, ಅರ್ಥವನ್ನು, ಉದ್ದೇಶವನ್ನು ಕಲ್ಪಿಸಿಕೊಟ್ಟು ಅದಕ್ಕೆ ಶಿಕ್ಷಣ ಕ್ರಮದಲ್ಲಿ ಅದರ ಸ್ಥಾನಕ್ಕೂ ಜೀವನದ ಕ್ರಮಕ್ಕೂ ನಡುವೆ ಇರುವ ಸಂಬಂಧವನ್ನು ಸ್ಪಷ್ಟವಾಗಿ ಹೇಳಿಕೊಡುವುದೂ—ಇವೇ ನೂತನ ಶಿಕ್ಷಣದ ಧ್ಯೇಯ–ವೈಶಿಷ್ಟ್ಯಗಳಾಗಿವೆ.

ಜಗತ್ತಿನಲ್ಲಿ ಮುಂದುವರಿದ ಇಂಗ್ಲಂಡ, ಅಮೇರಿಕ, ಜಪಾನ, ರಶಿಯ, ಜರ್ಮನಿ ಮುಂತಾದ ರಾಷ್ಟ್ರಗಳು ಈ ಶಿಕ್ಷಣಪದ್ಧತಿಯನ್ನೇ ಪುರಸ್ಕರಿಸಿವೆ. ಈ ದೇಶಗಳಲ್ಲಿ ನೂತನ ಶಿಕ್ಷಣದ ವೈಶಿಷ್ಟ್ಯಗಳನ್ನೆಲ್ಲ ಶಿಕ್ಷಣದ ಹೊಣೆಗಾರಿಕೆಯುಳ್ಳ ಮುಂದಾಳುಗಳು ಬಳಕೆಯಲ್ಲಿ ತಂದುದರಿಂದ, ಶೈಕ್ಷಣಿಕ ಪ್ರಗತಿಯು ಒಡೆದುಕಾಣುವುದು. ಬೇರೆ ಬೇರೆ ದೇಶಗಳು ಈ ಮೊದಲೇ ಶಿಕ್ಷಣದಲ್ಲಿ ನವೀನ ಮಾರ್ಗವನ್ನು ಅನುಸರಿಸುತ್ತ ನಡೆದಿವೆ; ಅಲ್ಲಿ ಕಾಲಕಾಲಕ್ಕೆ ಹೊಸದು ಹಳೆಯದಾಗುತ್ತಲೂ ಅಚ್ಚ ಹೊಸದು ಮುಂದೆ ಬರುತ್ತಲೂ ಇದೆ. ನಮ್ಮ ದೇಶದಲ್ಲಿ ಈಚೆಗೆ ನೂತನ ಮಾರ್ಗದಲ್ಲಿ ಪ್ರೇಮವು ಉಂಟಾಗುತ್ತಿರುವುದು ಶುಭ ಚಿಹ್ನವು.

# ೭. ಶಾಲೆಯ ಸ್ಥಾನ ಮತ್ತು ಕರ್ತವ್ಯ

ವಿದ್ಯಾರ್ಥಿಗಳನ್ನು ಸಾಮಾಜಿಕ ಜೀವಿಗಳನ್ನಾಗಿ ಮಾಡುವುದು—ಎಂದರೆ ಸಮಾಜದಲ್ಲಿದ್ದುಕೊಂಡು ತಮ್ಮ ಕರ್ತವ್ಯಕರ್ಮಗಳನ್ನು ಸುಗಮವಾಗಿ ಸಾಗಿಸಿಕೊಂಡು ಹೋಗಲುಶಕ್ತಿವಂತರನ್ನಾಗಿ ಮಾಡುವುದೇ—ಶಾಲೆಯ ಮುಖ್ಯಕರ್ತವ್ಯ. ವೈಯಕ್ತಿಕತೆಯನ್ನು ಬೆಳೆಯಿಸುವುದೇ ಶಿಕ್ಷಣದ ನಿಜವಾದ ಧ್ಯೇಯವೆಂಬುದನ್ನು ಯಾವಬಗೆಯಿಂದಲೂ ಈ ಗುರಿಯು ವಿರೋಧಿಸುವುದಿಲ್ಲ. ವಿದ್ಯಾರ್ಥಿಗಳ ಸ್ವಯಂಪ್ರೇರಿತವಾದ ಚಟುವಟಿಕೆಗಳನ್ನು ಕಟ್ಟುತಡೆಗಳನ್ನು ಹಾಕದೆ ಪ್ರೋತ್ಸಾಹನವನ್ನೀಯುವುದೇ ಶಿಕ್ಷಣದ ನಿಜವಾದ ಧ್ಯೇಯವಲ್ಲದೆ ಅವುಗಳನ್ನು ನಿರ್ಬಂಧದಲ್ಲಿಡುವುದಲ್ಲ; ಹತ್ತಿಕ್ಕುವುದೂ ಅಲ್ಲ. ಈ ಧ್ಯೇಯವನ್ನು ಅನುಸರಿಸಿದರೆ ಶಾಲೆಯ ಶಿಸ್ತಿನ ಭಂಗವಾಗಬಹುದೆಂದು ಕೆಲವರು ಆಕ್ಷೇಪವೆತ್ತಬಹುದು. ಇವರಿಗೆ ಈ ಉತ್ತರವನ್ನೀಯಬಹುದು. ಶಾಲೆಯಲ್ಲಿಯ 'ಶಿಸ್ತು' ಕಲಿಯುವವರ ಒಳನಡತೆಯನ್ನೂ ತಿದ್ದಬೇಕಲ್ಲದೆ ಅವರ ಹೊರನಡತೆಗಷ್ಟೇ ಅದು ಸಂಬಂಧಿಸಿಲ್ಲ; ಆಂತರಿಕ ಚರಿತ್ರೆಯು ಸುಧಾರಿಸಿದರೆ ಬಾಹ್ಯಾಚಾರವು ತಾನಾಗಿಯೆ ಸುಧಾರಿಸುವುದು. ಹೊರಗಿನ ನಡವಳಿಕೆಯನ್ನು ತಿದ್ದಲೆಂದು ಬೇಕಾದಷ್ಟು ನಿರ್ಬಂಧಗಳನ್ನು ಹಾಕಿದರೂ ಸರಿಯಾದ ಪರಿಣಾಮವು ಆಗಲಾರದು. ಆದುದರಿಂದ ಅಂತರಂಗದ ಬೆಳೆವಣಿಗೆಯು ಸಾಧ್ಯವಾಗುವಂತೆ ಮಾಡಿ, ವಿದ್ಯಾರ್ಥಿಗಳಲ್ಲಿ ಶಿಸ್ತಿನ ಕಲ್ಪನೆಯನ್ನು ತಂದುಕೊಟ್ಟರೆ, 'ಶಿಸ್ತು' ತಾನಾಗಿಯೆ ಬರುವುದು. ವಿದ್ಯಾರ್ಥಿಗಳಲ್ಲಿ ಸ್ವಚ್ಛಂದ ವೃತ್ತಿಯು ಹುಟ್ಟದಂತೆ ನೋಡಿಕೊಳ್ಳಬೇಕಾದರೆ, ಬಾಹ್ಯ ದಂಡನೆಯು ಪರಿಣಾಮಕಾರಿಯಾಗಲಾರದೆಂಬುದು ಶಿಕ್ಷಣಶಾಸ್ತ್ರಜ್ಞರು ಕಂಡುಹಿಡಿದ ವಿಷಯವೇ ಆಗಿದೆ. ಆದುದರಿಂದ ಈ ವಿಷಯವನ್ನು ಕುರಿತು ಹೆಚ್ಚಾಗಿ ಹೇಳುವುದು ಅಪ್ರಸ್ತುತವಾಗಿದೆಯಾದರೂ ಒಂದು ವಿಷಯವನ್ನು ಮಾತ್ರ ಇಲ್ಲಿ ಹೇಳಬಹುದು. ಹೆಚ್ಚಿನ ನಿರ್ಬಂಧಗಳಿರುವ ಶಾಲೆಯು ವಿದ್ಯಾರ್ಥಿಗಳಿಗೆ ಸೆರೆಮನೆಯೆನಿಸುವುದು. ಹಾಗಾಗದಂತೆ

ನೋಡಿಕೊಳ್ಳುವುದು ಶಾಲೆಯ ಚಾಲಕರ ಆದ್ಯಕರ್ತವ್ಯವಾಗಿದೆ. ಶಾಲೆಯು ಮನೆಯ ವಾತಾವರಣವನ್ನೂ ಶಾಲೆಯ ವಾತಾವರಣವನ್ನೂ ವಿದ್ಯಾರ್ಥಿಗಳಿಗೆ ಕಲ್ಪಿಸಿಕೊಡುವಂಥ ಮಧ್ಯಕೇಂದ್ರವಾಗಿರಬೇಕು; ಸುಶಿಕ್ಷಣದ ಮಂದಿರವಾಗಬೇಕು.

ಶಾಲೆಯೂ ಒಂದು ಬಗೆಯ ಸಮಾಜವಾಗಿರಬೇಕು; ಅದು ನೈಸರ್ಗಿಕವಾಗಿರಬೇಕು. ಆಂತರಿಕ ಜೀವನದ ಮತ್ತು ಬಾಹ್ಯಜೀವನದ ಸ್ಥಿತಿಗತಿಗಳ ನಡುವೆ ವಿಷಮತೆಯನ್ನು ತಂದೊಡ್ಡುವುದಾಗಿರಬಾರದು. ಅದರಲ್ಲಿ ಪ್ರತಿಯೊಬ್ಬ ವಿದ್ಯಾರ್ಥಿಗೂ ತನ್ನ ಜೀವನವನ್ನು ಪರಿಪೂರ್ಣಗೊಳಿಸಲು, ತನ್ನ ಒಳ್ಳೆಯ ಶಕ್ತಿಗಳನ್ನು ಬೆಳೆಯಿಸಿಕೊಂಡು ಯೋಗ್ಯ ನಾಗರಿಕನಾಗಲು, ಬರುವಂತಹ ವಾತಾವರಣವು ಇರಬೇಕು. ಅಲ್ಲಿ ಕೇವಲ ಪರಂಪರಾಗತವಾದ ವರ್ತನೆಯೆ ಆದರ್ಶವಾಗಬಾರದು; ಅದು ವಿಶ್ವಕುಟುಂಬದ ಭಾವನೆಯನ್ನೂ ಬೆಳೆಯಿಸುವಂತಹ ಆಚಾರ ವಿಚಾರಗಳ ಆಗರವಾಗಿರಬೇಕು. ವಿಶ್ವದೊಡನೆ ಬಾಂಧವ್ಯವನ್ನು ಸ್ಥಾಪಿಸುವಂತಹುದಾಗಿರಬೇಕು. ಇನ್ನೊಂದು ಬಗೆಯಾಗಿ ಶಾಲೆಯು ಕೃತ್ರಿಮ ಸಮಾಜವಾಗಿರಬೇಕು. ಬಾಹ್ಯಜಗತ್ತನ್ನೇ ಅದು ತನ್ನಲ್ಲಿ ತೋರಿಸುವಂತಹುದಾಗಿರಬೇಕು; ಎಂದರೆ, ಜಗತ್ತಿನಲ್ಲಿ ಅತ್ಯುತ್ತಮವಾದುದನ್ನೂ ಕರ್ತೃತ್ವಶಕ್ತಿಯನ್ನೂ ತೋರಿಸುವ ಸದನವಾಗಿರಬೇಕು. ಸಂಕ್ಷೇಪವಾಗಿ— "**ಶಾಲೆಯು ಸಾಮಾನ್ಯ ವ್ಯವಹಾರಗಳುಳ್ಳ ಜಗತ್ತಿನ ಸ್ಥಿತಿಯನ್ನಲ್ಲದೆ ಮಾನವ ಕುಲದ ಶಾರೀರಿಕ, ಆತ್ಮಿಕ, ಭೂತ-ವರ್ತಮಾನ-ಭವಿಷ್ಯತ್ ಕಾಲಗಳ ಸ್ಥಿತಿಯನ್ನೂ ಚಿತ್ರಿಸುವ, ಜಗತ್ತಿನ ಪ್ರತಿಬಿಂಬವನ್ನು ತೋರಿಸುವ, ಆದರ್ಶಭೂತವಾದ ಚಿಕ್ಕ ಜಗತ್ತು ಅಥವಾ ಪ್ರತಿಮೆ (ಮಾದರಿ) ಯಾಗಿರಬೇಕು**" ಎಂದು ಒಬ್ಬ ತಜ್ಞನು ವರ್ಣಿಸಿದ್ದಾನೆ.

ಪ್ರಸ್ತುತ ಪರಿಸ್ಥಿತಿಯಲ್ಲಿ ಶಾಲೆಗೂ ಸುತ್ತಲಿನ ಪ್ರಪಂಚಕ್ಕೂ ಸಂಬಂಧವಿದ್ದಂತೆ ಕಾಣುವುದಿಲ್ಲ. ಶಾಲೆಯಲ್ಲಿ ನಡೆಯುವ ಶಿಕ್ಷಣವು ಉಪಶಿಕ್ಷಣದ ಅಥವಾ ಶೈಕ್ಷಣಿಕ ಪರಿಣಾಮವನ್ನುಂಟುಮಾಡುವ ಇತರ ಸಂಸ್ಥೆಗಳ ಪರಿಣಾಮವನ್ನು ಗಮನಕ್ಕೆ ತಂದಿರಲಿಲ್ಲ. ಆದರೆ ವಿದ್ಯಾರ್ಥಿಗಳು

ಜಾಗೃತಾವಸ್ಥೆಯಲ್ಲಿದ್ದಾಗ ಅಥವಾ ಮನೋಭಿಜ್ಞರ ಅಭಿಪ್ರಾಯದಂತೆ ಸುಷುಪ್ತಾವಸ್ಥೆಯಲ್ಲಿದ್ದಾಗ ಸಹ ಶಿಕ್ಷಣಕಾರ್ಯವು ನಾನಾರೀತಿಯಿಂದ ದಯಾದಾಕ್ಷಿಣ್ಯವಿಲ್ಲದೆ ನಡೆಯುತ್ತಿರುವುದೆಂಬುದನ್ನು ಶಿಕ್ಷಕನು ಮರೆಯಕೂಡದು. ಈ ತರದ ಶಿಕ್ಷಣಕ್ಕೂ ಶಾಲೆಯಲ್ಲಿಯ ಶಿಕ್ಷಣಕ್ಕೂ ನಿಕಟಸಂಬಂಧವಿದೆ.

ಕೆಲವರು ಶಾಲೆಗಳೆಂದರೆ "ಜ್ಞಾನದ ವಿಕ್ರಯಾಲಯಗಳು" ಎಂದು ಪ್ರತಿಪಾದಿಸುವರು. ಆದರೆ ಇವರು ಸಹ ಶಾಲೆಯಲ್ಲಿಯ ಶಿಕ್ಷಣವನ್ನು ಹೊರಗಿನ ಪ್ರಪಂಚದಲ್ಲಿ ದೊರಕಬಹುದಾದ ಶಿಕ್ಷಣದಿಂದ ಬೇರೆಯಾಗಿರಿಸಲಾರರು. ಏಕೆಂದರೆ, ತಾವು ಕಲಿಸುವ ಸಂಗತಿಗಳ ಉಪಯೋಗವು ವ್ಯವಹಾರದಲ್ಲಿ ಎಷ್ಟರಮಟ್ಟಿಗೆ ಆಗಬಹುದೆಂಬುದರ ಮೇಲೆಯೆ ಅವುಗಳ ಬೆಲೆಯು ಅವಲಂಬಿಸಿರುವುದು.

ಇವೆಲ್ಲ ವಿಚಾರಗಳನ್ನು ಮಾಡಿದಮೇಲೆ ಶಿಕ್ಷಣವು ವಿದ್ಯಾರ್ಥಿಯ ಅನುಭವವನ್ನು ಆಯಾ ಪ್ರಸಂಗಗಳಿಗೆ ಹೊಂದಿಕೆಯಾಗುವಂತೆ ಉಪಯೋಗಿಸುವುದೆಂದು ಎಲ್ಲರೂ ಒಪ್ಪುವರು. ಕೆಲವು ತಜ್ಞರು ಶಿಕ್ಷಣವು ವ್ಯಕ್ತಿಯನ್ನು ಸುತ್ತಮುತ್ತಲಿನ ಪರಿಸ್ಥಿತಿಗೆ ಸರಿಯಾಗುವಂತೆ ಮಾರ್ಪಡಿಸುವ ಕ್ರಮವೆಂದು ಹೇಳುವರು. ಪರಿಸ್ಥಿತಿಯಲ್ಲಿ ನೈಸರ್ಗಿಕ, ಸಾಮಾಜಿಕ, ನೈತಿಕ ಎಂದು ಮೂರು ಪ್ರಕಾರಗಳಿವೆ. ಆಧಿಭೌತಿಕ ಶಾಸ್ತ್ರಗಳೆಲ್ಲ ಮೊದಲನೆಯ ಪ್ರಕಾರಕ್ಕೆ ಸೇರಿರುವುವು. ಸಾಹಿತ್ಯ, ಇತಿಹಾಸ ಮುಂತಾದ ಮನುಷ್ಯನಿಗೆ ಸಂಬಂಧಿಸಿದ ವಿಷಯಗಳು ಎರಡನೆಯದಕ್ಕೆ ಮತ್ತು ನೀತಿ ಮತ್ತು ಧರ್ಮಗಳು ಮೂರನೆಯದಕ್ಕೆ ಸಂಬಂಧಿಸಿರುವುವು. ಈ ಮೂರು ತರದ ಪರಿಸ್ಥಿತಿಗೆ ಅನುಸರಿಸಿ ಹೊಂದಿಕೆಯಾಗುವಂತೆ ಪ್ರಯತ್ನಿಸುವುದೇ ಶಾಲೆಯ ಕರ್ತವ್ಯವು. ಶಾಲೆಯಲ್ಲಿಯ ಪಠ್ಯವಿಷಯಗಳನ್ನು ಈ ಮೂರು ಪ್ರಕಾರದ ಪರಿಸ್ಥಿತಿಯ ಅನುಭವವೂ ವಿದ್ಯಾರ್ಥಿಗಳಿಗೆ ಉಂಟಾಗುವಂತೆ ಗೊತ್ತುಪಡಿಸಬೇಕು.

ಈ ರೀತಿಯಾಗಿ ಬಾಹ್ಯಪ್ರಪಂಚದ ಬೇಡಿಕೆಗಳನ್ನು ಪೂರೈಸುವಂತೆ ಶಾಲೆಯ ಪರಿಸ್ಥಿತಿಯನ್ನಿಟ್ಟುಕೊಂಡರೆ, ವಿದ್ಯಾರ್ಥಿಗಳು ಪ್ರೌಢಾವಸ್ಥೆಯಲ್ಲಿ ಯಾವ ಉದ್ಯೋಗವನ್ನು ಕೈಕೊಂಡರೂ, ಅದರಲ್ಲಿ ಚೆನ್ನಾಗಿ

ವರ್ತಿಸುವರು. ಶಾಲೆಯಲ್ಲಿ ದೊರೆತ ಜ್ಞಾನವನ್ನು ವ್ಯಾವಹಾರಿಕ ಪ್ರಸಂಗಗಳಲ್ಲಿ ಪರಿಣಾಮಕಾರಿಯಾಗುವಂತೆ ಉಪಯೋಗಿಸಬೇಕಾದರೆ, ಕೆಲವು ಅವಧಿಯ ವರೆಗೆ ವಿಶಿಷ್ಟವ್ಯವಹಾರ-ಪ್ರಚುರವಾದ ಶಿಕ್ಷಣವು ಬೇಕೇಬೇಕು. ಅಂಥ ಶಿಕ್ಷಣವನ್ನು ಸಾಮಾನ್ಯ ಶಿಕ್ಷಣಕ್ರಮವು ಮುಗಿದ ಮೇಲೆ ಶಾಲೆಗಳಾದರೂ ಕೊಡಬಹುದು ಅಥವಾ ಕೆಲಸಕ್ಕೆ ನಿಯಮಿಸಿ ಕೊಳ್ಳುವವರಾಗಲಿ, ಗಿರಣಿಗಳ ಒಡೆಯರಾಗಲಿ, ಉದ್ಯೋಗಪ್ರವರ್ತಕ ರಾಗಲಿ, ಅಂತಹ ಏರ್ಪಾಡುಗಳನ್ನು ಮಾಡಬಹುದು.

ವ್ಯಾಪಕ ದೃಷ್ಟಿಯಿಂದ ವ್ಯವಹಾರದಲ್ಲಿ ಬೇಕಾಗುವ ಜ್ಞಾನದ ಉಪಯುಕ್ತತೆಯನ್ನು ಧ್ಯೇಯವನ್ನಾಗಿ ಇಟ್ಟುಕೊಂಡ—ಅಥವಾ ಜ್ಞಾನದ ಆನಂದದ ಸಲುವಾಗಿಯೇ ಜ್ಞಾನಸಂಪಾದನೆಯನ್ನು ಮಾಡಿಕೊಡ ಬೇಕೆಂಬ ಧ್ಯೇಯವನ್ನಿಟ್ಟುಕೊಂಡ—ಶಾಲೆಯು ಮೇಧಾವಿಗಳನ್ನು ಸಿದ್ಧ ಗೊಳಿಸುವ ಪ್ರಯೋಗಶಾಲೆಯೂ ವಿದ್ಯೆಯ ಮಂದಿರವೂ ಸೌಂದರ್ಯದ ಸದನವೂ ಲಲಿತಕಲೆಗಳ ಆಶ್ರಯಸ್ಥಾನವೂ ಸ್ನೇಹಸಹಕಾರಗಳ ಬೀಡೂ ತತ್ತ್ವಜ್ಞಾನಿಗಳನ್ನೂ ಸಮಾಜಸುಧಾರಕರನ್ನೂ ಮಾನವಜನಾಂಗದ ನಿಜವಾದ ಸೇವಕರನ್ನೂ ರಾಷ್ಟ್ರಗಳನ್ನು ಕಟ್ಟುವ ರಾಜಕಾರಣ ಧುರಂಧರರನ್ನೂ ಸಿದ್ಧಮಾಡುವ ಕಾರ್ಯದ ತವರೂರು ಆಗಿರಬೇಕು. ಇಂತಹ ಆದರ್ಶವನ್ನು ಶಾಲೆಯು ಎಷ್ಟರಮಟ್ಟಿಗೆ ಸಾಧಿಸಲು ಯತ್ನಿಸು ವುದೋ ಅದು ಅಷ್ಟು ಯಶಸ್ವಿಯಾಗುವುದು.

೮

# ಪ್ರಾಗತಿಕ ಶಾಲೆಯ ಲಕ್ಷಣಗಳು

ಶಾಲೆಯು ಪ್ರಗತಿಪರವಾಗಿರಬೇಕೆಂದೂ ಪ್ರಪಂಚದ ಪ್ರಾಗತಿಕ ಲಕ್ಷಣಗಳನ್ನೆಲ್ಲ ಒಳಗೊಂಡು ಸಾಗಬೇಕೆಂದೂ ಹೇಳುವರು. ಶಿಕ್ಷಕರು ಹಿಂದಿನದಕ್ಕೆ ಇಂದಿನದನ್ನು ಹೊಂದಿಸಿಕೊಂಡು ಮುಂದಿನದಕ್ಕೆ ಅಳವಡುವಷ್ಟು ವಿಶಾಲದೃಷ್ಟಿಯುಳ್ಳವರಾಗಿರಬೇಕೆಂದರೆ, ಅವರ ಕರ್ತವ್ಯದ ಹೊರಗಿನ ಹೊರೆಯನ್ನು ಅವರ ಮೇಲೆ ಹೊರಿಸಿದಂತಾಗದು.

ಶಿಕ್ಷಕನು ತನ್ನ ವಿದ್ಯಾರ್ಥಿಗಳಿಗೆ ಶಾರೀರಿಕ, ಮಾನಸಿಕ, ನೈತಿಕ ಶಿಕ್ಷಣಗಳನ್ನು ಕೊಡುವಾಗ ಮುಖ್ಯವಾಗಿ ಮನೋವಿಕಾಸವನ್ನೇ ಗುರಿಯನ್ನಾಗಿಟ್ಟುಕೊಂಡು ಅವರಲ್ಲಿ ಶಾಸ್ತ್ರೀಯವಾದ ವಿಚಕ್ಷಣಾಶಕ್ತಿಯನ್ನೂ ನೂತನ ಮಾರ್ಗಗಳನ್ನು ಸ್ವತಂತ್ರವಾಗಿ ಕಂಡು ಹಿಡಿಯುವ ಶಕ್ತಿಯನ್ನೂ ವಿಕಾಸಗೊಳಿಸಬೇಕೆಂದು ಹೇಳುವರು. ಹಿಂದಿನದನ್ನು ಅರಿತುಕೊಂಡು, ಅದರಲ್ಲಿಯ ಉತ್ತಮ ಭಾಗಗಳನ್ನು ಕಾದುಕೊಂಡು, ಮುಂದಿನ ಪ್ರಗತಿಯನ್ನು ಸಾಧಿಸಿಕೊಳ್ಳುವಂತೆ ಮಾಡುವುದು ಪ್ರಾಗತಿಕ ಶಾಲೆಯ ಶಿಕ್ಷಣದ ಮುಖ್ಯಧ್ಯೇಯವು. ವಿದ್ಯಾರ್ಥಿಗಳಲ್ಲಿ ಹೊಸ ತಿಳಿವಿನ ಸಂಗ್ರಹವಾದರೆ ಶಿಕ್ಷಕನ ಹೊಣೆಯು ತೀರಲಿಲ್ಲ; ಜ್ಞಾನದ ಉಪಯೋಗವನ್ನು ಕೂಡ ಅವರು ತಾವೇ ಕಂಡುಹಿಡಿಯುವ ಶಕ್ತಿಯನ್ನು ಅವರಲ್ಲಿ ಹುಟ್ಟಿಸದಿದ್ದರೆ, ಆ ಜ್ಞಾನದಿಂದ ಪ್ರಯೋಜನವೇನು ?

ಪ್ರಾಗತಿಕಶಾಲೆಗಳು ಭವಿಷ್ಯವಾದಿಗಳನ್ನು ಹುಟ್ಟಿಸಬೇಕು. ಹಳೆಯದೆಲ್ಲ ಹೊನ್ನಲ್ಲವೆನ್ನುವ ಧೈರ್ಯವನ್ನು ಪಡೆದ, ಪೂರ್ವಪರಂಪರೆಗೆ ಹೆದರಿ ಹಿಂಜರಿಯದಿರುವ, ಉತ್ಸಾಹಿಗಳು ನಮಗೆ ಇಂದು ಬೇಕಾಗಿದ್ದಾರೆ. ಇಂದಿನ ವಿಚಾರಗಳೆಲ್ಲ ಪರಿಪೂರ್ಣವಾದುವೆಂದು ಭಾವಿಸಿ ಕುಳಿತರೆ, ಜಗತ್ತು ಸ್ತಿಮಿತ ಸ್ಥಿತಿಗೆ ಬಂದುಬಿಡಬಹುದು. ಇಂದಿನ ವಿಚಾರಗಳಲ್ಲಿ ನ್ಯೂನತೆಗಳಿವೆಯೋ ಎಂಬ ಕುತೂಹಲಕ್ಕೂ ಆಸ್ಪದವಿಲ್ಲದಿದ್ದರೆ, ಅದರಲ್ಲಿ

ಸುಧಾರಣೆಯಾಗುವ ಬಗೆ ಹೇಗೆ? ಅಂಧಶ್ರದ್ಧೆಯಿಂದಲೋ ಇನ್ನಾವ ಕಾರಣದಿಂದಲೋ ಹಳೆಯದನ್ನು ತಲೆವಾಗಿ ತಬ್ಬಿಕೊಳ್ಳುವವರು ಹೊಸದನ್ನು ವಿರೋಧಿಸುವರು.

ಕ್ರಾಂತಿಯು ಮಾನವನ ಜೀವನಕ್ಕೆ ಅಪ್ರಿಯವಾದ ವಿಷಯ. ಇದು ಮಾನವಸ್ವಭಾವದ ಲಕ್ಷಣ. ಕ್ರಾಂತಿಯು ಬೇಡವೆಂದರೆ— ಪ್ರಗತಿಯಾಗಲಿ, ಉತ್ಕ್ರಾಂತಿಯಾಗಲಿ ಬೇಡವೆಂತಲ್ಲ. ತಾರತಮ್ಯ ವಿಚಾರದೊಡನೆ ವಿದ್ಯಾರ್ಥಿಗಳು—

"ಅವೊಳ್ಳಿತಲ್ತೆಲ್ಲವು ಪ್ರತ್ನವೆಂದೇ ।
ನವೀನವೆಂದೇ ಕೆಡಕಾಗದೆಲ್ಲಂ ॥"

[ಎಂದರೆ, ಹಳೆಯದೆಂದ ಮಾತ್ರಕ್ಕೆ ಎಲ್ಲವೂ ಒಳ್ಳೆಯದಾಗಲಿ ಹೊಸತೆಂಬ ಕಾರಣದಿಂದಲೇ ಎಲ್ಲವೂ ಕೆಡಕಾಗಲಿ ಆಗಲಾರವು]. ಎಂಬ ವಿಚಾರವನ್ನು ಸ್ವೀಕರಿಸಲು ಸಿದ್ಧರಾಗುವಂತೆ ಮಾಡುವುದೇ ಪ್ರಾಗತಿಕ ಶಾಲೆಯ ಗುರಿಯಾಗಿರಬೇಕು.

ಎಲ್ಲರೂ ಒಂದೇ ಬಗೆಯ ವಿಚಾರವುಳ್ಳವರಾಗಬೇಕು. ಎಲ್ಲರ ಆಚಾರಗಳೂ ಒಂದೇ ಬಗೆಯುವಾಗಿರಬೇಕು—ಎಂದರೆ, ಸತ್ಯಾನ್ವೇಷಣೆಯ ದಾರಿಯನ್ನೇ ಕಟ್ಟಿಬಿಟ್ಟಂತಾಗಬಹುದು. ಸಾಮಾಜಿಕ ಜೀವನಕ್ಕೆ ಈ ಮಾತು ಹೆಚ್ಚಾಗಿ ಅನ್ವಯಿಸುವುದು. ಹಿಂದಿನ ಧಾರ್ಮಿಕ ಅಥವಾ ಸಾಂಪ್ರದಾಯಿಕ ಆಚಾರವಿಚಾರಗಳಲ್ಲಿರುವ ಗುಣದೋಷಗಳನ್ನು ವಿಮರ್ಶಿಸಿ, ಅಯೋಗ್ಯವಾದುವುಗಳನ್ನು ಖಂಡಿಸಿ, ಯೋಗ್ಯವಾದುವುಗಳನ್ನು ಮಂಡಿಸಲು ಆವಶ್ಯಕವಾದ ವಿಚಾರಕ್ರಮ, ಉತ್ಸಾಹ, ಧೈರ್ಯ— ಇವುಗಳನ್ನು ಪ್ರಾಗತಿಕ ಶಾಲೆಗಳು ತಮ್ಮ ಮುಂದಿನ ಪೀಳಿಗೆಗೆ ಒದಗಿಸಿ ಕೊಡಬೇಕು.

ತಂದೆ-ತಾಯಿಗಳು, ಸಮಾಜ, ಧರ್ಮಗುರು, ಧರ್ಮಗ್ರಂಥ- ಇವೆಲ್ಲವೂ ನಮ್ಮ ಪೂಜ್ಯಸ್ಥಾನಗಳು, ಭಕ್ತಿಪಾತ್ರಗಳು; ತಾಯಿ-ತಂದೆಗಳು ನಮಗೆ ದೇವರು; ಸಮಾಜವು ನಮಗೆ ಪರಮಗತಿ; ಧರ್ಮಗುರುಗಳು ನಮಗೆ ದೇವರ ಪ್ರತಿನಿಧಿಗಳೇ; ಧರ್ಮಗ್ರಂಥಗಳು ದೇವ-

ವಾಣಿಗಳೇ; ಸರಿ. ಆದರೆ, ಎಲ್ಲರ ತಂದೆ-ತಾಯಿಗಳೂ ಆದರ್ಶ ವ್ಯಕ್ತಿಗಳೆಂದು ಹೇಳಲಾಗುವದಿಲ್ಲ. ಎಲ್ಲ ಸಮಾಜಗಳಲ್ಲಿಯೂ ಸಲ್ಲದ ಕೆಲವು ಆಚಾರ ವಿಚಾರಗಳು ಸೇರಿಕೊಂಡಿರುವದುಂಟು ; ಧರ್ಮಗುರುಗಳೂ ಒಮ್ಮೊಮ್ಮೆ ಸ್ವಮತಾಭಿಮಾನ ಮೂಲಕವಾಗಿ ಶಿಷ್ಯರನ್ನು ಸಂಕುಚಿತ ವೃತ್ತಿಯುವರನ್ನಾಗಿ ಮಾಡಬಹುದು. ಧರ್ಮಗ್ರಂಥಗಳಲ್ಲಿಯ ವಿಚಾರಗಳ ಒರೆಗೆ ಬಾರದಿರುವ ಕೆಲವು ವಿಚಾರಗಳನ್ನೊಡಗೊಂಡ ಗ್ರಂಥಗಳೂ ಧರ್ಮಗ್ರಂಥಗಳ ಮಾಲಿಕೆಯಲ್ಲಿ ಸೇರಿರುವ ಸಂಭವವುಂಟು. ಇಂಥ ಪ್ರಸಂಗಗಳಲ್ಲಿ ತಂದೆ ತಾಯಿಗಳು, ಸಮಾಜ, ಧರ್ಮಗುರುಗಳು ಎಂದು ಅಂಧಶ್ರದ್ಧೆಯಿಂದ ಶರಣು ಹೋಗದೆ ಅವುಗಳಲ್ಲಿರುವ ದೋಷಗಳನ್ನು ತ್ಯಜಿಸಿ, ಗುಣಗಳನ್ನು ಮಾತ್ರ ಗ್ರಹಿಸುವ ಒಲವನ್ನು ಬಾಲಕರಲ್ಲಿ ಹುಟ್ಟಿಸುವ ಶಾಲೆಗಳು ಪ್ರಗತಿಪರ ಶಾಲೆಗಳೆಂದು ಹೇಳಬೇಕು. ಮೇಲೆ ಹೇಳಿದ ಪೂಜ್ಯ–ಸ್ಥಾನಗಳಲ್ಲ ನಿಷ್ಠೆಯಿರಬೇಕಾದದು ಉಚಿತವೇ ಸರಿ ; ಆದರೆ, ಆ ನಿಷ್ಠೆಯು ಯುಕ್ತಾಯುಕ್ತ ವಿಚಾರರಹಿತವಾದ ಅಂಧಶ್ರದ್ಧೆಯಿಂದ ಉಂಟಾದುದಾಗಿರಬಾರದು. ಸತ್ಯಾನ್ವೇಷಣೆಗೆ ಪ್ರತಿಬಂಧಕವಾದ ನಿಷ್ಠೆಯು ಘಾತುಕವೆಂಬ ಭಾವನೆ ಪ್ರಾಗತಿಕ ಶಾಲೆಗಳ ವಿದ್ಯಾರ್ಥಿಗಳಲ್ಲಿ ಹುಟ್ಟಿ ಬೆಳೆಯುಬೇಕು.

ಪ್ರಾಗತಿಕ ಶಾಲೆಯುಲ್ಲಿ ಕಲಿಸುವ ವಿಷಯಗಳು ವಿದ್ಯಾರ್ಥಿಗಳ ಮುಂದಿನ ಜೀವನಕ್ಕೆ ಅನುಗುಣವಾದುವು ಇರಬೇಕು. ಜನಜೀವನಕ್ಕೆ ಸಂಬಂಧಿಸಿದ ವಾತಾವರಣದಲ್ಲಿಯೇ ಶಾಲೆಯ ಅಭ್ಯಾಸಕ್ರಮವು ಜನಜೀವನದ ದಾರಿಯಿಂದಲೇ ಸಾಗಬೇಕು.

ಪ್ರಾಗತಿಕ ಶಾಲೆಯ ಶಿಕ್ಷಣ ಕ್ರಮವು ಶಿಶುಪ್ರಧಾನವಾಗಿ ಸಾಗಬೇಕು. ಮಗುವಿನ ಮನೋವಿಕಾಸವನ್ನು ಕುಗ್ಗಿಸುವ—ಅದರ ವ್ಯಕ್ತಿತ್ತ್ವದ ಕೊಲೆಮಾಡುವ—ಶಿಕ್ಷಣಕ್ರಮವು ಪ್ರಾಗತಿಕ ಶಾಲೆಯಲ್ಲಿ ಇರಕೂಡದು. ಶಾಲೆಯ ಶಿಕ್ಷಣದಿಂದ ಮಗುವಿನಲ್ಲಿ ಪರಿವರ್ತನೆಯಾಗಬೇಕು. ಮಗುವಿನ ಶಾರೀರಿಕ, ಮಾನಸಿಕ, ಆತ್ಮಿಕ ಶಕ್ತಿಗಳನ್ನು ಬಲಪಡಿಸಿ ವೃದ್ಧಿಗೊಳಿಸುವುದೇ ವ್ಯಕ್ತಿತ್ತ್ವದ ಪರಿವರ್ತನೆ ಅಥವಾ ವಿಕಾಸವೆಂದರೆ

ತಪ್ಪಾಗದು. ಮಗುವಿನ ಸಹಜ ಪ್ರವೃತ್ತಿಗಳನ್ನು ಉದಾತ್ತ ಸ್ವರೂಪಕ್ಕೆ ಪರಿವರ್ತಿಸಿ ಉದಾತ್ತ ವಿಚಾರಗಳುಳ್ಳ ಮಗುವನ್ನು ಸಿದ್ಧಗೊಳಿಸುವುದೇ ಪ್ರಾಗತಿಕ ಶಾಲೆಯ ಗುರಿಯಾಗಿರಬೇಕು.

ಪ್ರಾಗತಿಕ ಶಾಲೆಯಲ್ಲಿ ವಿದ್ಯಾರ್ಥಿಯ ಸ್ವಶಿಕ್ಷಣಕ್ಕೆ ಸಂಪೂರ್ಣವಾದ ಆಸ್ಪದವಿರಬೇಕು. ಅಲ್ಲಿ ಶಿಕ್ಷಕನು ಕೇವಲ ಮಾರ್ಗದರ್ಶಿಯು. ಪ್ರಾಗತಿಕ ಶಾಲೆಯ ವಿದ್ಯಾರ್ಥಿಗಳು ತಮ್ಮ ತಮ್ಮ ಶೀಲವನ್ನು ತಮ್ಮ ದೃಷ್ಟಿಯಿಂದಲೇ ವೈಯಕ್ತಿಕ ಶಕ್ತಿಗನುಸಾರವಾಗಿ ಶಿಕ್ಷಕನ ನೆರವಿನಿಂದ ಕಟ್ಟುವರು. ಅಲ್ಲಿಯ ಶಿಕ್ಷಣವು ಚಟುವಟಿಕೆಗಳ ಮುಖಾಂತರವಾಗಿ ಸಾಗುವುದರಿಂದ ವಿದ್ಯಾರ್ಥಿಗಳು ಜಾಗೃತೆಯಿಂದ ಸತ್ಯವನ್ನು ಹುಡುಕುತ್ತ, ಮೈಮನಗಳಿಂದ ಸಮಾಜ ಸೇವೆಯನ್ನು ಮಾಡುತ್ತ, ಕೈಕೆಲಸ-ಕಲೆ-ಸಾಹಿತ್ಯ-ಇವುಗಳಲ್ಲಿ ತಾವು ದೊರಕಿಸಿದ ಪ್ರಗತಿಯನ್ನು ಬಿಚ್ಚಿ ಹೇಳುತ್ತ ಸಾಗುವರು.

ಪ್ರಾಗತಿಕ ಶಾಲೆಯು ಪ್ರಯೋಗಶಾಲೆಯೆನಿಸಿಕೊಳ್ಳಬೇಕು. ಅಲ್ಲಿ ನಾನಾವಿಧದ ಪ್ರಯೋಗ-ಪರೀಕ್ಷೆಗಳು ನಡೆದು ಹೊಸ ಹೊಸವಾದ ನಿರ್ಣಯಗಳನ್ನು ಕಂಡುಕೊಳ್ಳಲಾಗುವುದು. ಮಕ್ಕಳ ಅಭ್ಯಾಸ, ಅವರಿಗೆ ಕಲಿಸುವ ವಿಷಯಗಳು, ಅವನ್ನು ಕಲಿಸುವ ಕ್ರಮ, ಮಗುವಿನ ಮನಸ್ಸು, ಶೈಕ್ಷಣಿಕ ಮಾನಸಶಾಸ್ತ್ರ, ಪರೀಕ್ಷೆಗಳು—ಮುಂತಾದ ಮಹತ್ತ್ವದ ವಿಷಯಗಳ ಪ್ರಯೋಗ-ಪರೀಕ್ಷೆಗಳು ನಡೆದು ಹೊಸ ಹೊಸವಾದ ಸಿದ್ಧಾಂತಗಳನ್ನು ಕಂಡುಕೊಳ್ಳುವುದಕ್ಕೆ ಅವಕಾಶವನ್ನೀಯುವ ಶಾಲೆಯೇ ನಿಜವಾದ ಪ್ರಾಗತಿಕ ಶಾಲೆಯು. ಇದರಲ್ಲಿ ವಿದ್ಯಾರ್ಥಿಗಳೂ ಶಿಕ್ಷಕರೂ ಸಹಕರಿಸಿ, ಸ್ವಯಂಪ್ರೇರಿತವಾದ ಚಟುವಟಿಕೆ, ಸತ್ಯಶೋಧಕ ಬುದ್ಧಿ, ಉತ್ಸಾಹಿತಮನಸ್ಸು, ಆತ್ಮನಿಯಂತ್ರಣೆ ಮೊದಲಾದ ಮಹತ್ತ್ವದ ಲಾಭಗಳನ್ನು ಪಡೆಯಲು ಅನುಕೂಲವಿರುವುದು.

## ಶಾಲೆಯೂ ವ್ಯಕ್ತಿಯೂ

ಪ್ರಾಗತಿಕ ಶಾಲೆಯಲ್ಲಿ ವ್ಯಕ್ತಿವಿಕಾಸಕ್ಕೆ ತಡೆಯುಂಟಾಗಕೂಡ ದೆಂದು ಹಿಂದೆ ಹೇಳಿದೆ. ಆತ್ಮವಿಕಾಸಕ್ಕೆ ಅಥವಾ ಆತ್ಮವಿಚಾರಗಳ

ಪ್ರಕಟನೆಗೆ ಅವಕಾಶವಿಲ್ಲದಿದ್ದರೆ ವ್ಯಕ್ತಿಯ ವಿಕಾಸಕ್ರಿಯೆಯು ಸರಿಯಾಗಿ ಸಾಗಲಾರದು. ಬೇರೆ ಬೇರೆ ಬಾಲಕರ ವ್ಯಕ್ತಿತ್ವಕ್ಕೆ ಅನುಗುಣವಾಗಿ— ಎಂದರೆ ಅವರ ಮನದ ಒಲವು, ಅವರು ಹುಟ್ಟಿ ಬೆಳೆದ ಪರಿಸ್ಥಿತಿ ಮುಂತಾದ ಪೂರ್ವಸಂಸ್ಕಾರಗಳಿಗನುಗುಣವಾಗಿ—ಅವರ ನಡವಳಿಕೆ ಯಿರುವುದು. ಕೆಲವರು ಒಂಟಿಗರಾಗಿ ಕುಳಿತು ಕಲಿಯಲು ಹವಣಿಸಿದರೆ, ಕೆಲವರು ಪರರೊಡನೆ ಬೆರೆತು ಕಲಿಯಲು ಬಯಸುವರು. ಕೆಲವರಲ್ಲಿ ಸ್ಮರಣಶಕ್ತಿಯು ಹೆಚ್ಚಿದ್ದರೆ, ಹಲವರಲ್ಲಿ ಪಾಠಶಕ್ತಿಯೂ ಇನ್ನನೇಕರಲ್ಲಿ ವಿಚಾರಶಕ್ತಿಯೂ ಹೆಚ್ಚಾಗಿರುವುದು. ಅವರವರ ಶೀಲಸ್ವಭಾವಗಳಲ್ಲಿಯೂ ಮಹದಂತರವಿರುವುದು. ಕೆಲವರು ಅಂಜುಗುಳಿಗಳಾಗಿಯೂ ಕೆಲವರು ದಿಟ್ಟರಾಗಿಯೂ ಕೆಲವರು ಉಡಾಳರಾಗಿಯೂ ಕಾಣಬರುವರು. ಕೆಲವರಿಗೆ ಕೈಕೆಲಸದಲ್ಲಿ ಅಭಿರುಚಿಯಿರುವುದು; ಕೆಲವರಿಗೆ ಶಾರೀರಿಕ ಶ್ರಮದಲ್ಲಿ ಉತ್ಸಾಹವಿರುವುದು. ಇದೇ ಮೇರೆಗೆ ಹಲವರಿಗೆ ಬೇರೆ ಉದ್ಯೋಗಗಳಲ್ಲಿ ಪ್ರೀತಿಯಿರುವುದು. ಪ್ರಾಗತಿಕ ಶಾಲೆಯು ಹೀಗೆ ಭಿನ್ನರುಚಿಯ ಭಿನ್ನ ತರಗತಿಗಳ ಬುದ್ಧಿಶಕ್ತಿಗಳುಳ್ಳ, ಶೀಲಸ್ವಭಾವಗಳುಳ್ಳ, ಭಿನ್ನ ಪ್ರಕೃತಿಯ, ಬಾಲಕರ ಸಮೂಹಕ್ಕೆ ಶಿಕ್ಷಣ ಕೊಡಬೇಕಾಗಿರುವುದೆಂಬುದನ್ನು ಅರಿತು, ಅದಕ್ಕೆ ತಕ್ಕಂತೆ ತನ್ನ ಶಾಲಾಸಂವಿಧಾನ, ಕಲಿಸುವ ಪದ್ಧತಿ, ಕಲಿಸುವ ವಿಷಯಗಳು, ಶಿಕ್ಷಕರ ಯೋಜನೆ, ಉಪಕರಣಗಳು—ಮೊದಲಾದುವು ಗಳನ್ನು ಅನುಗೊಳಿಸಿಕೊಳ್ಳಬೇಕಾಗುವುದು. ಈ ಮುಂದಿನ ನಿಯಮ ಗಳಿಂದ ಅದರ ಘಟನೆಯೂ ಸಾಮಾನ್ಯಸ್ವರೂಪವೂ ಪ್ರಕಟವಾಗಬಹುದು.

(೧) ಶಾಲೆಯು ವಿದ್ಯಾರ್ಥಿಗಳ ವೈಯಕ್ತಿಕ ಶಕ್ತಿವಿಕಾಸಕ್ಕೆ ತಡೆಗಟ್ಟಬಾರದು.

(೨) ವಿದ್ಯಾರ್ಥಿಗಳಿಗೆ ಅನುಕೂಲತೆಗಳನ್ನು ಕಲ್ಪಿಸಿಕೊಡುವೆ ನೆಂದು ಶಿಕ್ಷಕನು ತಾನೇ ದುಡಿದು ಸಾಹಾಯ್ಯವನ್ನು ಕೊಡಬಾರದು.

(೩) ವಿದ್ಯಾರ್ಥಿಗಳ ತರಗತಿಗಳನ್ನು ಗೊತ್ತುಮಾಡಿಸುವ-ಎಂದರೆ ಒಂದು ತರಗತಿಯಿಂದ ಇನ್ನೊಂದು ಮೇಲಿನ ತರಗತಿಗೆ ಕಳುಹಿಸುವು ದಕ್ಕೆ- ಇಷ್ಟೇ ಕಾಲದ ಅವಧಿಬೇಕೆಂಬ ನಿರ್ಬಂಧವಿರಕೂಡದು. ಒಂದು ತರಗತಿಯ ಅಭ್ಯಾಸವನ್ನು ವಿದ್ಯಾರ್ಥಿಯು ಮುಗಿಸಿದ ಕೂಡಲೆ ಆ

ಇಯತ್ತೆಯಲ್ಲಿ ಎಷ್ಟುಕಾಲ ಕಲಿತಿರುವನೆಂಬುದನ್ನೇ ಗಮನಕ್ಕೆ ತಾರದೆ ಮೇಲಿನ ತರಗತಿಗೆ ಹೋಗಲು ಪ್ರತಿಬಂಧವಿರಕೂಡದು.

(೪) ಒಂದು ವರ್ಗದಲ್ಲಿ ಅಥವಾ ಶಾಲೆಯಲ್ಲಿ ಸಾಕಾಗುವಷ್ಟಕ್ಕಿಂತ ಹೆಚ್ಚು ವಿದ್ಯಾರ್ಥಿಗಳಿದ್ದರೆ ಈ ರೀತಿ ವೈಯಕ್ತಿಕವಾಗಿ ಶಿಕ್ಷಣವನ್ನು ಸಾಗಿಸುವುದು ಸಾಧ್ಯವಾಗದು. ಒಬ್ಬ ಶಿಕ್ಷಕನ ಒಂದು ವರ್ಗದಲ್ಲಿ ಸಾಮಾನ್ಯವಾಗಿ ಇಪ್ಪತ್ತೈದು ವಿದ್ಯಾರ್ಥಿಗಳೂ ಇಡಿಯ ಶಾಲೆಯಲ್ಲಿ ಎರಡು ನೂರು ವಿದ್ಯಾರ್ಥಿಗಳೂ ಇರಬಹುದು.

ಪ್ರಾಗತಿಕ ಶಾಲೆಯ ಶಿಕ್ಷಕನಲ್ಲಿ ವೈಯಕ್ತಿಕವಿಕಾಸವನ್ನು ಗುರಿಯಾಗಿರಿಸಿಕೊಂಡು ಕೆಲಸಮಾಡುವ ಆಸ್ಥೆ, ಅಭಿರುಚಿ ಇರಬೇಕು; ಮತ್ತು ಅವನು ಈ ವಿಷಯದಲ್ಲಿಯ ತನ್ನ ಹೊಣೆಗಾರಿಕೆಯನ್ನು ಅರಿತು ಕೆಲಸಮಾಡುವ ಗುಣವುಳ್ಳವನಾಗಿರಬೇಕು. ಅವನು ಕೆಳಗಿನ ಸಂಗತಿಗಳನ್ನೂ ಅರಿತುಕೊಂಡಿರಬೇಕು:—

(೧) ವಿದ್ಯಾರ್ಥಿಗಳ ಮನೆತನದ ಸ್ಥಿತಿಯನ್ನು ಅರಿತುಕೊಳ್ಳಬೇಕು.

(೨) ವಿದ್ಯಾರ್ಥಿಯ ಬೌದ್ಧಿಕ, ಭಾವನಾಪರ, ಶಾರೀರಿಕ, ಸಾಮಾಜಿಕ ಯೋಗ್ಯತೆಯನ್ನು ತಿಳಿದಿರಬೇಕು.

ಹೀಗೆ ಬಾಲಕರ ಸಂಬಂಧವಾಗಿ ಶಿಕ್ಷಕನು ತಿಳಿದುಕೊಳ್ಳಬೇಕಾದ ಸಂಗತಿಗಳನ್ನು ಮುಂದೆ ಹೇಳಿರುವಂತೆ ಬೇರೆ ಬೇರೆ ಗುಂಪುಗಳನ್ನಾಗಿ ವಿಂಗಡಿಸಿ ಹೇಳಬಹುದು.

(ಅ) ಶರೀರ— ಬಾಹ್ಯಘಟನೆ, ಆರೋಗ್ಯ ಮುಂತಾದುವು.

(ಬ) ಮನಸ್ಸು— ಬೇರೆ ಬೇರೆ ಮಾನಸಿಕ ಶಕ್ತಿಗಳು.

(ಕ) ಸ್ವಭಾವ — ಆಶಾವಾದಿತ್ವ, ಶೀಘ್ರಕೋಪ, ಕಲಹಪ್ರಿಯತೆ ಮುಂತಾದುವು.

(ಡ) ನೀತಿ— ಸಹನಶಕ್ತಿ, ವಿನಯ, ಪ್ರಾಮಾಣಿಕತೆ.

(ಇ) ಸಾಮಾಜಿಕ ಗುಣಗಳು— ವಿಮರ್ಶಕಶಕ್ತಿ, ಅಧಿಕಾರಪ್ರೀತಿ, ವಿಧೇಯತೆ ಮುಂತಾದುವುಗಳು.

(ಫ) ಧಾರ್ಮಿಕ ಭಾವನೆಗಳು— ಪ್ರಾರ್ಥನೆ ಮಾಡುವುದು, ಧರ್ಮಾಭಿರುಚಿ ಮುಂತಾದುವುಗಳು.

(ಗ) ವ್ಯವಹಾರಚತುರತೆ.

## ಶಾಲೆಯೂ ಮನೆಯೂ

"ಮೂರು ವರ್ಷದ ಬುದ್ಧಿ ನೂರು ವರ್ಷ ಬಾಳುವುದು" ಎಂದು ಹೇಳುವುದುಂಟು. ಈ ಮಾತು ಮಕ್ಕಳ ಶಿಕ್ಷಣಕ್ಕೆ ಹೆಚ್ಚಾಗಿ ಅನ್ವಯಿಸುವುದು. ಮಕ್ಕಳು ಮನೆಯಲ್ಲಿ ಕಲಿತದ್ದನ್ನು ಶಾಲೆಯಲ್ಲಿ ಬೆಳೆಯಿಸಿಕೊಳ್ಳುವರೆಂದು ಹೇಳುವುದರ ಅರ್ಥವೂ ಇದೇ. ಗೃಹಶಿಕ್ಷಣವೇ ಮುಂದಿನ ಜೀವನದಲ್ಲಿ ಸರಿಯಾದ ಗೃಹವ್ಯವಸ್ಥೆಯನ್ನಿಟ್ಟುಕೊಳ್ಳಲು ಕಲಿಸುವುದು. ಶಾಲಾಶಿಕ್ಷಣವು ಗೃಹಶಿಕ್ಷಣಕ್ಕೆ ಪೂರಕವಾಗಿ ಸಾಗುತ್ತಿರಬೇಕು; ಎಂದರೆ, ಪ್ರಾಗತಿಕ ಶಾಲೆಯು ಮಕ್ಕಳು ಮುಂದಿನ ಆಯುಷ್ಯದಲ್ಲಿ ತಮ್ಮ ಪ್ರಪಂಚವನ್ನು ಆದರ್ಶಪ್ರಾಯವಾಗಿ ಸಾಗಿಸಲು ತಕ್ಕ ತತ್ತ್ವಗಳನ್ನೂ ಅನುಭವಗಳನ್ನೂ ಕಲಿಸಬೇಕು.—

(೧) ಸ್ವತಂತ್ರವಾತಾವರಣ— ಪ್ರತಿವ್ಯಕ್ತಿಯೂ ಸಂತಂತ್ರವಾಗಿ ಜೀವಿಸಲು ತಕ್ಕ ಸಾಮರ್ಥ್ಯವನ್ನು ಪಡೆದವನಿದ್ದು ಅವನು ಪರರಿಗೆ ನೆರವಾಗಲು ತಕ್ಕ ಅನುಕೂಲತೆಯಿರಬೇಕು.

(೨) ಪರಸ್ಪರ ಪ್ರೀತಿ, ವಿಶ್ವಾಸ— ಕುಟುಂಬದ ಜನರೆಲ್ಲರೂ ಅಂತಃಕರಣದ ಐಕ್ಯದಿಂದಿರಬೇಕಾದರೆ ಪರಸ್ಪರರಲ್ಲಿ ಪ್ರೀತಿವಿಶ್ವಾಸಗಳಿರಬೇಕು.

(೩) ಸ್ನೇಹಸಂಬಂಧಗಳು.

ವಸತಿಗೃಹವುಳ್ಳ ಶಾಲೆಗಳಲ್ಲಿ ಈ ಗುಣಗಳ ಸಂವರ್ಧನೆಗೆ ಹೆಚ್ಚಿನ ಅನುಕೂಲತೆಯಿರುವುದು.

## ಶಾಲೆಯೂ ಸಮಾಜವೂ

"ತಮ್ಮ ಮುಂದಿನ ಸಾಮಾಜಿಕ ಜೀವನಕ್ಕೆ ಆವಶ್ಯಕವಿದ್ದ ಎಲ್ಲ ಗುಣಗಳನ್ನು ವಿದ್ಯಾರ್ಥಿಗಳು ಶಾಲೆಯಲ್ಲಿಯೇ ಪಡೆದಿರಬೇಕು" ಎಂದ

ಮೇಲೆ ಶಾಲೆಯು ತಾನಿದ್ದ ಸ್ಥಳದಲ್ಲಿಯೇ ಜನಜೀವನಕ್ಕೆ ಸಂಬಂಧಿಸಿದ ಎಲ್ಲ ಚಟುವಟಿಕೆಗಳನ್ನು ನಡೆಯಿಸಬೇಕೆಂದು ತಾನೇ ಸಿದ್ಧವಾಗುವುದು. ಇದೊಂದು ಬಲು ತೊಡಕಿನ ಪ್ರಶ್ನೆ. ಇದನ್ನು ಬಿಡಿಸುವುದು ಸುಲಭವಲ್ಲ. ಆದರೂ ಈ ಕೆಳಗಿನ ವ್ಯಾವಹಾರಿಕ ಸೂಚನೆಗಳು ಈ ಕಾರ್ಯಕ್ಕೆ ತಕ್ಕಷ್ಟು ನೆರವಾಗಬಹುದು.

(೧) ಯೋಜನಾಪದ್ಧತಿಯಿಂದ ಶಿಕ್ಷಣವು ಸಾಗಿದರೆ, ವಿದ್ಯಾರ್ಥಿಗಳು ಸಾಮಾಜಿಕ ಜೀವನದೊಡನೆ ಬೆರೆತು ಸಮರಸವಾಗಿ ಶಾಲೆಯ ವಾತಾವರಣವನ್ನು ಸಾಮಾಜಿಕ ವಾತಾವರಣಕ್ಕೆ ಹೊಂದಿಸಿಕೊಂಡು, ಅವೆರಡರ ನಡುವಿನ ವೈಷಮ್ಯವನ್ನು ಕಡಿಮೆಮಾಡಲು ನೆರವಾಗುವುದು.

(೨) ವಿದ್ಯಾರ್ಥಿಗಳು ಸಮಾಜಸೇವೆಯನ್ನು ಕೈಕೊಳ್ಳಬೇಕಾದರೆ, ಅವರಲ್ಲಿ ಸಾಮಾಜಿಕ ಜೀವನದ ಕಳವಳವೂ ಸಹನಶೀಲತೆಯೂ ಅಯೋಗ್ಯವಾದ ಸಾಮಾಜಿಕ ಬಂಧನಗಳನ್ನು ಮೀರಿನಡೆಯುವಷ್ಟು ಮನೋನಿರ್ಧಾರವುಳ್ಳ ಧೈರ್ಯವೂ ಇರಬೇಕಾಗುವುದು.

ಪ್ರಾಗತಿಕ ಶಾಲೆಯು ಈ ತರದ ಒಲವುಗಳನ್ನು ತನ್ನ ವಿದ್ಯಾರ್ಥಿಗಳಲ್ಲಿ ಹುಟ್ಟಿಸಿ ಬೆಳೆಯಿಸಬೇಕು.

ವಿದ್ಯಾರ್ಥಿಗಳು ಸಮಾಜದ ಪರಿಸ್ಥಿತಿಯ ಮತ್ತು ಅದರ ಸಮಸ್ಯೆಗಳ ಅಭ್ಯಾಸವನ್ನು ಮಾಡಬೇಕು; ಅವರು ಈ ಕೆಳಗಿನ ವಿಷಯಗಳ ಬಗ್ಗೆ ಸಂಗತಿಗಳನ್ನು ಕಲೆಹಾಕಬೇಕು.

(೧) ಗ್ರಾಮದ ಜನಜೀವನ.
(೨) ಪ್ರಾಕೃತಿಕ ಸ್ವರೂಪ.
(೩) ಸಾಮಾಜಿಕ ಚಟುವಟಿಕೆಗಳು.
(೪) ಆರ್ಥಿಕ ಸ್ಥಿತಿ.
(೫) ಶಿಕ್ಷಣದ ಅನುಕೂಲತೆ–ಪ್ರತಿಕೂಲತೆಗಳು.
(೬) ಆರೋಗ್ಯ ಜೀವನ.
(೭) ನೈತಿಕ ಜೀವನ, ಧಾರ್ಮಿಕ ಚಟುವಟಿಕೆಗಳು.

(೮) ಇತಿಹಾಸ, ಭೂಗೋಲ, ಪ್ರಾಣಿಶಾಸ್ತ್ರ, ಸಸ್ಯಶಾಸ್ತ್ರ ಮುಂತಾದುವು.

(೯) ರಾಜ್ಯದ ಆಡಳತೆಯ ಕ್ರಮಗಳು.

ಇವೆಲ್ಲ ಸಂದರ್ಭಗಳಲ್ಲಿ ಶಿಕ್ಷಕರು ಈ ಕೆಳಗಿನ ಸಂಗತಿಗಳನ್ನು ಗಮನಿಸಬೇಕು.

(೧) ನಿರೀಕ್ಷಣೆಯ ವಿವರಣೆಗಿಂತಲೂ ನಿರೀಕ್ಷಣೆಯ ಕ್ರಮಕ್ಕೆ ಹೆಚ್ಚಿನ ಪ್ರಾಧಾನ್ಯವಿರಬೇಕು.

(೨) ವಿದ್ಯಾರ್ಥಿಗಳು ತಾವೇ ನಿರೀಕ್ಷಿಸಬೇಕು. ಅವಶ್ಯವಿದ್ದಲ್ಲಿ ಮಾತ್ರ ಶಿಕ್ಷಕನ ಸಾಹಾಯ್ಯವನ್ನು ಅವರೇ ಕೋರಬೇಕು.

(೩) ವಿದ್ಯಾರ್ಥಿಗಳ ಪ್ರಶ್ನೆಗಳಿಗೆ ಉತ್ತರಗಳನ್ನು ಶಿಕ್ಷಕರು ತಾವೇ ಹೇಳಿಬಿಡದೆ, ಸರಿಯಾದ ಉತ್ತರಗಳನ್ನು ಹುಡುಕಿ ತೆಗೆಯುವ ಮಾರ್ಗವನ್ನಷ್ಟೇ ಸೂಚಿಸಬೇಕು.

(೪) ವಿದ್ಯಾರ್ಥಿಗಳ ಕೃತಿಗಳು ಕಡಮೆಯ ತರಗತಿಯವೆಂದು ಅವನ್ನು ತುಚ್ಛೀಕರಿಸಲಾಗದು.

(೫) ಬೇರೆ ಬೇರೆ ವಿಷಯಗಳ ಪರಸ್ಪರ ಸಂಬಂಧೀಕರಣವನ್ನು ವಿದ್ಯಾರ್ಥಿಗಳಿಗೆ ಸೂಚಿಸಬೇಕು.

## ಶಾಲೆಯೂ ರಾಷ್ಟ್ರವೂ

ವಿದ್ಯಾರ್ಥಿಗಳನ್ನು ಉತ್ತಮ ನಾಗರಿಕರನ್ನಾಗಿ ಮಾಡುವುದೇ ಶಾಲೆಗಳ ಧ್ಯೇಯ. ಉತ್ತಮ ನಾಗರಿಕನಾಗಬೇಕಾದರೆ ವಿದ್ಯಾರ್ಥಿಯು ತನ್ನ ದೇಶದ ಇತಿಹಾಸವನ್ನು ಓದಿರಬೇಕು; ಆ ಇತಿಹಾಸಕ್ಕೂ ಜಗತ್ತಿನ ಇತರ ದೇಶಗಳ ಇತಿಹಾಸಕ್ಕೂ ಇರುವ ಸಂಬಂಧವನ್ನೂ ಅರಿತಿರಬೇಕು. ತನ್ನ ದೇಶವು ಅನ್ಯ ದೇಶಗಳಿಗೆ ಹೇಗೆ ಋಣಿಯಾಗಿದೆಯೆಂಬುದನ್ನು ಮನವರಿಕೆ ಮಾಡಿಕೊಂಡಿರಬೇಕು. ಅದಕ್ಕೆ ಅನುಗುಣವಾಗಿ ಅನ್ಯ ದೇಶಗಳು ತನ್ನ ದೇಶಕ್ಕೆ ಋಣಿಯಾಗುವಂತೆ ತನ್ನ ರಾಷ್ಟ್ರವಿರಬೇಕೆಂಬುದನ್ನು ಆತನು ಗಮನಿಸಬೇಕು. ಈ ವಿಶಾಲ ದೃಷ್ಟಿಯನ್ನು ಪಡೆಯುವುದಲ್ಲದೆ, ಅವನು ಶಾಲೆಯನ್ನು ಬಿಡುವ ವೇಳೆಗೆ ತನ್ನ ದೇಶದ ರಾಜ್ಯದಾಡಳಿತದ

ಕ್ರಮವನ್ನೂ ಅಭ್ಯಸಿಸಿರಬೇಕು. ಗ್ರಾಮಪಂಚಾಯತಿಯ, ಜಿಲ್ಲೆಯ, ಸ್ಥಾನಿಕ ಸಂಸ್ಥೆಯ, ಪ್ರಾಂತದ ಮತ್ತು ದೇಶದ ವಿಧಿಮಂಡಲಗಳ ಘಟನೆಗಳನ್ನೂ ಕಾರ್ಯಕಲಾಪಗಳನ್ನೂ ತಿಳಿದಿರಬೇಕು.

ಶಾಲೆಯೊಳಗಿನ ಸಹಕಾರಸಂಘಗಳು ಮುಂತಾದವುಗಳಲ್ಲಿ ಕಾರ್ಯಗಳನ್ನು ನಡೆಯಿಸುವ ಸಹಕಾರಪ್ರವೃತ್ತಿ, ಸಮಾಜಸೇವಾ ಪ್ರವೃತ್ತಿ, ದೇಶಾಭಿಮಾನ ಮೊದಲಾದ ಗುಣಗಳನ್ನು ಪ್ರಾಗತಿಕ ಶಾಲೆಯ ವಿದ್ಯಾರ್ಥಿಗಳು ಪಡೆದಿರಬೇಕು.

ಶಿಕ್ಷಕರು ಶಾಲೆಯಲ್ಲಿ ಇತಿಹಾಸದ ಪಾಠಗಳನ್ನು ಕಲಿಸುವಾಗ ದೇಶಾಭಿಮಾನದ ಯಥಾರ್ಥ ಜ್ಞಾನವಾಗುವಂತೆ ಯತ್ನಿಸಬೇಕು. ತನ್ನ ದೇಶವನ್ನು ಹೃತ್ಪೂರ್ವಕವಾಗಿ ಪ್ರೀತಿಸಿ, ಅದಕ್ಕಾಗಿ ತನ್ನ ಪ್ರಾಣವನ್ನೂ ಅರ್ಪಿಸಲು ಸಿದ್ಧನಾಗಿರುವವನೇ ನಿಜವಾದ ದೇಶಾಭಿಮಾನಿಯೆಂದು ಹೇಳುವರು. ನಿಜವಾದ ದೇಶಾಭಿಮಾನವು ಇನ್ನೂ ಹೆಚ್ಚಿನ ತರಗತಿಯ ತ್ಯಾಗವನ್ನು ಅಪೇಕ್ಷಿಸುವುದು; ಶಾರೀರಿಕ ಮಾನಸಿಕ ಆಧ್ಯಾತ್ಮಿಕ ತ್ಯಾಗಗಳ ಸಮಾವೇಶವೂ ಇದರಲ್ಲಿ ಆಗುವುದು. ಇಂಥ ದೇಶಾಭಿಮಾನಿಗಳ ಸಂಖ್ಯೆಯು ಕಡಮೆ. ಸಾಕ್ರೆಟಿಸನು ಇಂಥದೊಂದು ಅಸಾಮಾನ್ಯ ವ್ಯಕ್ತಿ. ಇಂಥ ವ್ಯಕ್ತಿಗಳನ್ನು ಹುಟ್ಟಿಸುವುದೇ ಪ್ರಾಗತಿಕ ಶಾಲೆಯ ಗುರಿಯಾಗಿರಬೇಕು.

ರಾಷ್ಟ್ರೀಯ ಭಾವನೆಯೂ ದೇಶಾಭಿಮಾನವೂ ಭಿನ್ನ ಸ್ವರೂಪದಿಂದ ಗೋಚರವಾಗಬಹುದು. ಅವು ಒಂದಕ್ಕೊಂದು ಪರಿಪೂರಕಗಳೆಂದು ಹೇಳುವುದೂ ಉಂಟು. ಬುದ್ಧ, ನಾನಕ, ಗೆಲಿಲಿಯೊ, ಟಾಲ್ಸಟಾಯ ಮೊದಲಾದ ವ್ಯಕ್ತಿಗಳು ಹೆಚ್ಚಿದಷ್ಟು ದೇಶದ ಶಕ್ತಿಯು ಬೆಳೆಯುವದಲ್ಲದೆ, ಕೇವಲವಾಗಿ ಸೈನಿಕರ ಅಥವಾ ಯುದ್ಧಸಾಮಗ್ರಿಗಳ ಹೆಚ್ಚುವಿಕೆಯಿಂದ ದೇಶದ ಶಕ್ತಿಯ ಬೆಳೆವಣಿಗೆಯನ್ನು ಅಳೆಯಲಾಗದು. 'ಬುದ್ಧಿವಂತನೇ ಬಲವಂತನು' ಎಂಬುದು ನಿಜವಾದ ತತ್ತ್ವ. ಆದರೆ ಬಲವಂತನೇ ಬುದ್ಧಿವಂತನೆಂಬ ತಪ್ಪು ತಿಳಿವಳಿಕೆಯು ಇತಿಹಾಸದ ಅಭ್ಯಾಸದಿಂದ ಹುಟ್ಟುವ ಸಂಭವವುಂಟು. ಪ್ರಾಗತಿಕ ಶಾಲೆಯಲ್ಲಿ ಈ ತರದ ತಪ್ಪು ಭಾವನೆಯ ಬೆಳೆವಣಿಗೆಗೆ ಆಸ್ಪದವಿರಕೂಡದು.

ನಿಜವಾದ ದೇಶಾಭಿಮಾನವನ್ನು ಹುಟ್ಟಿಸಬೇಕಾದರೆ, ವಿದ್ಯಾರ್ಥಿಗಳನ್ನು ಸ್ವತಂತ್ರ ರೀತಿಯಿಂದ ವಿಚಾರಮಾಡಲು ತೊಡಗಿಸಬೇಕು. ಕಾರ್ಯಕಾರಣ ವಿವೇಚನೆಯೊಂದಿಗೆ ಅವರು ಇತಿಹಾಸದ ಅಭ್ಯಾಸವನ್ನು ಮಾಡಬೇಕು. ಸ್ವದೇಶಾಭಿಮಾನವೆಂದರೆ ಪರದೇಶದವರನ್ನು ದ್ವೇಷಿಸುವುದೆಂದು ಅರ್ಥವಲ್ಲ. ಇತಿಹಾಸವೂ ಪೌರನೀತಿಯೂ ಒಂದಕ್ಕೊಂದು ನಿಕಟಸಂಬಂಧವುಳ್ಳ ವಿಷಯುಗಳು. ಇವನ್ನು ಶಾಲೆಯು ಇತರ ವಿಷಯುಗಳ ಸಂಬಂಧೀಕರಣದಿಂದ, ವಿದ್ಯಾರ್ಥಿಗಳನ್ನು ಉತ್ತಮ ನಾಗರಿಕರನ್ನಾಗಿ ಮಾಡುವ ಧ್ಯೇಯವು ಪ್ರಾಗತಿಕ ಶಾಲೆಯ ಸರ್ವ ಕಾರ್ಯಕಲಾಪಗಳಲ್ಲಿ ಒಡೆದು ತೋರುತ್ತಿರಬೇಕು.

## ಶಾಲೆಯೂ ಜಗತ್ತೂ

ಜಗತ್ತಿನಲ್ಲಿ ಇಂದಿನ ಅಂತರರಾಷ್ಟ್ರೀಯ ಪರಿಸ್ಥಿತಿಯು ಬಲು ಗಂಡಾಂತರಕ್ಕೆ ಒಳಗಾಗಿದೆ; ಒಂದು ನಾಡು ಹಾವಾದರೆ ಇನ್ನೊಂದು ಹದ್ದಾಗುವುದು. ಹಾವು ಇಲಿಯ ಮೇಲೆ ಹಾರುತಿರುವಾಗಲೇ ಹದ್ದು ಆ ಹಾವನ್ನು ಎತ್ತಿಕೊಂಡು ಹಾರಿಹೋಗಿಬಿಡುವುದು. ಈ ಬಗೆಯ ಅಪನಂಬಿಕೆಯು ಮತ್ತು ಸಣ್ಣ ಮೀನನ್ನು ದೊಡ್ಡ ಮೀನು ನುಂಗಿ ಬಿಡುವ ಮತ್ಸ್ಯನ್ಯಾಯದ ಜೀವನವು ಜಗತ್ತಿನ ಹಿತದ ಮತ್ತು ಪ್ರಗತಿಯ ದೃಷ್ಟಿಯಿಂದ ಒಳಿತಲ್ಲ. ಸ್ವದೇಶದ, ಸ್ವಜನಾಂಗದ ಅಭಿಮಾನದ ಅತಿರೇಕದಿಂದ ಅಂತರ್‍ರಾಷ್ಟ್ರೀಯ ಜೀವನವು ಕಲುಷಿತವಾಗಿ ದುಃಖದ ಬೀಡಾಗಿ ಪರಿಣಮಿಸುವುದು. ಪ್ರಾಗತಿಕ ಶಾಲೆಯ ಶಿಕ್ಷಕನು ರಾಷ್ಟ್ರೀಯ ಭಾವನೆಯನ್ನು ಅಂತರರಾಷ್ಟ್ರೀಯ ಭಾವನೆಗೆ ಪೋಷಕವಾಗುವಂತೆ ಬೆಳೆಯಿಸುವನಲ್ಲದೆ ಆ ಭಾವನೆಯನ್ನು ನಾಶಗೊಳಿಸಲು ಯತ್ನಿಸಲಾರನು.

ಈ ಮಾರ್ಗವು ಸುಗಮವಾಗುವಂತೆ ಮಾಡಲು ಪ್ರಾಗತಿಕ ಶಾಲೆಯ ಶಿಕ್ಷಕನು ಈ ಕೆಳಗಿನ ಉಪಾಯುಗಳನ್ನು ಯೋಜಿಸುವನು :—

ಸರ್ವ ರಾಷ್ಟ್ರಗಳ ಬಾಲಕರ ಮತ್ತು ಪ್ರಾಣಿಗಳ ಕಥೆಗಳನ್ನು ಶಿಷ್ಯರಿಗೆ ಚಿಕ್ಕಂದಿನಿಂದಲೇ ಹೇಳುತ್ತಹೋಗುವುದು ; ಆಗ ಆಯಾ ದೇಶಗಳ ಜನರ ಜೀವನಕ್ರಮ, ಆಚಾರ-ವಿಚಾರಗಳು ಮುಂತಾದವುಗಳ

ಕುತೂಹಲವನ್ನೂ ಆದರವನ್ನೂ ಅವರಲ್ಲಿ ಹುಟ್ಟಿಸುವುದು ; ಭೂಗೋಲದ ಪಾಠದಲ್ಲಿಯೂ ಈ ಬಗೆಯ ಅಂತರ್ರಾಷ್ಟ್ರೀಯ ಭಾವನೆಯ ಬೆಳೆವಣಿಗೆಗೆ ಅವಕಾಶವಿದೆ.

ಪ್ರಾಥಮಿಕ, ಮಾಧ್ಯಮಿಕ ಶಾಲೆಗಳ ಮೇಲಿನ ಇಯತ್ತೆಗಳ ವಿದ್ಯಾರ್ಥಿಗಳು ಜಗತ್ತಿನೊಳಗಿನ ಪ್ರಮುಖ ವ್ಯಕ್ತಿಗಳು— ಎಂದರೆ ಮಹಾಪುರುಷರೆನಿಸಿಕೊಂಡವರು—ನಡೆಯಿಸಿದ ಮಹತ್ಕಾರ್ಯಗಳನ್ನೂ ಜನಜೀವನದ ಮೇಲೆ ಅವರ ಕಾರ್ಯಗಳಿಂದಾದ ಪರಿಣಾಮವನ್ನೂ ಅಭ್ಯಸಿಸಬೇಕು. ರಾಷ್ಟ್ರ ಸಂಘದ ಧ್ಯೇಯವನ್ನೂ ಚಟುವಟಿಕೆಗಳನ್ನೂ ತಿಳಿದುಕೊಳ್ಳಬೇಕು. ಅವು ಮೇಲಿಂದ ಮೇಲೆ ಬದಲಾಗುವ ಜಗತ್ತಿನ ಪರಿಸ್ಥಿತಿಗೆ ತಕ್ಕಂತೆ ಹೆಚ್ಚು ಪರಿಣಾಮಕಾರಿಯಾಗುವ ಯೋಜನೆಗಳನ್ನು ಕಂಡು ಹಿಡಿಯಬೇಕು. ರಾಷ್ಟ್ರ ಸಂಘಕ್ಕೆ ಈಗಿನ ಎರಡನೆಯ ಜಾಗತಿಕ ಯುದ್ಧವನ್ನು ತಡೆಯುವದಾಗಲಿಲ್ಲ. ಜಗತ್ತಿನ ಶಾಂತತೆಯನ್ನು ಕಾಯ್ದುಕೊಳ್ಳುವ ಮೇಲ್ತರದ ಉಪಾಯಗಳ ಬಗ್ಗೆ ಆಲೋಚಿಸುವ ಆವಶ್ಯಕತೆಯಿದೆ. ಶಿಕ್ಷಕರು ಭೂಗೋಲದ ಪಾಠಗಳಲ್ಲಿಯೂ ವಿವಿಧ ದೇಶಗಳ ಜನರು, ಅವರ ದೈನಂದಿನ ಜೀವನಕ್ರಮ, ಇವುಗಳನ್ನು ವಿವರಿಸಿ, ಅವರಿಗೂ ತಮಗೂ ಇರುವ ಭೇದವು ಆಯಾ ದೇಶಗಳ ಪ್ರಾಕೃತಿಕ ಸಂಗತಿಗಳಿಗೆ ಸಂಬಂಧಿಸಿರುವುದೆಂದೂ ಅವರೆಲ್ಲರೂ ಮಾನವ ಕುಟುಂಬಕ್ಕೆ ಸೇರಿದ ನಮ್ಮ ಬಂಧುಗಳೆಂದೂ ಭಾವನೆಯನ್ನು ಹುಟ್ಟಿಸಬೇಕು. ಹಡಗುಪಡೆಗಳನ್ನೂ ಸೈನಿಕರನ್ನೂ ಸಾಮಗ್ರಿಗಳನ್ನೂ ಹೆಚ್ಚಿನ ಪ್ರಮಾಣದಿಂದ ಸಂಗ್ರಹಿಸಿ ರಾಷ್ಟ್ರಗಳು ಬಲಾಢ್ಯವಾಗಬೇಕೆಂಬ ಕಲ್ಪನೆಯನ್ನು ಜರೆದು, ಅಂಥ ರಾಷ್ಟ್ರಗಳು ವಿಶ್ವಶಾಂತಿಯ ಶತ್ರುಗಳೆಂಬ ಭಾವನೆಯನ್ನು ವಿದ್ಯಾರ್ಥಿಗಳ ಮನಸ್ಸಿನಲ್ಲಿ ಬಿಂಬಿಸಿದರೆ, ಪ್ರಾಗತಿಕ ಶಾಲೆಯು ಅಂತರರಾಷ್ಟ್ರೀಯತೆಯ ಹೊಣೆಯನ್ನು ಚೆನ್ನಾಗಿ ವಹಿಸಿದಂತಾಗುವುದು. ಇಂತಹ ಪ್ರಯತ್ನಗಳಿಂದಲೇ ಜಗತ್ತಿನಲ್ಲಿ ಶಾಂತಿಯು ತಲೆದೋರಬಹುದು. ಇಂದಿನ ವಿದ್ಯಾರ್ಥಿಗಳೇ ಮುಂದಿನ ನಾಗರಿಕರು ಎಂಬ ದೃಷ್ಟಿಯನ್ನು ಪ್ರಾಗತಿಕ ಶಾಲೆಗಳು ಇಟ್ಟುಕೊಂಡು ತಮ್ಮ ರಾಷ್ಟ್ರನಿರ್ಮಾಪಕ ಹೊಣೆಯನ್ನು ಜಾಗರೂಕತೆಯಿಂದ ನಿರ್ವಹಿಸಬೇಕು.

೬

# ಇತರ ಶಿಕ್ಷಣ ಸಂಸ್ಥೆಗಳು

"ಶಾಲೆಯು ಜನಜೀವನದ ಪ್ರತಿರೂಪವೇ ಆಗಿರಬೇಕು; ಅದು ಜನಜೀವನದಲ್ಲಿಯ ಉತ್ತಮಾಂಶಗಳನ್ನು ಕಲೆ ಹಾಕಿ ವಿದ್ಯಾರ್ಥಿಗಳ ಮನಸ್ಸಿನ ಮೇಲೆ ಅವೆಲ್ಲವುಗಳ ಪರಿಣಾಮವನ್ನು ಉಂಟುಮಾಡುವಂಥ ಸಂಸ್ಥೆಯಾಗಿರಬೇಕು. ಈ ಸಂಸ್ಥೆಯಲ್ಲಿ ಕೆಲಸ ಮಾಡುವವರು ವ್ಯವಹಾರಚತುರರಾಗಿರಬೇಕು. ಪುಸ್ತಕಗಳಿಂದ ಜ್ಞಾನವನ್ನು ಒದಗಿಸಿ ಕೊಡುವುದಷ್ಟೇ ಶಾಲೆಯ ಗುರಿಯಲ್ಲ." ಇತ್ಯಾದಿ ಸಂಗತಿಗಳು ಇಂದಿನ ಶಿಕ್ಷಣ ಶಾಸ್ತ್ರಜ್ಞರು ಶಾಲೆಯ ವಿಷಯದಲ್ಲಿ ಹೇಳುವ ಬಹು ಸಾರವತ್ತಾದ ಮಾತುಗಳಾಗಿವೆ. ಇತ್ತೀಚೆಗೆ ನಡೆದ ಶೈಕ್ಷಣಿಕ ಪ್ರಯೋಗಗಳ ಫಲವಾಗಿ 'ಶಿಕ್ಷಕ' ಶಬ್ದದ ಅರ್ಥವು ಮೇಲೆ ಹೇಳಿದಂಥ ಮಹತ್ಕಾರ್ಯಗಳಲ್ಲಿ ನಿಯುಕ್ತನಾದ ಘನವಾದ ವ್ಯಕ್ತಿ ಎಂದು ಹೇಳುವಷ್ಟು ವ್ಯಾಪಕತೆಯನ್ನು ಪಡೆದಿದೆ.

ಪ್ರಾಚೀನ ಗ್ರೀಕರ ಅಭಿಪ್ರಾಯದಲ್ಲಿ ಶಾಲೆಯು ವಿದ್ಯಾರ್ಥಿಗಳ ವಿಶ್ರಾಂತಿ ಸ್ಥಳವಾಗಿದ್ದಿತು; ಆದರೆ, ಈ ರೀತಿಯಾಗಿ ವಿದ್ಯಾರ್ಥಿಗಳು ಪಡೆಯುವ ವಿಶ್ರಾಂತಿಯು ಅವರು ಅಲ್ಲಿ ಸುವ್ಯವಸ್ಥೆಯಿಂದ ಅಚ್ಚುಕಟ್ಟಾಗುವಂತೆ ಮಾಡುವ ಕೆಲಸಗಳನ್ನು ಶಾಲೆಯೆಂಬ ಸಂಸ್ಥೆಯು ಒಳಗೊಂಡಿರಬೇಕೆಂದು ಆಧುನಿಕರ ಅಭಿಪ್ರಾಯ. ವಿದ್ಯಾಲಯವನ್ನು ಸೇರಿದ ವಿದ್ಯಾರ್ಥಿಯು ಅಲ್ಲಿಯ ಅಭ್ಯಾಸಕ್ರಮವನ್ನು ಮುಗಿಸಿದಕೂಡಲೆ ಅವನ ಶಿಕ್ಷಣವು ಮುಗಿಯಿತೆಂದು ಹೇಳುವ ಪರಿಪಾಠವುಂಟು. ಇದು ಸರಿಯಲ್ಲ. ವಿದ್ಯಾನಿಲಯಗಳಲ್ಲಿ ಕಲಿತ ವಿಷಯಗಳು ವಿದ್ಯಾರ್ಥಿಯು ಮುಂದಿನ ಆಯುಷ್ಯ ಭಾಗದಲ್ಲಿ ಪಡೆಯಬೇಕಾದ ಶಿಕ್ಷಣಕ್ಕೆ ಮಾರ್ಗದರ್ಶಿಯಾಗುವ ಅಸ್ತಿಭಾರವೆಂದು ಮಾತ್ರ ಹೇಳಬಹುದು. ತಮ್ಮ ವಯಸ್ಸಿನ ಏಳನೆಯ ವರುಷದಿಂದ ಮೊದಲ್ಮಾಡಿ, ಪ್ರಾಥಮಿಕ–ಮಾಧ್ಯಮಿಕ–ಪ್ರೌಢ ವಿದ್ಯಾಲಯಗಳಲ್ಲಿ ೧೪–೧೫ ವರುಷಗಳವರೆಗೆ ವಿವಿಧ

ವಿಷಯುಗಳ ಅಧ್ಯಯುನವನ್ನು ಚೆನ್ನಾಗಿ ಸಾಗಿಸಿ, ಕೊನೆಯು ಪರೀಕ್ಷೆಯಲ್ಲಿ ತೇರ್ಗಡೆಯಾದವರಿಗೆ ವಿಶ್ವವಿದ್ಯಾನಿಲಯದವರು ದಯೆಪಾಲಿಸುತಿರುವ 'ಸ್ನಾತಕ (ಬಿ. ಏ. ಕಲಾಶಿಕ್ಷಣ ಪ್ರವೇಶಾರ್ಹ) ವೆಂಬ ಪದವಿಯೂ, ಅದೇಕೆ, ವಿವಿಧ ಶಾಸ್ತ್ರಗಳಲ್ಲಿಯ ಪ್ರವೀಣತೆಗಾಗಿ ವಿದ್ಯಾಪೀಠಗಳು ಸಮರ್ಪಿಸುತಿರುವ 'ಚೂಡಾಮಣಿ-ಶಿರೋಮಣಿ'ಗಳೆಂಬ ಪದವಿಗಳೂ ಆಯಾ ವಿದ್ಯೆಗಳಲ್ಲಿಯ ಜ್ಞಾನದ ಪರಿಪೂರ್ಣತೆಯನ್ನು ಸೂಚಿಸುವುದಿಲ್ಲ. ಹೀಗಿರಲು, ಶಿಕ್ಷಣವು ಇಲ್ಲಿಗೆ ಮುಗಿಯಿತು ಎಂದು ಹೇಳಿದರೆ ಹರಿಯುವ ಹೊಳೆಯ ಪ್ರವಾಹವು ಸ್ತಬ್ಧವಾಯಿತೆಂದು ಹೇಳಿದಂತೆಯೆ ಸರಿ; ನದಿಯ ಪ್ರವಾಹವು ಅನಂತವಾಗಿ ಸಾಗಿರುವಂತೆ ಶಿಕ್ಷಣವೂ ಮಾನವ ಜೀವನದಲ್ಲಿ ಅಜಸ್ರವಾಗಿ ಸಾಗಲೇಬೇಕು.

ಹೀಗೆ ಮಾನವ ಪ್ರಾಣಿಯ ಶಿಕ್ಷಣ ಕಾರ್ಯವನ್ನು ಸಂತತವಾಗಿ ಸಾಗಿಸುವುದಕ್ಕೆ ಪ್ರಪಂಚದಲ್ಲಿ ಶಾಲೆಗಳಷ್ಟೇ ಅಲ್ಲದೆ ಇನ್ನೂ ಅನೇಕ ಶಿಕ್ಷಣ ಸಂಸ್ಥೆಗಳು ಪುಸ್ತಕ, ಅಭ್ಯಾಸಕ್ರಮ, ಪರೀಕ್ಷೆ ಮೊದಲಾದುವುಗಳ ಮೇರೆ ಗುರಿಗಳನ್ನು ಮೀರಿ ಕೆಲಸ ಮಾಡುತ್ತಿವೆ. ಅವನ್ನು ಇಲ್ಲಿ ಸಂಕ್ಷೇಪವಾಗಿ ವಿವರಿಸೋಣ :—

೧. **ಪುಸ್ತಕಾಲಯಗಳು :—** ವಿದ್ಯಾಲಯಗಳಲ್ಲಿಯ ಅಭ್ಯಾಸಕ್ರಮವನ್ನು ಮುಂದುವರಿಸುವುದಕ್ಕೆ ಪುಸ್ತಕಾಲಯಗಳು ಮಹತ್ತ್ವದ ಶಿಕ್ಷಣ ಕೇಂದ್ರಗಳು. ಪುಸ್ತಕಾಲಯವು ಶಿಕ್ಷಕ- ಅಭ್ಯಾಸಕ್ರಮಗಳ ನಿರ್ಬಂಧವಿಲ್ಲದ ಶಾಲೆಗಳೇ ಎಂದು ಹೇಳಿದರೆ ತಪ್ಪಾಗದು. ಅಲ್ಲಿ ಓದುವ ವಿದ್ಯಾರ್ಥಿಯು ಪುಸ್ತಕಗಳು ಮತ್ತು ನಿಯತಕಾಲಿಕೆಗಳೆಂಬ ಗುರುಗಳ ಮುಖಾಂತರವಾಗಿ ತಾನು ಹಿಂದೆ ಪಡೆದ ಶಿಕ್ಷಣವನ್ನು ಊರ್ಜಿತಗೊಳಿಸಿ ಹೆಚ್ಚಿನ ಶಿಕ್ಷಣವನ್ನು ಪಡೆಯಲು ಹವಣಿಸುವನು. ಕಡಮೆಯ ವೆಚ್ಚದಲ್ಲಿ ಹೆಚ್ಚಿನ ಜ್ಞಾನಾರ್ಜನೆಗೆ ಅನುಕೂಲವಾದ ಶಿಕ್ಷಣ ಸಂಸ್ಥೆಗಳಿವು. ಪುಸ್ತಕಾಲಯಗಳ ಚಾಲಕರು ಅಲ್ಲಿ ಬರುವ ಶಿಕ್ಷಣಾಕಾಂಕ್ಷಿಗಳ ಸಲುವಾಗಿ ಪುಸ್ತಕಗಳ ವಿಷಯಾನುಕ್ರಮದ ಪಟ್ಟಿ, ಅವುಗಲ್ಲಿಯ ವಿವರಣೆಗಳ ಟಿಪ್ಪಣೆ, ಮೊದಲಾದ ಸಾಧನಗಳನ್ನು ಒದಗಿಸಬೇಕು.

**೨. ಧಾರ್ಮಿಕ ಶಿಕ್ಷಣ ಸಂಸ್ಥೆಗಳು :—** ಪುರಾಣ, ಕೀರ್ತನ ಮುಂತಾದ ಸಾಮುದಾಯಿಕ ಶಿಕ್ಷಣಕಾರ್ಯಗಳು ಮಾನವನ ಜೀವನದಲ್ಲಿ ವಿಶಿಷ್ಟವಿಧದ ಶಿಕ್ಷಣವನ್ನು ಒದಗಿಸಲು ಸಹಕಾರಿಯಾಗುವುವು. ಅವು ವಿಶ್ರಾಂತಿದಾಯಕವೂ ಆಹ್ಲಾದಕರವೂ ಆಗಿದ್ದು ಮನುಷ್ಯನಿಗೆ ತಕ್ಕ ಸಂಸ್ಕಾರಗಳನ್ನು ಒದಗಿಸುವುವು. ಕೇವಲ ಧಾರ್ಮಿಕ ಶಿಕ್ಷಣಸಂಸ್ಥೆಗಳು ಮೇಲೆ ಹೇಳಿದಂಥ ಸಾಮೂಹಿಕ ಸಂಸ್ಕಾರಗಳನ್ನೇ ಒದಗಿಸುವುವಾದರೂ ಹಲಕೆಲವು ಸಂದರ್ಭಗಳಲ್ಲಿ ವಿಶಿಷ್ಟಧರ್ಮ-ಮತ-ಪಂಥಗಳ ವಿಕಾಸಕ್ಕೆ ಹೆಚ್ಚಿನ ಪ್ರಾಶಸ್ತ್ಯವನ್ನು ಕೊಡುವಂಥ ಪ್ರಚಾರಕಾರ್ಯಗಳನ್ನು ನಡೆಯಿಸುವುದರಿಂದ ವಿಶಿಷ್ಟ ಜನಸಮುದಾಯಕ್ಕಷ್ಟೇ ಪ್ರಿಯವಾಗುವ ಸಂಭವವುಂಟು. ಒಟ್ಟಿನಮೇಲೆ, ಮಾನವನ ಸಂಸ್ಕೃತಿಯ ಗುರಿಯ ದೃಷ್ಟಿಯಿಂದ ನೋಡಿದಾಗ, ಇವೂ ಮೇಲ್ತರದ ಶಿಕ್ಷಣಸಂಸ್ಥೆಗಳಾಗಿಯೂ ತೋರುವುದರಲ್ಲಿ ಸಂಶಯವಿಲ್ಲ.

**೩. ನಾಟಕ ಶಾಲೆಗಳು :—** ಬಯಲಾಟಗಳು, ನಾಟಕಗಳು, ಚಲನಚಿತ್ರಗಳು ಮುಂತಾದುವು ಸಾರ್ವತ್ರಿಕ ಶಿಕ್ಷಣಕಾರ್ಯವನ್ನು ಪ್ರತ್ಯಕ್ಷವಾಗಿ ಅಲ್ಲದೆ ಇದ್ದರೂ ಅಪ್ರತ್ಯಕ್ಷವಾಗಿ ಮಾಡುವುವೆಂಬುದು ನಿರ್ವಿವಾದದ ಮಾತು. ನಾಟಕಾಭಿನಯದಿಂದ ಜನತೆಯ ಮನಸ್ಸಿನ ಮೇಲೆ ಆಗುವ ಪರಿಣಾಮವು ಉಜ್ವಲವಾದುದು. ಪರದೇಶಗಳಲ್ಲಿ ನಾಟಕಗಳ ಮೂಲಕವಾಗಿ ದೊರೆಯುವ ಶಿಕ್ಷಣದ ವಿಷಯದಲ್ಲಿ ಭಿನ್ನಾಭಿಪ್ರಾಯವಿದ್ದರೂ ಇರಬಹುದು. ಅಲ್ಲಿ "ನಾಟಕಶಾಲೆಗಳೆಂದರೆ ಅನ್ಯಾಯದ ಕೂಪಗಳು" ಎಂದು ಹೇಳಿದವರೂ ಇದ್ದಾರೆ. ಆದರೆ ನಮ್ಮ ದೇಶದಲ್ಲಿ ಮಾತ್ರ ಅವು "ರಾಮನಂತೆ ನಡೆಯಿರಿ, ರಾವಣನಂತೆ ವರ್ತಿಸಬೇಡಿರಿ" ಎಂದು ಮೊದಲಾಗಿ ಉಪದೇಶಮಾಡುವ ಕಾರ್ಯವನ್ನು ಯಶಸ್ವಿಯಾಗಿ ಮಾಡುತ್ತಿವೆ. ಇಂದಿನ ಸುಧಾರಣೆಯ ಕಾಲದಲ್ಲಿ ಚಲನಚಿತ್ರಗಳು ನಾಟಕಗಳನ್ನು ಹಿಂದೊತ್ತಿ ತಾವೇ ಮುಂದೆ ಬರಲಾರಂಭಿಸಿವೆ. ಶೈಕ್ಷಣಿಕ ದೃಷ್ಟಿಯಿಂದಲೇ ತಯಾರಿಸಿದ ಚಿತ್ರ-ಪಟಗಳೂ ದೇಶಾಂತರಗಳಲ್ಲಿ ಹುಟ್ಟಿವೆ. ಚಲನಚಿತ್ರಗಳ ಪ್ರಚಾರವು ನಮ್ಮ ದೇಶದಲ್ಲಿಯೂ ಭರದಿಂದ ಸಾಗಿದೆ.

೪. **ವೃತ್ತಪತ್ರಗಳೂ ನಿಯತಕಾಲಿಕೆಗಳೂ :—** ಒಂದು ಸಾರ್ವಜನಿಕಸ್ಥಳದಲ್ಲಿ ನಡೆಯುವ (ಮೇಲೆ ಹೇಳಿದ) ಶಿಕ್ಷಣಕ್ರಮದ ತರುವಾಯ ಮನೆಮನೆಗೆ ಹೋಗಿ, ಪ್ರತಿಯೊಬ್ಬನ ಕೋಣೆಯಲ್ಲಿ ಕುಳಿತು, ಶಿಕ್ಷಣಕಾರ್ಯವನ್ನು ನಡೆಯಿಸುವ ಸಾಧನವೆಂದರೆ ವರ್ತಮಾನ ಪತ್ರಗಳು. ಚಿತ್ರಗಳಿಂದ ಆಕರ್ಷಕವಾಗಿ, ವಿಷಯಗಳ ವಿವೇಚನೆಯಿಂದ ಓದುಗರಿಗೆ ತಕ್ಕ ಶಿಕ್ಷಣವನ್ನು ಕೊಡುವ, ನಿಯತಕಾಲಿಕೆಗಳು ಜನತೆಯ ಶಿಕ್ಷಣಕ್ಕೆ ಬಹುವಿಧವಾಗಿ ನೆರವಾಗುವುವು. ಒಳಿತಿರುವಲ್ಲಿಯೆ ಕೆಡಕೂ ಇರುವುದು ಪ್ರಕೃತಿಯ ಸಹಜಧರ್ಮ; ಈ ನಿಯತಕಾಲಿಕೆಗಳಿಂದ ಸತ್ಪರಿಣಾಮಗಳಾಗುವಂತೆ ದುಷ್ಪರಿಣಾಮಗಳೂ ಆಗುವ ಸಂಭವವಿರುವುದು. ಈ ನಿಯತಕಾಲಿಕೆಗಳ ಸಂಪಾದಕರು ಕೆಲವೊಂದು ವಿಶಿಷ್ಟ ವಿಚಾರಗಳ ಪ್ರಚಾರ ಕಾರ್ಯವನ್ನು ಮಾಡಲೆಂದು ಒಂದು ಪಕ್ಷವನ್ನು ಎತ್ತಿ ಹಿಡಿದು ಲೇಖನಗಳನ್ನು ಬರೆಯತೊಡಗಿದಾಗ ಅವು ಮಾನವನ ಸಂಸ್ಕೃತಿಯೆಂಬ ಸಾಮಾನ್ಯ ಗುರಿಯನ್ನು ಮರೆತಂತಾಗುವುದು. ಇಂಥ ಸಂದರ್ಭಗಳನ್ನೇ ಅವಲೋಕಿಸಿದ ಮಹಾನುಭಾವರು ಈ ಪತ್ರಿಕಾ ಮೂಲಕವಾದ ಶಿಕ್ಷಣವನ್ನು ನಿಷೇಧಿಸಿರುವರು. ಒಬ್ಬ ಪ್ರಸಿದ್ಧ ಪತ್ರಿಕಾ ಕರ್ತನು "ವರ್ತಮಾನ ಪತ್ರಗಳ ಜಾಲದಲ್ಲಿ ಸಿಕ್ಕದೆ ಇದ್ದವನೇ ಸುಶಿಕ್ಷಿತನು" ಎಂದೂ, ಸ್ವಾಮಿ ರಾಮತೀರ್ಥರು "ವರ್ತಮಾನ ಪತ್ರಗಳನ್ನು ಓದದೆ ಇದ್ದವರೇ ದೇವರ ದಯೆಗೆ ಪಾತ್ರರು" ಎಂದೂ, ವರ್ತಮಾನ ಪತ್ರಗಳಿಂದ ತಾವು ಪಡೆದ ಅನಿಷ್ಟಗಳ ಅನುಭವವನ್ನು ಸಾರಿ ಹೇಳಿರುವರು; ಆದರೆ ಮೇಲೆ ಹೇಳಿದಂತೆ ನಿಯತಕಾಲಿಕೆಗಳು ನಿಃಪಕ್ಷಪಾತದೃಷ್ಟಿಯಿಂದ ನಡೆದು, ಲೋಕಶಿಕ್ಷಣದ ಪವಿತ್ರವಾದ ಗುರಿಯಿಂದ ಕೆಲಸಮಾಡತೊಡಗಿದರೆ, ಅವು ಪ್ರಯೋಜನಕಾರಿಯಾಗಿ ಪರಿಣಮಿಸಿ, ಜನತೆಯ ಅಭಿರುಚಿಗಳನ್ನು ತಿದ್ದಿ, ಹೊಸವಾದ ಆಕಾಂಕ್ಷೆಗಳನ್ನು ಹುಟ್ಟಿಸಿ, ಶಿಕ್ಷಣಕ್ಕೆ ಆದರ್ಶವಾದ ಧ್ಯೇಯಗಳನ್ನು ಕಲ್ಪಿಸಿಕೊಡಬಲ್ಲುವೆಂಬುದರಲ್ಲಿ ಸಂಶಯವಿಲ್ಲ.

೫. **ಪ್ರಚಾರಕ ಸಂಸ್ಥೆಗಳು:—** ರಾಜಕೀಯ, ಸಾಮಾಜಿಕ ಅಥವಾ ಆರ್ಥಿಕ, ಔದ್ಯೋಗಿಕ, ವ್ಯವಸಾಯಾತ್ಮಕ-ಸುಧಾರಣೆಗಳನ್ನು ಗುರಿಯನ್ನಾಗಿರಿಸಿಕೊಂಡು ನಡೆಯಿಸಿರುವ ಪ್ರಚಾರ ಕಾರ್ಯಗಳಿಂದಲೂ

**ಜನತೆಯು ತಕ್ಕ ಶಿಕ್ಷಣವನ್ನು ಪಡೆಯುವುದು.** ಪ್ರಕಟನೆಗಳು, ಹಸ್ತ-ಪತ್ರಿಕೆಗಳು ಮುಂತಾದುವು ಈ ಪ್ರಚಾರ ಕಾರ್ಯದ ಸಾಧನಗಳು. ಈ ಪ್ರಚಾರ ಕಾರ್ಯವನ್ನು ಸುಂದರವಾಗಿಯೂ ಸದ್ಗುಣಪ್ರೇರಕವಾಗಿಯೂ ಕಲಾಪೋಷಕವಾಗಿಯೂ ಮಾರ್ಪಡಿಸಬಹುದು; ಇಂತಹ ಸಾಧನಗಳಿಂದ ಪ್ರಚಾರ ಕಾರ್ಯವನ್ನು ಕೈಕೊಂಡಾಗ ಅವು ಪರಸ್ಪರ ಸಹಾಯಕವಾಗುವಂತೆ ನೋಡಿಕೊಳ್ಳಬೇಕಾಗುವುದು.

ಒಕ್ಕಲುತನ, ಸಹಕಾರ, ಗ್ರಾಮೋದ್ಧಾರ ಮುಂತಾದ ಸಾರ್ವಜನಿಕ ಹಿತದ ಕಾರ್ಯಗಳನ್ನು ಕೈಕೊಂಡಿರುವ ಸಂಸ್ಥೆಗಳೂ ತಮ್ಮ ಕಾರ್ಯಗಳ ಪ್ರಚಾರವನ್ನು ಮಾಡುವುದಕ್ಕಾಗಿ ಯತ್ನಿಸುವಾಗ ಆಯಾ ವಿಷಯಗಳಲ್ಲಿ ಲೋಕಶಿಕ್ಷಣವನ್ನು ಸಾಗಿಸುವುವೆಂಬುದು ಹೊಸ ಮಾತಲ್ಲ. ಇದೇ ರೀತಿಯಲ್ಲಿ ಬೇರೆ ಬೇರೆ ಉದ್ಯೋಗ—ವ್ಯವಸಾಯಗಳನ್ನು ಕೈಕೊಂಡಿರುವ ಸಂಸ್ಥೆಗಳು ತಮ್ಮ ತಮ್ಮ ವ್ಯವಸಾಯಗಳ ಉತ್ಕರ್ಷಕ್ಕಾಗಿ ಮಾಡುವ ಪ್ರಚಾರದಿಂದ ಸಾಗುತ್ತಿರುವ ಲೋಕಶಿಕ್ಷಣ ಕಾರ್ಯವನ್ನೂ ನಾವು ಮರೆಯಲಾಗದು. ಈ ಬಗೆಯ ಪ್ರಚಾರಕ ಸಂಸ್ಥೆಗಳು ಅಪ್ರತ್ಯಕ್ಷವಾಗಿ ಶಿಕ್ಷಣ ಸಂಸ್ಥೆಗಳ ಕಾರ್ಯವನ್ನೇ ಮಾಡುವುವು ಎಂದಂತಾಗುವುದು.

೬. **ವಸ್ತುಸಂಗ್ರಹಾಲಯಗಳೂ ಕಲಾಮಂದಿರಗಳೂ.—** ಇವುಗಳನ್ನು ರಚಿಸುವಾಗ ಸಾಮಾನ್ಯವಾಗಿ ಲೋಕಶಿಕ್ಷಣದ ತತ್ತ್ವಗಳನ್ನು ಅನುಲಕ್ಷಿಸಿರುವುದಿಲ್ಲವಾದ್ದರಿಂದ ಇವುಗಳಿಂದ ಆಗಬೇಕಾದಷ್ಟು ಪ್ರಯೋಜನವಾಗುತ್ತಿರುವುದಿಲ್ಲ.

ಇತಿಹಾಸ, ಭೂಗೋಲ, ಕಲಾಕೌಶಲ್ಯ ಮೊದಲಾದ ಬೇರೆ ವಿಷಯ-ವಿಭಾಗಗಳನ್ನು ಅನುಲಕ್ಷಿಸಿ ವಸ್ತುಗಳನ್ನು ವರ್ಗೀಕರಿಸಿ ವ್ಯವಸ್ಥಿತವಾಗಿಯೂ ರಮ್ಯವಾಗಿಯೂ ಪರಿಣಾಮಕಾರಿಯಾದ ರೀತಿಯಲ್ಲಿಯೂ ಅವುಗಳನ್ನು ಅನುಗೊಳಿಸಿ ಕಾಲಕಾಲಕ್ಕೆ ನ್ಯೂನಾತಿರೇಕಗಳನ್ನು ಸರಿಪಡಿಸುತ್ತಿದ್ದರೆ, ಯೋಗ್ಯ ಶಿಕ್ಷಣಪಡೆದ ಮೇಲ್ವಿಚಾರಕರು ಆಯಾ ವಸ್ತುಗಳನ್ನೂ ಚಿತ್ರಗಳನ್ನೂ ತೋರಿಸಿ, ನೋಡಲು ಬಂದವರಿಗೆ ನೆರವಾಗುತ್ತಿದ್ದರೆ, ಅವುಗಳಿಂದ ಪ್ರಯೋಜನವಾಗುವುದರಲ್ಲಿ ಸಂದೇಹವಿಲ್ಲ.

ಪುಸ್ತಕಗಳನ್ನು ಓದಿ ಕಲಿತ ವಿಷಯಗಳ ನೂರುಮಡಿ ಪ್ರಯೋಜನವು ಇಂಥ ವಸ್ತುಸಂಗ್ರಹಾಲಯಗಳಲ್ಲಿ ಪಡೆದ ಜ್ಞಾನದಿಂದ ಆಗುವುದು ಎಂದರೆ ಅರಿದೆನಿಸದು.

ದೇಶಸಂಚಾರದಿಂದಲೂ ಇದೇ ಬಗೆಯ ಪ್ರತ್ಯಕ್ಷ ಜ್ಞಾನಾನುಭವಗಳು ದೊರೆಯುವುದರಿಂದ ಕೆಲವು ವಿದ್ಯಾಲಯಗಳಲ್ಲಿ ಶಿಕ್ಷಣದ ಜೊತೆಗೆ ವಿದ್ಯಾರ್ಥಿಗಳು ಪ್ರವಾಸದಿಂದಲೂ ಅನುಭವಗಳನ್ನು ಪಡೆಯಬೇಕೆಂಬ ನಿರ್ಬಂಧವಿರುವುದು.

೭. **ವ್ಯವಸಾಯಗಳು :—** ಕುಂಬಾರ, ಕಂಬಾರ, ನೇಕಾರ ಮೊದಲಾದ ವ್ಯವಸಾಯಗಾರರು ತಮ್ಮ ತಮ್ಮ ವ್ಯವಸಾಯಗಳಲ್ಲಿ ಕುಶಲತೆಯನ್ನು ಪರಂಪರೆಯಿಂದ ದೊರಕಿಸಿಕೊಳ್ಳುವುದನ್ನು ಎಲ್ಲರೂ ಬಲ್ಲರು. ಇಂತಹ ವೃತ್ತಿಶಿಕ್ಷಣವನ್ನು ಕೊಡುವ ಶಿಕ್ಷಣಸಂಸ್ಥೆಗಳು ವಿರಳವಾಗಿದ್ದರೂ ನಮ್ಮ ದೇಶದಲ್ಲಿ ಅವರವರ ಮನೆತನದ ಹೋರೆಗಳನ್ನು ಆಯಾ ಜನರು ಊರ್ಜಿತವಾಗಿರಿಸಿಕೊಳ್ಳುವ ಪರಿಪಾಠವಿದೆ. ಹೀಗೆ ಆಯಾ ಜನರಲ್ಲಿ ತಮ್ಮ ತಮ್ಮ ವ್ಯವಸಾಯಗಳ ಶಿಕ್ಷಣವು ಹಿರಿಯರಿಂದ ಕಿರಿಯರಿಗೆ ಸಾಗಿಬರುವುದರಿಂದ ಆ ವ್ಯವಸಾಯಗಳೂ ಜನತೆಯ ಶಿಕ್ಷಣಕ್ಕೆ ನೆರವಾಗುವುವು. ಮುಂದೆ ಕೊಟ್ಟ ಒಂದು ಕವಿತೆಯಲ್ಲಿ **ಬ್ರೌನಿಂಗ**ನೆಂಬ ಆಂಗ್ಲ ಕವಿಯು ಹೇಳಿದ ವ್ಯವಸಾಯ ಶಿಕ್ಷಣವಿಷಯಕವಾದ ಮಾತುಗಳು ಮನನೀಯವಾಗಿವೆ :—

**ನೀನು ಮಾಡುವ ಕೆಲಸ ಆಟದಂತಿರಲಿ |**
**ಕೇಣವೇಂ? ಆಟವೇ ಜೀವವಾಗಿರಲು ||**
**ಮೂರರಲಿ ಒಂದಿರಲಿ, ಮೂರು ಒಂದಾಗಿರಲಿ |**
**ತಾರತಮ್ಯವನಳಿದು ಸುಖವ ತರುತಿರಲಿ ||**
**ಕಟುಕನಲಿ ಚಿತ್ರಕಲೆ ತಲೆದೋರಿಬರಲು |**
**ಕಟುಕತನವಳಿದು ತಾ ಕಲೆಗಾರನಾಗುವನು ||**
**ರೊಟ್ಟಿಯನು ಸುಡುವವನು ಕವನ ಹಾಡುವನು |**
**ಕಷ್ಟದಾ ನಿಮಿಷಗಳ ಮರೆದು ಸುಖಿಸುವನು ||**

ಮೋಹದಿಂ ಬತ್ತಿಗಳ ಮಾಳ್ಪ ಮಾನವ ತಾನು |
ಗಾನಲೀನತೆಯಿಂದ ಆತ್ಮ ತಣಿಸುವನು ||
ಅಂತಿರಲಿ ವೀಣೆಯಿಂ ಮೀಂಟಿತನಗಿರುವ |
ಚಿಂತೆಗಳ ಸರಿಸುವನು ಶಾಂತನಾಗಿರುವ ||
ಇದು ಜಗದ ಮಾತಿಹುದು ಬುಧನೆ ನೀನರಿಕು |
ಒದಗಿರುವ ಕಾರ್ಯದಲಿ ತೋರು ಬಕುತಿಯನು ||

—ಶ್ರೀ. ಮುಜುಮುದಾರ ನರಸಿಂಹರಾಯರು.

೮. **ಬಾಲಚಮೂ ( ಸ್ಕೌಟ ) ಸಂಸ್ಥೆಗಳು:—** ಶಾಲೆಗಳಲ್ಲಿ ದೊರೆಯುವ ಪುಸ್ತಕಗಳ ಜ್ಞಾನದ ಜೊತೆಗೆ ವಿದ್ಯಾರ್ಥಿಗಳಿಗೆ ಜೀವನ ಸಂಸ್ಕಾರಗಳನ್ನು ಕೊಡುವ ಧ್ಯೇಯದಿಂದ ಈ ಸಂಸ್ಥೆಗಳು ಹಲವು ಸುಶಿಕ್ಷಿತ ರಾಷ್ಟ್ರಗಳಲ್ಲಿ ಕಾರ್ಯವನ್ನು ಮಾಡುತ್ತಲಿರುವುವು. ಈ ಶಿಕ್ಷಣ ದಲ್ಲಿ ಆಟ, ತಾನು ತನ್ನ ಕಾಲಮೇಲೆಯೆ ನಿಂತು ಪರರಿಗೆ ನೆರವಾಗುವುದು, ಆರೋಗ್ಯ ರಕ್ಷಣೆ—ಇವೇ ಮೊದಲಾದ ಮಹತ್ತ್ವದ ಕಾರ್ಯಕ್ರಮದ ಸೇರ್ಪಡೆಯಾಗುವುದರಿಂದ ಇದು ಶಾಲಾಶಿಕ್ಷಣದ ಯೋಗ್ಯ ಪೂರಕ ವೆಂದು ಕಾಣದೆ ಇರದು.

೯. **ಆಕಾಶವಾಣಿ** ( ಬಾನುಲಿ ) **:—** ಇತ್ತೀಚೆಗೆ ಆಕಾಶವಾಣಿಯು ಹಲವು ಕೇಂದ್ರಗಳಲ್ಲಿ. ಶೈಕ್ಷಣಿಕ ವಿಷಯಗಳ ಕಾರ್ಯಕ್ರಮಗಳ ಸೇರ್ಪಡೆಯಾಗಿರುವುದರಿಂದ ಬಾನುಲಿಗಳಿಗೂ ಶೈಕ್ಷಣಿಕ ಸಂಸ್ಥೆಗಳ ಸ್ವರೂಪವುಂಟಾಗಿರುವುದು. ಇಂಥ ಶೈಕ್ಷಣಿಕ ದೃಷ್ಟಿಯಿಂದಲೇ ಆರಿಸಿದ ವಿಷಯಗಳನ್ನು ಬಿಟ್ಟರೂ ಸಹ ಸಂಗೀತ, ಸಾಹಿತ್ಯಕ ಉಪನ್ಯಾಸ ಗಳು, ಆರ್ಥಿಕ ಸಾಮಾಜಿಕ ರಾಜಕೀಯ ಮೊದಲಾದ ಮಹತ್ತ್ವದ ವಿಷಯಗಳ ಮೇಲಿನ ಉಪನ್ಯಾಸಗಳು, ಇವು ಆಕಾಶವಾಣಿಯಲ್ಲಿ ಕಾಲಕಾಲಕ್ಕೆ ಪ್ರಕಟವಾಗುವುದರಿಂದ ಅವು ಲೋಕಶಿಕ್ಷಣಕ್ಕೆ ಸಹಕಾರಿ ಯಾಗಿರುವುವು.

೧೦. **ಕುಟುಂಬ ( ಗೃಹಶಿಕ್ಷಣ ) :—** ಕೊನೆಗೆ ಹೇಳುವ ಈ ಶೈಕ್ಷಣಿಕ ಸಂಸ್ಥೆಯು ಅತ್ಯಂತ ಪುರಾತನವಾದುದು. ಕುಟುಂಬವು

ವಿಶ್ವಕುಟುಂಬದ ಚಿಕ್ಕ ಮಾದರಿ. ಪ್ರೀತಿ, ವಿನಯ, ನಯ, ಸಹಾನುಭೂತಿ, ಸಹಕಾರ ಮುಂತಾದ ಉದಾತ್ತಗುಣಗಳ ವಿಕಾಸಕ್ಕೆ ಮನೆಯೇ ಮೂಲಾಧಾರವು. ಮಗುವು ಮೊತ್ತಮೊದಲು ತಾಯಿಯಿಂದ ಶಿಕ್ಷಣವನ್ನು ಪಡೆಯಲಾರಂಭಿಸುವುದು. ಮಾತಾಡಲಿಕ್ಕೂ ಓಡಾಡಲಿಕ್ಕೂ ಅವಳೇ ಕಲಿಸುವಳು. ಒಳ್ಳೆಯ ಆಹಾರ, ನಿದ್ದೆಯ ನಿಯಮ, ಉಡುಗೆತೊಡುಗೆಗಳ ಅಚ್ಚುಕಟ್ಟುತನ, ಮುಂತಾದುವುಗಳ ಅಭಿರುಚಿಯ ಬೀಜಾರೋಪಣೆಯೂ ತಾಯಿಯಿಂದಲೇ ಆಗುವುದು. ಅಕ್ಕ-ತಂಗಿ, ಅಣ್ಣ-ತಮ್ಮ ಇವರಿಂದ ಸಹಾನುಭೂತಿಯ ಮತ್ತು ಸಹಕಾರದ ಪಾಠಗಳು ದೊರೆಯುವುವು. ಮನೆಯ ಸುತ್ತುಮುತ್ತಲಿನ, ಬರಬರುತ್ತ ಮಗುವು ಆಡ್ಡಾಡುವ ಪ್ರದೇಶದೊಳಗಿನ, ಪ್ರಾಣಿ–ವನಸ್ಪತಿಗಳು ಮತ್ತು ಸೃಷ್ಟಿಚಮತ್ಕಾರಗಳು—ಇವುಗಳ ಜ್ಞಾನವೂ ಕುಟುಂಬದೊಳಗೆ ತನ್ನ ಸ್ಥಾನದ ಕಲ್ಪನೆಯೂ ಮಗುವಿಗೆ ತಾಯಿಯಿಂದಲೇ ದೊರೆಯುವುವು. ಪ್ರಾಚೀನ ಕಾಲದ ಋಷಿಮುನಿಯರಲ್ಲಿ ಮನೆಯೇ ಶಾಲೆಯೂ, ತಂದೆ ತಾಯಿಗಳೇ ಶಿಕ್ಷಕರೂ ಆಗಿದ್ದರೆಂತೆ. 'ಮೂರು ವರುಷದ ಬುದ್ಧಿ ನೂರು ವರುಷ' ವೆಂದು ಹೇಳುವ ಮಾತು ಕೌಟುಂಬಿಕ ಶಿಕ್ಷಣಕೇಂದ್ರದ ಗೌರವವನ್ನು ಸಿದ್ಧಮಾಡಿ ತೋರಿಸುವುದು.

ಮೇಲ್ಕಾಣಿಸಿದ ಸಾಧನಗಳ ಮುಖಾಂತರವಾಗಿ ದೊರೆಯಬಹುದಾದ ಶಿಕ್ಷಣವನ್ನು 'ಸ್ವಶಿಕ್ಷಣ' 'ಸಹಾಯಕ ಶಿಕ್ಷಣ' ಎಂದೂ ಇಲ್ಲವೆ 'ವೈಶ್ವಿಕ ಅಥವಾ ವಿಶ್ವತೋಮುಖ ಶಿಕ್ಷಣ' ಎಂದೂ ಕರೆಯುವರು. ಈ ತರದ ಶಿಕ್ಷಣವು ವಿದ್ಯಾರ್ಥಿಗಳ ಮೇಲೆ ಎಷ್ಟು ಪರಿಣಾಮವನ್ನುಂಟುಮಾಡಿದೆಯೆಂಬುದನ್ನು ಕಂಡುಹಿಡಿದು ಅದರ ಸಂಪೂರ್ಣ ಲಾಭವನ್ನು ಶಿಕ್ಷಕರು ಪಡೆಯಬೇಕು.

# ೧೦

# ಶಿಕ್ಷಕನೂ ವ್ಯಕ್ತಿತ್ವವೂ

ವ್ಯಕ್ತಿತ್ವವೆಂದರೇನೆಂಬುದನ್ನು ಬೆರಳಿಟ್ಟು ತೋರಿಸುವುದು ಸುಲಭ ಸಾಧ್ಯವಲ್ಲ. ಇದೇನು ಗುಣವೊ, ರೂಪವೊ, ಶಕ್ತಿಯೊ, ಗುಣರೂಪ ಶಕ್ತಿಗಳ ಸಮುಚ್ಚಯವೊ ಎಂಬುದನ್ನು ಕೂಡ ನಿರ್ಣಯಿಸಿ ಹೇಳಲು ಬರುವಂತಿಲ್ಲ. ಮುಂದೆ ಹೇಳುವ ಕೆಲವು ಮಾತುಗಳಿಂದ ಅದೇನೆಂಬುದರ ಸ್ಥೂಲ ಕಲ್ಪನೆಯಾಗಬಹುದು. ವ್ಯಕ್ತಿತ್ವವುಳ್ಳವನು ಹೆಚ್ಚಿನ ಹೊಣೆಗಾರಿಕೆಯುಳ್ಳ ಅಧಿಕಾರಸ್ಥಾನದಲ್ಲಿದ್ದರೂ ತನ್ನ ಆಡಳಿತೆಯನ್ನು ಸುವ್ಯವಸ್ಥಿತವಾಗಿ ಸಾಗಿಸಿಕೊಂಡು ಹೋಗುವನು. ವ್ಯಾಪಾರ, ವಕೀಲಿ ಮುಂತಾದ ಯಾವ ಉದ್ಯೋಗ ವ್ಯವಸಾಯಗಳಲ್ಲಿ ತೊಡಗಿದರೂ ಅದರಲ್ಲಿ ಅವನು ಯಶಸ್ವಿಯಾಗಿ 'ಸೈ, ಸೈ' ಎನ್ನಿಸಿಕೊಳ್ಳುವನು. ಲೋಕಸೇವೆಯ ಪವಿತ್ರ ಕಾರ್ಯದಲ್ಲಿ ತೊಡಗಿದರಂತೂ ಅವನ ಮಾತುಗಳು ವೇದವಾಕ್ಯಗಳೆಂದು ಜನತೆಯು ಅವುಗಳನ್ನು ಪಾಲಿಸತೊಡಗುವುದು. ಅವನ ದಾರಿಯೊಳಗಿನ ಎಡರುತೊಡರುಗಳು, ವಿರೋಧವೈಷಮ್ಯಗಳು, ತೇಜಃಪುಂಜನಾದ ಸೂರ್ಯನ ಎದುರಿನ ಮಂಜಿನಂತೆ, ನೋಡುನೋಡುವಷ್ಟರಲ್ಲಿ ಚದರಿ ಮಾಯವಾಗುವುವು. ಗ್ರೇಟಬ್ರಿಟನ್ನದ ಸೇನಾಖಾತೆಯಲ್ಲಿ ಸುಪ್ರಸಿದ್ಧನಾದ ಲಾರ್ಡಕಿಚನೇರನನ್ನು ಹಿಂದುಸ್ತಾನದ ರಾಜಪ್ರತಿನಿಧಿಯ—ವ್ಹಾಯಿಸರಾಯನ—ಪದವಿಗೇರಿಸಬೇಕೆಂದು ಕರೆಯಿಸಿದಾಗ ಆತನು ಸರಿಯಾದ ವ್ಯಕ್ತಿತ್ವವನ್ನು ತೋರ್ಪಡಿಸದೆ ಇದ್ದುದರಿಂದ ಆತನನ್ನು ಆ ಪದವಿಗೆ ನಿಯಮಿಸಲಿಲ್ಲವೆಂತೆ. ಇದರಿಂದ ವ್ಯಕ್ತಿತ್ವದ ಕೊರತೆಯ ಪರಿಣಾಮವು ಎಂತಾಗಬಹುದು ಎಂಬುದರ ಕಲ್ಪನೆಯು ಬಾರದಿರದು.

ನೆಪೋಲಿಯನ್, ಜ್ಯೂಲಿಯಸ್ ಸೀಜರ್ ಮೊದಲಾದ ವೀರಾಧಿವೀರರು ತಮ್ಮ ವ್ಯಕ್ತಿತ್ವದ ಬಲದಿಂದ ಅಖಿಲ ಜಗತ್ತನ್ನೇ ಪಾದಾಕ್ರಾಂತವನ್ನಾಗಿ ಮಾಡಿಕೊಳ್ಳಲು ಹವಣಿಸಿದರೆಂದು ಹೇಳುವುದುಂಟು.

ಝಾಂಸಿಯ ಮಹಾರಾಣಿಯಾದ ಲಕ್ಷ್ಮೀಬಾಯಿಯು ತನ್ನ ದೃಷ್ಟಿಕ್ಷೇಪ ಮಾತ್ರದಿಂದ ರಣರಂಗದಿಂದ ಕಾಲ್ದೆಗೆದು ಓಡುತ್ತಿರುವ ಅಸಂಖ್ಯ ಸೇನೆಯನ್ನು ಯುದ್ಧೋನ್ಮುಖಿಯನ್ನಾಗಿ ಮಾಡಿಬಿಟ್ಟಳೆಂತೆ. ಸ್ವಾಮಿ ರಾಮಕೃಷ್ಣ ಪರಮಹಂಸ, ಸ್ವಾಮಿ ವಿವೇಕಾನಂದ— ಮೊದಲಾದ ಧಾರ್ಮಿಕ ಮಹಾಪುರುಷರು ಅಸಾಧಾರಣವಾದ ವ್ಯಕ್ತಿತ್ವದ ಉದಾಹರಣೆಗಳಾಗಿದ್ದಾರೆ. ಇಂದಿನ ಅಖಂಡ ಭರತಖಂಡವನ್ನೇ ತನ್ನ ತೋರ್ಜೆರಳಿನ ಚಾಲನೆಯಿಂದ ಚಲಿಸಬಲ್ಲ ಬರಿಗಾಲು ಬರಿಮೈಗಳ ವಾಮನ ಮೂರ್ತಿ ಮಹಾತ್ಮಾಜಿಯವರ ವ್ಯಕ್ತಿತ್ವದ ವಿಷಯವಾಗಿ ಒಂದು ಚಮತ್ಕಾರವಾದ ಘಟನೆಯನ್ನು ಇಲ್ಲಿ ಉಲ್ಲೇಖಿಸಿದರೆ ಅದು ಅಪ್ರಸ್ತುತವಾಗಲಾರದು. ಭರತಖಂಡದ ಅಲ್ಲೋಲಕಲ್ಲೋಲವಾದ ರಾಜಕೀಯ ಪರಿಸ್ಥಿತಿಯಲ್ಲಿ ಶಾಂತತೆಯ ಯೋಜನೆಯ ಚರ್ಚೆಗಾಗಿ ಒಮ್ಮೆ ವ್ಹಾಯಿಸರಾಯರಾದ ಲಾರ್ಡ ವಿಲಿಂಗ್ಡನ್ನರು ಮಹಾತ್ಮಾಜಿಯವರನ್ನು ಕಾಣಲು ಬಯಸಿದರು. ಆ ಜ್ಞಾನವೃದ್ಧ, ವಯೋವೃದ್ಧ ಮಹಾಪುರುಷನ ಅಲೌಕಿಕ ವ್ಯಕ್ತಿತ್ವದ ಗುಟ್ಟನ್ನರಿತ ಆ ರಾಜಕಾರಣಪಟುವು ಆತನ ವ್ಯಕ್ತಿತ್ವಕ್ಕೆ ತಾನೆಲ್ಲಿ ಬಲಿಬಿದ್ದು, ಅವನು ಹೇಳಿದ್ದನ್ನೆಲ್ಲ ಕೇಳುವ ಸ್ಥಿತಿಗೆ ಮುಟ್ಟುವೆನೊ ಎಂಬ ಸಂಶಯದಿಂದ ಮುಂದೆ ಬರಲು ಸಮ್ಮತಿಸಲಿಲ್ಲವೆಂತೆ.

ಅಲೌಕಿಕ ವ್ಯಕ್ತಿತ್ವದ ಬಗೆಗೆ ಇಷ್ಟು ಉದಾಹರಣೆಗಳು ಸಾಕು. ಈ ಉದಾಹರಣೆಗಳಲ್ಲಿ ವ್ಯಕ್ತಿತ್ವವೆಲ್ಲಿದೆ? ಅದು ರೂಪದಲ್ಲಿಲ್ಲ, ಆಕಾರದಲ್ಲಿಲ್ಲ, ಉಡುಗೆ-ತೊಡುಗೆಗಳ ಆಡಂಬರದಲ್ಲಿಲ್ಲ, ಶರೀರ ಸಾಮರ್ಥ್ಯದಲ್ಲಿಲ್ಲ, ಅಧಿಕಾರಬಲದಲ್ಲಿಲ್ಲ, ಸಂಪತ್ತಿನಲ್ಲಿಲ್ಲ, ಮಾತಿನಲ್ಲಿಲ್ಲ, ನೋಟದಲ್ಲಿಲ್ಲ, ನಡತೆಯಲ್ಲಿಲ್ಲ, ಇಲ್ಲಿ ಇಲ್ಲ, ಅಲ್ಲಿ ಇಲ್ಲ. ಹಾಗಾದರೆ ವ್ಯಕ್ತಿತ್ವವೆಲ್ಲಿದೆ? ಇದೊಂದು ಅದ್ಭುತವಾದ ಮಾನಸಿಕ ಶಕ್ತಿ; ದೇವದತ್ತವಾದುದು ; ಜನ್ಮಾಂತರಸಂಚಿತವಾದುದು. ಅವಿಚಲವಾದ ಆತ್ಮವಿಶ್ವಾಸ, ಅಜೇಯವಾದ ಇಚ್ಛಾಶಕ್ತಿ, ಸ್ವಾರ್ಥವನ್ನು ತೃಣಕ್ಕೆ ಬಗೆದು ಪರಹಿತವೇ ಪರಮಧ್ಯೇಯವೆನ್ನುವ ಧೀರೋದಾರ ಗುಣಸಮುಚ್ಚಯ— ಇವುಗಳಿಂದ ಬೆಳೆದು ಬರುವಂಥ ಅಜ್ಞಾತ ಆಂತರಿಕ ಸ್ಫೂರ್ತಿಯಿಂದ ತನ್ನ ಮುಂದಿರುವ ಮಾನವರ ಹೃದಯವನ್ನು ಆಕರ್ಷಿಸಿ, ಅವರ ಮೇಲೆ

ತನ್ನ ಪ್ರಭಾವವನ್ನು ಬೀರಬಲ್ಲ, ಮಹಾನುಭಾವನಾದ ವ್ಯಕ್ತಿಯ ತೇಜೋವೈಶಿಷ್ಟ್ಯವೇ ವ್ಯಕ್ತಿತ್ವವು.

ಪ್ರಾಚೀನ ಗ್ರೀಕ ಜನಾಂಗದವರ ನಾಟಕಗಳಲ್ಲಿ ಮೂರು ಪಾತ್ರಗಳಿಗಿಂತ ಹೆಚ್ಚಾದ ಪಾತ್ರಗಳು ರಂಗಸ್ಥಲದ ಮೇಲೆ ಏಕಕಾಲಕ್ಕೆ ಬರಕೂಡದೆಂದು ನಿಯಮವಿದ್ದಿತು; ಆದರೆ ಒಬ್ಬನೇ ಬೇರೆ ಬೇರೆ ಪಾತ್ರಗಳನ್ನು ವಹಿಸಿ ಅಭಿನಯಿಸಲು ಯಾವ ನಿರ್ಬಂಧವು ಇರಲಿಲ್ಲ; ತಾನು ವಹಿಸಿರುವ ಪಾತ್ರವಾವುದೆಂಬುದನ್ನೂ ಆ ಪಾತ್ರವನ್ನು ಅಭಿನಯಿಸುವಾಗ ತಾನು ಆಡಿದ ಮಾತುಗಳು ಸರ್ವರಿಗೂ ಸರಿಯಾಗಿ ಕೇಳಬೇಕೆಂಬುದನ್ನೂ ಸಾಧಿಸಲು ಇವನು ಮೊಗವಾಡವನ್ನು (Persona) ಹಾಕಿಕೊಂಡು ಪ್ರೇಕ್ಷಕರೆದುರಿಗೆ ಬರುತ್ತಿದ್ದನು. ಈ ಮೊಗವಾಡದ ಮಾಟದಿಂದ ನಟನ ಪಾತ್ರದ ಲಕ್ಷಣವನ್ನು (Personality— ಪುರುಷಲಕ್ಷಣ— ಪುರುಷವಿಶೇಷ) ಪ್ರೇಕ್ಷಕರು ಸರಿಯಾಗಿ ತಿಳಿದುಕೊಳ್ಳಲು ಅನುಕೂಲತೆಯಾಗುತಿದ್ದಿತು.

ಪ್ರಾಚೀನ ರೋಮನ್ನರಲ್ಲಿ (Person) ಮನುಷ್ಯತ್ವವೆಂದರೆ ಕೆಲವು ಕಾಯಿದೆಗಳಿಂದ ದೊರೆತ ಹಕ್ಕುಗಳು ಎಂಬ ಅರ್ಥವು ಬರತೊಡಗಿತು; ಮಾನವನು ತನ್ನ ವಿಕಾಸವನ್ನು ಮಾಡಿಕೊಳ್ಳಬೇಕಾದರೆ, ಅನ್ಯರೊಡನೆ ತಾನು ಹೇಗೆ ವರ್ತಿಸಬೇಕೆಂಬುದೂ ತನಗೆ ಲಭಿಸಿರುವ ಅಧಿಕಾರಕ್ಕೆ ಸರಿಯಾಗಿ ನಡೆಯುವುದು ಆತನ ಹೊಣೆಯೆಂಬುದೂ ರೋಮನ್ನರ ಕಾಲದ 'ಪುರುಷ ವೈಶಿಷ್ಟ್ಯ' (Personality) ವೆಂಬ ಶಬ್ದದ ಅರ್ಥದಲ್ಲಿ ಸೇರಿದ್ದುವು.

ಪ್ರಥಮಪುರುಷ— ಮಾತನಾಡುವವನು, ದ್ವಿತೀಯ ಪುರುಷ— ಮಾತನಾಡಿಸಿಕೊಳ್ಳುವವನು, ತೃತೀಯ ಪುರುಷ—ಇವರಿಬ್ಬರ ಮಾತಿಗೆ ವಿಷಯವಾಗಿರುವವನು— ಈ ರೀತಿಯಾಗಿ ಒಬ್ಬನಿಗೆ ಇನ್ನೊಬ್ಬನ ಸಹಕಾರ ಸಹವಾಸಗಳು ಅವಶ್ಯವೆಂದೂ ಸಮಾಜದ ಸ್ವರೂಪವೇ ಈ ರೀತಿಯಾಗಿ ಇರಬೇಕೆಂದೂ ಸಮಾಜದ ಮೇಲೆ ಯಾವನೊಬ್ಬ ವ್ಯಕ್ತಿಯ ವರ್ಚಸ್ಸು ನಡೆಯಬೇಕಾದರೆ ಕೆಲವು ವಿಶಿಷ್ಟ ಗುಣಗಳು ಇರಬೇಕೆಂದೂ ಒತ್ತಿಹೇಳಿದಂತಾಯಿತು.

ತತ್ತ್ವಜ್ಞಾನದ ದೃಷ್ಟಿಯಿಂದ ಕಾಂಟ್ ಎಂಬವನು ಮಾನವನ ವೈಯಕ್ತಿಕ ನೈತಿಕ ಯೋಗ್ಯತೆಗೆ ಹೆಚ್ಚಿನ ಮರ್ಯಾದೆಯನ್ನು ಸಲ್ಲಿಸಿ ಇನ್ನುಳಿದ ಗುಣಗಳು ಕಡಮೆಯ ತರಗತಿಯವೆಂದು ತಿಳಿಯಬೇಕೆಂದು ಸಾರಿದನು. ಕರ್ತವ್ಯಗಳನ್ನು ಮಾಡುವುದರಲ್ಲಿ ವೈಯಕ್ತಿಕ ಲಾಭವೇ ಮಾನವನ ಉದ್ದೇಶವಾಗಿರಕೂಡದು; ಅನ್ಯರನ್ನು ಸ್ವಾರ್ಥಸಾಧನೆಗಾಗಿ ಉಪಯೋಗಿಸಿಕೊಳ್ಳದೆ, ಅವರವರ ವೈಯಕ್ತಿಕ ಲಾಭವನ್ನು ಮನ್ನಿಸಿ ಮಾನವನು ನಡೆಯಬೇಕು.

ಈ ಬಗೆಯ ವ್ಯಕ್ತಿತ್ವವನ್ನು ಪಡೆಯುವುದು ಸಾಧ್ಯವಾದ ಧ್ಯೇಯವೆಂದು ತತ್ತ್ವಜ್ಞಾನಿಗಳು ನಿರೂಪಿಸಿದರು. ಮಾನವತ್ವದ ಪರಿಪೂರ್ಣತೆಯೇ (Superman)—ಅಸಾಧಾರಣ ಮಾನವತೆಯೇ—ವ್ಯಕ್ತಿತ್ವದ ಮುಖ್ಯ ಲಕ್ಷಣವೆಂದೂ ಈ ಧ್ಯೇಯವನ್ನು ಇದುವರೆಗೂ ಯಾವ ಮಾನವನೂ ಸಾಧಿಸಿಲ್ಲವೆಂದೂ ಅದರ ಪ್ರಾಪ್ತಿಗಾಗಿ ಸರ್ವರೂ ಪ್ರಯತ್ನಿಸಬೇಕೆಂದೂ ತತ್ತ್ವಜ್ಞಾನಿಗಳ ಮತವಾಗಿದೆ.

'ನಾ ವಿಷ್ಣುಃ ಪೃಥಿವೀಪತಿಃ' ರಾಜನಾದ ನರನು ನಾರಾಯಣನೇ ಸರಿ— ಎಂದು ಜನಸಾಮಾನ್ಯರು ಈಗ ಒಪ್ಪುವುದಿಲ್ಲ; ಪ್ರಜಾಸತ್ತಾತ್ಮಕ ರಾಜ್ಯಪದ್ಧತಿಯಲ್ಲಿ ಜನಸಾಮಾನ್ಯರ ಅಧಿಕಾರಗಳನ್ನು ಮನ್ನಿಸಬೇಕೆಂದು ಸರ್ವರ ಅಭಿಪ್ರಾಯವಾಗಿದೆ. ಆದರೆ, ನಿಜವಾದ ಪ್ರಜಾಸತ್ತಾತ್ಮಕ ರಾಜ್ಯಪದ್ಧತಿಯಲ್ಲಿ ಪ್ರತಿವ್ಯಕ್ತಿಗೂ ಶಕ್ಯವಿದ್ದಷ್ಟು ವಿಕಾಸವನ್ನು ಪಡೆಯಲು ಅನುಕೂಲತೆಯಿರಲೇಬೇಕು; ಪ್ರತಿವ್ಯಕ್ತಿಗೂ ತನ್ನ ಯೋಗ್ಯತೆಗೆ ಅನುಸಾರವಾಗಿ ವಿಕಾಸವನ್ನು ಪಡೆಯಲು ಬೇಕಾಗಿರುವ ಶಿಕ್ಷಣಸೌಲಭ್ಯಗಳನ್ನು ಕಲ್ಪಿಸಲೇಬೇಕು; ಸಲ್ಲದ ಸೌಕರ್ಯಗಳಾಗಲಿ ನಿರ್ಬಂಧಗಳಾಗಲಿ, ಯಾವ ಜಾತಿ–ಮತ–ಪಂಥಗಳವರಿಗೂ ಇರಕೂಡದು. ಇಂಥ ಪರಿಸ್ಥಿತಿಯಲ್ಲಿ ಪ್ರತಿ ಮಾನವನ ವ್ಯಕ್ತಿತ್ವದ—ಪೌರುಷವಿಶೇಷದ ಬೆಳವಣಿಗೆಗೆ ಅವಕಾಶವು ಇರುವುದು.

ಕನ್ನಡ ನಾಣ್ಣುಡಿಯಲ್ಲಿ 'ಆನೆಯ ಭಾರ ಆನೆಗೆ, ಆಡಿನ ಭಾರ ಆಡಿಗೆ' ಎಂದು ಹೇಳುವರಲ್ಲವೆ? ಹಾಗೆಯೆ ಮಹಾತ್ಮಾಜಿಯ ವ್ಯಕ್ತಿತ್ವ

ಮಹಾತ್ಮಾಜಿಗೆ, ಸಣ್ಣದೊಂದು ಹಳ್ಳಿಯ ಶಾಲೆಯ ಶಿಕ್ಷಕನ ವ್ಯಕ್ತಿತ್ವ ಆ ಶಿಕ್ಷಕನಿಗೆ. ಮಹಾತ್ಮಾಜಿಯು ಅಖಿಲ ಮಾನವಕುಲಕ್ಕೇ ಹೊಸ ದಾರಿಯನ್ನು ಹುಡುಕಿ ಹೇಳಬಲ್ಲವನಾದರೆ ವ್ಯಕ್ತಿತ್ವವುಳ್ಳ ಶಿಕ್ಷಕನು ತನ್ನ ವಿದ್ಯಾರ್ಥಿವೃಂದಕ್ಕಾದರೂ ಮಾರ್ಗದರ್ಶಿಯಾಗಬಹುದು.

ವ್ಯಕ್ತಿತ್ವವು ಪೂರ್ವಸಂಚಿತವಾದುದು. 'ಸ್ವಾಮಿ ವಿವೇಕಾನಂದ ರಂಥವರು ದೇವಾಂಶಸಂಭೂತರು. ಅವರಲ್ಲಿದ್ದ ದೇವಾಂಶವು ಅವರ ವ್ಯಕ್ತಿತ್ವ' ಎಂದು ಹೇಳುವವರ ಆಸ್ತಿಕವಾದವನ್ನು ಕ್ಷಣಕಾಲ ನಮ್ಮ ಮನಸ್ಸಿನಿಂದ ದೂರ ಸರಿಸಿಡೋಣ; ಮತ್ತು ಕೇವಲ ಭೌತಿಕ ಶಾಸ್ತ್ರಗಳ ಮೇಲೆಯೆ ಕೈಯೂರಿ ನಡೆಯುವ ಪಾಶ್ಚಾತ್ಯ ಪಂಡಿತರು ಹೇಳುವ ವ್ಯಕ್ತಿತ್ವದ ಬೆಳಣಿಗೆಯ ವಿಚಾರಗಳನ್ನು ಸ್ವಲ್ಪ ಪರ್ಯಾಲೋಚಿಸೋಣ. ವರಕವಿಗಳಂತೆಯೆ ಜನ್ಮತಃ ಅಸಾಧಾರಣ ವ್ಯಕ್ತಿತ್ವವನ್ನು ಪಡೆದು ಬಂದಿರುವವರ ವಿಚಾರವಾಗಿ ನಾವೇನೂ ಚರ್ಚಿಸುವ ಆವಶ್ಯಕತೆಯಿಲ್ಲ.

ತಪೋನಿಷ್ಠರಾದ ನಮ್ಮ ಪೂರ್ವದ ಋಷಿಗಳು ದೃಷ್ಟಿಕ್ಷೇಪಮಾತ್ರ ದಿಂದ ತಮ್ಮ ಶಿಷ್ಯರಲ್ಲಿ ತಾರಕಜ್ಞಾನವನ್ನೂ ಆಧ್ಯಾತ್ಮಿಕ ವಿಕಾಸವನ್ನೂ ಉಂಟುಮಾಡುತ್ತಿದ್ದರೆಂದು ಹೇಳುವುದನ್ನು ಕೆಲವರು ಕೇಳಿರಬಹುದು. ಸುಡುವೆನೆಂದರೆ ಸುಟ್ಟುಬಿಡುವಂತಹ ನಿಗ್ರಹಸಾಮರ್ಥ್ಯವನ್ನೂ ಕೊಡುವೆ ನೆಂದರೆ ಕೈವಲ್ಯವನ್ನೇ ಕೈವಶಮಾಡಿಕೊಡಬಲ್ಲ ಅನುಗ್ರಹಶಕ್ತಿಯನ್ನೂ ಪಡೆದ ಮಹಾಯೋಗನಿಷ್ಠರ ಹೆಸರುಗಳನ್ನೂ ಕೇಳಿದ್ದೇವೆ. ಹಿಮಾಲಯ ದಲ್ಲಿ ಕುಳಿತು ಕನ್ಯಾಕುಮಾರಿಯಲ್ಲಿ ನಡೆಯುವುದನ್ನು ಕಾಣಬಲ್ಲ ವ್ಯಕ್ತಿ ಗಳ ಕಥೆಗಳನ್ನೂ ನಾವು ಓದಿದ್ದೇವೆ. ಇವೆಲ್ಲ ಅಸಾಧಾರಣ ವ್ಯಕ್ತಿತ್ವದ ದೃಷ್ಟಾಂತಗಳು. ಇಂಥ ಅಲೌಕಿಕವಾದ ವ್ಯಕ್ತಿತ್ವದ ವಿಕಾಸಕ್ಕೆ ನಿಷ್ಠೆ, ಪರಿಶ್ರಮಗಳು ಬೇಕೆಂಬುದು ಪಾಶ್ಚಾತ್ಯರ ಅಭಿಪ್ರಾಯವಾಗಿದ್ದರೆ; ನಮ್ಮವರು ಗುರುಪ್ರಸಾದ, ತಪಸ್ಸು, ಯೋಗಾಭ್ಯಾಸ, ದೇವತೋಪಾಸನೆ ಮೊದಲಾದುವು ಬೇಕೆಂದು ಹೇಳಿರುವರು. ಕೇವಲ ಭೌತಿಕ ಶಾಸ್ತ್ರಗಳ ನಿರ್ಣಯಗಳ ಮೇಲೆಯೂ ವಿಶ್ವಾಸವುಳ್ಳ ಪಾಶ್ಚಾತ್ಯ ವಿದ್ವಾಂಸರು ಇಂತಹ ವ್ಯಕಿತ್ವದ ಇನ್ನೊಂದು ರೂಪವನ್ನು ಪ್ರತಿಪಾದಿಸುವರು. ಅವರು ಈ

ಶಾಸ್ತ್ರಕ್ಕೆ 'ಮನೋವಶೀಕರಣ ಶಾಸ್ತ್ರ' ( Hypnotism ) ಎನ್ನುವರು. ಪರರ ಮನಸ್ಸನ್ನು ವಶೀಕರಿಸಿಕೊಳ್ಳಬಲ್ಲ ವ್ಯಕ್ತಿಯು ತಾನು ಆಕರ್ಷಿಸಿಕೊಂಡ ವ್ಯಕ್ತಿಯ ಮನಸ್ಸಿನಲ್ಲಿ ಸ್ವಾಭಾವಿಕವಾಗಿ ಇರುತ್ತಿರುವ ಭಯ, ಕೋಮಲತೆ, ದೈನ್ಯ ಮುಂತಾದ ದುರ್ಬಲವೃತ್ತಿಗಳನ್ನು ತೆಗೆದುಹಾಕಿ, ಅವುಗಳ ಸ್ಥಳದಲ್ಲಿ ಧೈರ್ಯ, ಧಾರ್ಷ್ಟ್ಯ, ಗಾಂಭೀರ್ಯ ಮುಂತಾದ ಉತ್ತಮ ಗುಣಗಳನ್ನು ಉಂಟುಮಾಡಲು ಶಕ್ಯವಿದೆಯೆಂದು ಅವರು ಹೇಳುವರು. ವಶೀಕರಣವನ್ನು ಮಾಡಬಲ್ಲ ವ್ಯಕ್ತಿಯು ತನ್ನ ವ್ಯಕ್ತಿತ್ವವನ್ನು ಪರರಲ್ಲಿ ಬರಮಾಡಿಸುವುದು ಶಕ್ಯವಿದೆಯೆಂದು ಹೇಳಿದುದಾಯಿತಷ್ಟೆ! ಉನ್ಮಾದ, ವಾಯುವಿಕಾರ ಮೊದಲಾದ ಮನೋವಿಕಾರಗಳೇ ಮೂಲವಾಗಿರುವ ಬೇನೆಗಳನ್ನು ಸಹ ಈ ತರದ ಮನೋವಶೀಕರಣವಿದ್ಯೆಯಿಂದ ದೂರಮಾಡುವ ವ್ಯಕ್ತಿಗಳನ್ನೂ ನಾವು ಕಾಣಬಲ್ಲೆವು. ಇವೆಲ್ಲವುಗಳ ದೀರ್ಘವಾದ ವಿವೇಚನೆಗೆ ಇಲ್ಲಿ ಅವಕಾಶವಿಲ್ಲ. ಆದರೂ ನಾವು ನಮ್ಮ ವ್ಯಕ್ತಿತ್ವವನ್ನು ಹೇಗೆ ವಿಕಾಸಗೊಳಿಸಿಕೊಳ್ಳಬಹುದು ಮತ್ತು ನಮ್ಮ ವ್ಯಕ್ತಿತ್ವದ ಸಾಹಾಯ್ಯದಿಂದ ಪರರಲ್ಲಿ ಅದನ್ನು ಯಾವ ರೀತಿಯಾಗಿ ಬರಮಾಡಿಸಬಹುದು ಎಂಬುದನ್ನು ವಿವೇಚಿಸೋಣ.

ಪ್ರಾರಂಭಕ್ಕೆ ಮೇಲೆ ವಿವರಿಸಿದಂತಹ ಅಲೌಕಿಕ ವ್ಯಕ್ತಿತ್ವದ ಮಾತನ್ನು ಬಿಟ್ಟು ತುಸ ಕೆಳಗೆ ಬಂದು, ಶಿಕ್ಷಣಸಂಸ್ಥೆಗಳ, ಶಿಕ್ಷಕರ, ವಿದ್ಯಾರ್ಥಿಗಳ ವ್ಯಕ್ತಿತ್ವದ ವಿಚಾರಕ್ಷೇತ್ರಕ್ಕೆ ಇಳಿದರೆ, ಶಿಕ್ಷಕನ ವ್ಯಕ್ತಿತ್ವವು ಮೊದಲು ನಮ್ಮ ಮುಂದೆ ಬರುವುದು. ಮೇಲೆ ವಿವರಿಸಿದ ವ್ಯಕ್ತಿತ್ವದ ಪ್ರತಿಪಾದನೆಯನ್ನು ಗುರುಶಿಷ್ಯರ ಮನೋವೃತ್ತಿಗಳಿಗೆ ಪರಿವರ್ತಿಸಿದರೆ ಗುರುವು ಮನೋವಶೀಕರಣ ಶಾಸ್ತ್ರಜ್ಞನ ಸ್ಥಾನಕ್ಕೆ, ಶಿಷ್ಯನು ಅವನಿಂದ ಆಕರ್ಷಿತಚಿತ್ತನಾದ ವ್ಯಕ್ತಿಯ ಸ್ಥಾನಕ್ಕೆ ಹೋಗುವನು; ಗುರುವು ತನ್ನ ಶಿಷ್ಯನ ವ್ಯಕ್ತಿತ್ವದಲ್ಲಿರುವ ಅಪಾಯಕರವಾದ ಅಂಶಗಳನ್ನು ಕುಗ್ಗಿಸಿ ಹಿತಕರವಾದ ಅಂಶಗಳನ್ನು ವಿಕಸಿತಗೊಳಿಸಿ ತನ್ನ ವ್ಯಕ್ತಿತ್ವವನ್ನು ಅವನಲ್ಲಿ ಬರಮಾಡಿಸುವನು ಎಂದಂತಾಗುವುದು. ಒಟ್ಟಿನ ಮೇಲೆ, ಶಿಕ್ಷಕನಿಗೆ ತನ್ನ ವ್ಯಕ್ತಿತ್ವದ ಜ್ಞಾನವೂ ಅದರ ಉಪಯೋಗವೂ ಆವಶ್ಯಕವೆಂಬ ಮಾತನ್ನು ನಾವು ಒಪ್ಪಿಕೊಳ್ಳಬೇಕು.

ಹಾಗೆ ಒಪ್ಪಿಕೊಂಡಬಳಿಕ ಶಿಕ್ಷಕನು ಅದನ್ನು ಕೈವಶಮಾಡಿಕೊಳ್ಳಲು ಯಾವ ಯಾವ ಪ್ರಯತ್ನಗಳನ್ನು ಮಾಡಬೇಕಾಗುವುದೆಂಬುದನ್ನು ವಿವೇಚಿಸುವುದು ಅವಶ್ಯವಾಗುವುದು. ವ್ಯಕ್ತಿತ್ವವಿಲ್ಲದ ಶಿಕ್ಷಕನು ಜ್ಞಾನನಿಧಿಯಾದ್ದರೂ ವಿದ್ಯಾರ್ಥಿಗಳ ಮನಸ್ಸಿನ ಮೇಲೆ ತಕ್ಕ ಪರಿಣಾಮ ವನ್ನುಂಟು ಮಾಡಲಾರನು ; ವರ್ಗದಲ್ಲಿ ಶಿಸ್ತನ್ನು ಕಾದುಕೊಳ್ಳಲಾರನು ; ಅವರ ಮನಸ್ಸಿನ ಮೇಲೆ ತನ್ನ ವರ್ಚಸ್ಸನ್ನು ಬೀರಲಾರನು.

ಕೆಳಗೆ ಕಾಣಿಸಿದ ಸಲಹೆಗಳನ್ನು ಶಿಕ್ಷಕನು ದೊರಕಿಸಿಕೊಂಡು ಅವುಗಳಂತೆ ಆಚರಿಸಿದರೆ, ಅವನಲ್ಲಿ ವ್ಯಕ್ತಿತ್ವವೆಂಬ ದಿವ್ಯ ಶಕ್ತಿಯು ಉದ್ಭವಿಸುವುದು. ಆ ವ್ಯಕ್ತಿತ್ವದ ಬಲದಿಂದ ಅವನ ಪ್ರತಿಯೊಂದು ಶಬ್ದಕ್ಕೆ ವಾಣಿಯ ವೈಖರಿಯುಂಟಾಗುವುದು. ಅದು ಅವನ ಆಜ್ಞಾ ಸೂಚನೆಗಳಿಗೆ ವಜ್ರದ ಸಾಮರ್ಥ್ಯವನ್ನುಂಟುಮಾಡಿ ಅವನನ್ನು ಸ್ಫೂರ್ತಿ ಪ್ರೇರಿತ ಶಿಕ್ಷಕನನ್ನಾಗಿ ಮಾರ್ಪಡಿಸುವುದು. ಸ್ವಾಭಾವಿಕ ಸ್ವರ ಸೌಕರ್ಯವಿಲ್ಲದ ಸಂಗೀತಗಾರನು ಸಹ ಅಂತಃಕರಣಪೂರ್ವಕವಾಗಿ ಪ್ರಯತ್ನಿಸಿದರೆ, ದೈವಿಕ ಸ್ವರಸಂಪತ್ತುಳ್ಳ ಶ್ರೇಷ್ಠಗಾಯಕನ ತರಗತಿಗೆ ಹೋಗದಿದ್ದರೂ ಮಾನ್ಯನೂ ಲೋಕಪ್ರಿಯನೂ ಆದ ಗಾಯಕನಾಗ ಬಲ್ಲಂತೆ ಸಾಮಾನ್ಯ ಶಿಕ್ಷಕನು ಸಹ ದೇವದತ್ತವಾದ ವ್ಯಕ್ತಿತ್ವದ ಅಭಾವದಿಂದ ಎದೆಗುಂದದೆ ಕೆಳಗೆ ತೋರಿಸಿದ ಸೂಚನೆಗಳನ್ನು ಪ್ರಯತ್ನ ಪೂರ್ವಕವಾಗಿಯೂ ಏಕನಿಷ್ಠೆಯಿಂದಲೂ ಅನುಸರಿಸಿ ನಡೆದರೆ, ಒಳ್ಳೆಯ ವ್ಯಕ್ತಿತ್ವವುಳ್ಳ ಶಿಕ್ಷಕನಾಗಬಹುದೆಂದು ಬಲ್ಲವರು ಹೇಳುವರು.

೧. **ಪ್ರಥಮ ದರ್ಶನ.**— (೧) ಕೆಲಕೆಲವು ಅವಧಿಗೆ ಆರೋಗ್ಯ ಪರೀಕ್ಷೆ ಮಾಡಿಸಿಕೊಳ್ಳಿರಿ. ಆರೋಗ್ಯ-ನಿಯಮಗಳನ್ನು ಪಾಲಿಸುವಾಗ ವ್ಯವಹಾರಜ್ಞಾನವನ್ನು ಉಪಯೋಗಿಸಿರಿ. (೨) ನಿಮ್ಮ ವಶದಲ್ಲಿ ಬಾರದಿದ್ದ ( ಅನಪೇಕ್ಷಿತ ) ಚಟಗಳನ್ನು ಶಕ್ಯವಿದ್ದಷ್ಟು ಕಡಿಮೆ ಮಾಡಿರಿ. (೩) ನಿಮ್ಮ ಬಾಹ್ಯ ಸ್ವರೂಪವನ್ನೂ ಅಚ್ಚುಕಟ್ಟುಗೊಳಿಸಿರಿ. (೪) ಕಲಿಸು ವಾಗ 'ನಾನು' ಎಂಬ ಶಬ್ದವನ್ನು ಬಹಳ ಕಡಿಮೆಯಾಗಿ ಉಪಯೋಗಿಸಿರಿ. (೫) ಮುಖದ ಮೇಲೆ ಯಾವಾಗಲೂ ನಸುನಗೆಯು ಮೂಡಿರಲಿ.

ಏಕೆಂದರೆ ನಗೆಯು ಯಾವಾಗಲೂ ಉಲ್ಲಾಸವೃತ್ತಿಯನ್ನು ತೋರಿಸು ವುದು. ಹೀಗಿದ್ದರೆ ಶಿಕ್ಷಕನು ವರ್ಗಕ್ಕೆ ಬಂದ ಕೂಡಲೆ—ಅವನ ಪ್ರಥಮ ದರ್ಶನದಿಂದಲೆ ವರ್ಗದ ವಿದ್ಯಾರ್ಥಿಗಳ ಮನಸ್ಸಿನಲ್ಲಿ ಅವನ ವ್ಯಕ್ತಿತ್ವದ ಬಗ್ಗೆ ಸದ್ಭಾವನೆಯು ಅಂಕುರಿಸುವುದು. (೬) ಹೊಸತಾದ ಪಾಠವನ್ನು ಹೇಳಿಕೊಡುವ ಮೊದಲು ಸ್ವಲ್ಪಕಾಲ ವಿಶ್ರಮಿಸಿರಿ. (೭) ಪಾಠದ ಪ್ರಾರಂಭದಲ್ಲಿ ಹುಡುಗರ ಅಭಿರುಚಿ (ಬೇಕು—ಬೇಡ) ಗಳನ್ನು ಚೆನ್ನಾಗಿ ಅಭ್ಯಸಿಸಿರಿ. (೮) ನೀವು ಕುಳಿತುಕೊಳ್ಳುವ ಮತ್ತು ನಿಲ್ಲುವ ಮಾಟವು ಸರಿಯಾಗಿಯೂ ಚಂದವಾಗಿಯೂ ಇರುವಂತೆ ನೋಡಿಕೊಳ್ಳಿರಿ.

೨. **ಸರಲ ವರ್ತನ.**—(೧) ನಿಮ್ಮ ಎದುರಿನಲ್ಲಿ ನಿಮಗೆ ಪ್ರಿಯ ವಾದುದರ ವಿಷಯವಾಗಿ ಯಾರಾದರೂ ಏನನ್ನಾದರೂ ಎತ್ತಿ ಆಡಿದರೆ ಎಂದೂ ಸಿಟ್ಟಿಗೇಳಬೇಡಿರಿ. (೨) ನಿಮ್ಮ ಅಭಿಪ್ರಾಯವನ್ನು ಸ್ಪಷ್ಟವಾ ಗಿಯೂ ಖಂಡಿತವಾಗಿಯೂ ಹೊರಗೆಡುಹಬೇಡಿರಿ. (೩) ನಿಮ್ಮ ವಿದ್ಯಾರ್ಥಿ ಗಳ, ಸಹಶಿಕ್ಷಕರ, ಮತ್ತು ಮೇಲ್ವಿಚಾರಕರ ಸಹಾನುಭೂತಿಯನ್ನು ಸಂಪಾದಿಸಿರಿ.

೩. **ಮಾತಾಡುವ ಧ್ವನಿ.**— (೧) ಶಿಕ್ಷಣವು ಯಶಸ್ವಿಯಾಗ ಬೇಕಾದರೆ, ಶಿಕ್ಷಕನ ಧ್ವನಿಯಲ್ಲಿ ಸ್ಪಷ್ಟತೆಬೇಕು. ಬಳಿಯಲ್ಲಿದ್ದವರಿಗೆ ಕೂಗಿದಂತೆಯೂ ದೂರದಲ್ಲಿದ್ದವರಿಗೆ ಕೇಳಿಸದಂತೆಯೂ ಆತನ ಧ್ವನಿಯು ಇರಬಾರದು. ವರ್ಗದ ಪ್ರಮಾಣಕ್ಕೆ ತಕ್ಕಂತೆ ಎಂದರೆ ವರ್ಗವು ದೊಡ್ಡದಾಗಿದ್ದರೆ ದನಿಯು ದೊಡ್ಡದಾಗಿಯೂ ಚಿಕ್ಕದಾಗಿದ್ದರೆ ಮೆಲ್ಲಗಾಗಿಯೂ ಎಲ್ಲ ವಿದ್ಯಾರ್ಥಿಗಳಿಗೆ ಇಂಪಾಗಿ ಸ್ಪಷ್ಟವಾಗಿ ಕೇಳಿಸುವಂತೆಯೂ ಇರಬೇಕು. ಒಂದು ವಿಶಿಷ್ಟವಾದ ಮಾಧುರ್ಯವು ಧ್ವನಿಯಲ್ಲಿರಬೇಕು ; ಇಲ್ಲದಿದ್ದರೆ ಮಾಧುರ್ಯವನ್ನು ತರಲು ಯತ್ನಿಸಬೇಕು. ಮಾತನಾಡುವಾಗ ಫುಪ್ಫುಸದಲ್ಲಿ ಹವೆಯು ತುಂಬಿ ಕೊಂಡಿರಬೇಕು; ಮೂಗಿನಿಂದಲೇ ಉಸಿರಾಡಿಸುತ್ತಿರಬೇಕು; ಹೊರಗೆ ಹೋಗುವ ಉಸಿರಿನೊಡನೆ ಮಾತನಾಡಬೇಕು. ಒಳಗೆ ತೆಗೆದುಕೊಳ್ಳುವ ಉಸಿರಿನ ಕೂಡ ಮಾತನಾಡಿದರೆ ಮಾತು ನುಂಗಿದಂತೆ ಆಗಿ ಅರೆನುಡಿ.

ನುಡಿದಂತಾಗುವುದು. (೨) ನಿಮ್ಮ ಮಾತನಾಡುವ ಧ್ವನಿಯ ಲೋಪದೋಷಗಳು ಗೊತ್ತಾಗಬೇಕಾದರೆ ನಿಮ್ಮ ಗೆಳೆಯರನ್ನು ವರ್ಗದಲ್ಲಿ ಹಿಂದೆ ಕುಳ್ಳಿರಿಸಿ ನಿಮ್ಮ ಧ್ವನಿಯ ಏರಿಳಿತಗಳನ್ನೂ ಲೋಪದೋಷ ಗಳನ್ನೂ ಅವರಿಂದ ಕೇಳಿಕೊಂಡು ತಿಳಿದುಕೊಳ್ಳಿರಿ. (೩) ಭಾವ-ರಸಗಳಿಗೆ ತಕ್ಕಂತೆ ಧ್ವನಿಯಲ್ಲಿ ಬದಲಾವಣೆಗಳನ್ನು ಮಾಡಿರಿ.

೪. **ಆಶಾವಾದಿತ್ವ.—** ಉಲ್ಲಾಸವೃತ್ತಿ, ವಿನೋದವೃತ್ತಿ, ದೈನ್ಯ ರಹಿತತೆ ಇವು ಆಶಾವಾದಿತ್ವದ ಲಕ್ಷಣಗಳು. ವ್ಯವಸಾಯಕ್ಕೆ ತಕ್ಕ ಮನೋವೃತ್ತಿಯು ಇರಬೇಕಲ್ಲದೆ ಅದಕ್ಕೆ ಕುಂದನ್ನು ತರುವಂತಹ ವರ್ತನೆಯೂ ಪ್ರವೃತ್ತಿಯೂ ಮನೋವೃತ್ತಿಯೂ ಇರಕೂಡದು. (೧) ಶಿಕ್ಷಣವು ಉಪಯುಕ್ತ ನಾಗರಿಕನನ್ನು ಸಿದ್ಧಗೊಳಿಸುವ ಆಹ್ವಾನವೆಂದೋ ಸಾಹಸವೆಂದೋ ತಿಳಿದುಕೊಂಡು ಶಿಕ್ಷಣಕಾರ್ಯ ವನ್ನು ಕೈಕೊಳ್ಳಿರಿ. (೨) ಪ್ರತಿದಿನವೂ ಪ್ರಯತ್ನವನ್ನು ಸಫಲಗೊಳಿಸುವ ಸುಸಂಧಿಯೆಂಬುದನ್ನು ಅರಿತುಕೊಳ್ಳಿರಿ ಮತ್ತು ನಿಮ್ಮ ತಪ್ಪು-ತಡೆಗಳಿಂದ ನಿಮಗೆ ತಿಳಿದುಬರುವ ಜಾಣ್ಮೆಯನ್ನು ಪಡೆಯಿರಿ. ಸರಲಹೃದಯಿಗಳಾಗಿ ನೂತನ ಶಿಕ್ಷಣ ಪದ್ಧತಿ-ಶೋಧಗಳ ಉಪಯೋಗವನ್ನು ಚೆನ್ನಾಗಿ ಮಾಡಿಕೊಳ್ಳಿರಿ. (೩) ದೈನ್ಯಭಾವವನ್ನು ಬಿಸುಟಿಬಿಡಿರಿ. ನಿಜವಾದ ನಾಯಕನು ಹೊಸದಾರಿಯನ್ನು ಹುಡುಕುವನು; ಅದರಿಂದ ತನ್ನನು ತನ್ನ ಕಾರ್ಯಕ್ಕೆ ಸಿದ್ಧಗೊಳಿಸುವನು. ಎಂದರೆ ಅವನು ತನ್ನ ಕಾರ್ಯದ ಸಲುವಾಗಿ ಎರಡನೆಯವರ ಮೇಲೆ ಅವಲಂಬಿಸಿರುವುದಿಲ್ಲ. ಆದುದರಿಂದ ನೀವು ಎರಡನೆಯವರನ್ನು ಅವಲಂಬಿಸಬೇಡಿರಿ. ಹೀಗೆ ನಡೆದರೆ, ಯಾವದೊಂದು ಕಾರಣದಿಂದ ನಿಮ್ಮ ವಿಷಯದಲ್ಲಿ ನಿರಾಶೆಗೊಂಡವರು ಆಶಾವಾದಿಗಳಾಗಿ ನಿಮಗೆ ನೆರವಾಗುವರು. ನಿರಾಶರಾಗದೆ ನೀವೂ ನಿಮ್ಮ ಕಾರ್ಯವನ್ನು ಧೈರ್ಯದಿಂದ ಮುಂದೆಸಾಗಿಸಿರಿ. ಆಸೆ ವಿಶ್ವಾಸಗಳು ಫಲದಾಯಕಗಳು.

೫. **ಕೆಲಸಕ್ಕೆ ಬೇಕಾಗುವುದಕ್ಕಿಂತ ಹೆಚ್ಚಿನ ಉತ್ಸಾಹ.—** (೧) ನೀವು ವ್ಯಕ್ತಿತ್ವವುಳ್ಳ ಶಿಕ್ಷಕರಾಗಲು ಯಾವುದನ್ನು ಸಾಧಿಸಬೇಕೊ

ಅದೆಲ್ಲವನ್ನೂ ಸಾಧಿಸಿರಿ. ಎಂದರೆ, ಉತ್ತಮ ಶಿಕ್ಷಕನಾಗಲು ಅವಶ್ಯವಿದ್ದ ಸರ್ವವಿಷಯಗಳನ್ನೂ ಅರಿತುಕೊಳ್ಳಿರಿ. ನಿಮ್ಮ ಉತ್ಸಾಹವು ತುಂಬಿ ಹೊರಸೂಸುವಂತೆ ಮಾಡಿರಿ. (೨) ನೂತನ ಪದ್ಧತಿಯ ವಿಚಾರದಿಂದ ಪುರಾತನ ಪದ್ಧತಿಯನ್ನು ಮಾರ್ಪಡಿಸಿ ಸುಧಾರಿಸಿರಿ. ಅದರಲ್ಲಿಯ ಗುಣಾಂಶವನ್ನು ಸ್ವೀಕರಿಸಿರಿ. ಪರರು ತುಳಿದ ಹಾದಿಯನ್ನೇ ತುಳಿಯ ಬೇಕೆಂಬ ಆತ್ಮವಂಚನೆಯು ಬೇಡ. (೩) ನಿಮ್ಮ ವಿಚಾರಗಳನ್ನು ನಿಮ್ಮ ಸಹಶಿಕ್ಷಕರ ಕೂಡ ಚರ್ಚಿಸಿರಿ, ವಿಚಾರಿಸಿರಿ. ಅವರು ನಿಮಗೆ ಹೊಸ ವಿಚಾರಗಳನ್ನು ಹೇಳಿದರೆ, ಅವನ್ನು ಸ್ವೀಕರಿಸಿರಿ. ಶಿಕ್ಷಣದ ಬೇರೆ ಬೇರೆ ಕ್ಷೇತ್ರಗಳಲ್ಲಿ ಯಶಸ್ಸನ್ನು ಪಡೆದವರ ಕೂಡ ಹೊಸತಾಗಿ ಸಂಬಂಧವನ್ನು ಬೆಳೆಯಿಸಿರಿ. (೪) ಯಾವುದಾದರೊಂದು ಚಟುವಟಿಕೆಯನ್ನು ನಿಮ್ಮ ಪ್ರೀತಿಯ ವಿಷಯವನ್ನಾಗಿಟ್ಟುಕೊಳ್ಳಿರಿ. (೫) ನಿಮ್ಮ ಆರೋಗ್ಯವನ್ನು ಆರೋಗ್ಯಶಾಸ್ತ್ರದ ನಿಯಮದಂತೆ ಕಾಯ್ದುಕೊಳ್ಳಿರಿ; ಹೆಚ್ಚಿನ ಆಹಾರ ವನ್ನೂ ಹೆಚ್ಚಿನ ಕೆಲಸವನ್ನೂ ಕೈಕೊಳ್ಳಬೇಡಿರಿ; ಎಂದರೆ ಮಾತ್ರ, ನಿಮ್ಮ ಉತ್ಸಾಹವು ಕುಂದದೆ ಮುಂದೆ ಸಾಗುವುದು.

೬. **ಆತ್ಮನಿಷ್ಠೆ.**— (೧) ನಿಮ್ಮ ವಚನವನ್ನು ಪಾಲಿಸಿರಿ. (೨) ಎಲ್ಲ ವಿಷಯವೂ ನಿಮಗೆ ಗೊತ್ತಿದೆಯೆಂದು ತೋರಿಸುವ ಪ್ರಯತ್ನ ವನ್ನು ಮಾಡಬೇಡಿರಿ; ಆದರೆ ನಿಮ್ಮ ವಿದ್ಯಾರ್ಥಿಗಳ, ಪಾಲಕರ, ಮೇಲ್ವಿಚಾರಕರ ವಿಶ್ವಾಸವು ನಿಮ್ಮಲ್ಲಿ ಉಳಿಯುವಷ್ಟು ಜ್ಞಾನವು ನಿಮ್ಮಲ್ಲಿರಬೇಕು. (೩) ಕಾಗದಪತ್ರಗಳನ್ನೂ ವರದಿಗಳನ್ನೂ ತಯಾರಿಸು ವಾಗ ನಿಯಮಿತತೆಯನ್ನು ಪಾಲಿಸಿರಿ. (೪) ನಿಮ್ಮ ತಪ್ಪುಗಳನ್ನು ಬಿಚ್ಚು ಮನಸ್ಸಿನಿಂದ ಒಪ್ಪಿಕೊಳ್ಳಿರಿ; ಆದರೆ ಪುನಃ ಅವನ್ನು ಮಾಡಬೇಡಿರಿ. (೫) ವಿದ್ಯಾರ್ಥಿಗಳೂ ನಿಮ್ಮ ಗೆಳೆಯರೆಂಬ ಭಾವನೆಯಿಂದ ಅವರನ್ನು ಕಾಣಿರಿ. ಕೊನೆಯ ಮೂರು ಸಂಗತಿಗಳಿಂದ ನಿಮಗೆ ಸಂಬಂಧಿಸಿದವರ ಮನಸ್ಸಿನಲ್ಲಿ ನಿಷ್ಠೆಯುಂಟಾಗಬಹುದು. ನೀವು ಆತ್ಮನಿಷ್ಠೆಯುಳ್ಳವ ರಾದರೆ ನಿಮ್ಮನ್ನು ಅವರು ಪೂಜ್ಯಭಾವದಿಂದ ಕಾಣುವರು.

೭. **ಸಾಮಾಜಿಕ ಅರ್ಹತೆ.**— (೧) ಉತ್ತಮ ಸೂಚನೆಗಳನ್ನು ಕೃತಜ್ಞತಾಭಾವದಿಂದ ಸ್ವೀಕರಿಸಿರಿ. (೨) ನಿಮಗೆ ಬೇಡಾದವರ ಕೂಡ

ಸಹ ಸುಮನಸ್ಸಿನಿಂದ ವರ್ತಿಸಿರಿ. (೩) ಜಾಣ ಹುಡುಗರನ್ನೂ ತಂದೆ ತಾಯ್ಗಳನ್ನೂ ಅನ್ಯರನ್ನೂ ಅವಶ್ಯಬಿದ್ದಾಗ ಗೌರವಿಸುವುದನ್ನು ಮರೆಯ ಬೇಡಿರಿ. (೪) ನಿಮ್ಮ ಗುಣದೋಷಗಳನ್ನು ನಿರ್ದಾಕ್ಷಿಣ್ಯವಾಗಿ ತಿಳಿಸುವ ಹಿತಚಿಂತಕರನ್ನು ಆರಿಸಿಕೊಳ್ಳಿರಿ. (೫) ಮಾತನಾಡುವ ಕಲೆಯನ್ನು ಆ ಕಲೆಯಲ್ಲಿ ಪಾರಂಗತರಾದವರೊಡನೆ ಮಾತಾಡಿ ಕಲಿತುಕೊಳ್ಳಿರಿ. (೬) ವಿಷಯದಲ್ಲಿ ತಲ್ಲೀನತೆಯು ಅಳತೆಗಿಂತ ಹೆಚ್ಚಾದಾಗ ಆ ಸನ್ನಿವೇಶವನ್ನು ವಿನೋದದಿಂದ ಇಲ್ಲವೆ ಯುಕ್ತಿಯಿಂದ ಹಗುರಗೊಳಿಸಿರಿ. ಆಕಸ್ಮಿಕವಾಗಿ ಒದಗುವ ಅಸಮಾಧಾನಕರವಾದ ಘಟನೆಗಳನ್ನು ವಿನೋದದೃಷ್ಟಿಯಿಂದ ನೋಡಲು ಕಲಿಯಿರಿ.

೮. **ನೂತನ ಮಾರ್ಗಶೋಧಕ ಶಕ್ತಿ—ದಕ್ಷತೆ.**—(೧) ಹುಡುಗರಿಗೆ ಮೂಲತಃ ಮನೋರಂಜನವಾಗುವ ಕೆಲಸವನ್ನು ಮಾಡಹಚ್ಚಿರಿ. ಅವರು ಹಿಡಿದ ಕೆಲಸವು ಯಶಸ್ವಿಯಾಗಿ ಮುಗಿಯುವಂತೆ ನೋಡಿಕೊಳ್ಳಿರಿ. (೨) ಅಸಾಧಾರಣವಾದ ಬುದ್ಧಿವಂತಿಕೆಯುಳ್ಳ ವಿದ್ಯಾರ್ಥಿನಾಯಕರನ್ನು ನಿಮ್ಮ ಸಾಹಾಯ್ಯಕ್ಕಾಗಿ ಆರಿಸಿಕೊಳ್ಳಿರಿ. (೩) ಕಲಿಸುವ ವಿಷಯಗಳು ಮತ್ತು ಕಲಿಸುವ ಕ್ರಮಗಳು— ಇವುಗಳಿಂದ ನಿಮ್ಮ ಯೋಗ್ಯತೆಯು ಬೆಳೆಯುವಂತೆ ಅವನ್ನು ನಿಮ್ಮ ವಶಮಾಡಿಕೊಳ್ಳಿರಿ. (೪) ನಿಮ್ಮ ವರ್ಗದ ಕೋಣೆಯು ಆಕರ್ಷಕವಾಗುವಂತೆ ಮಾಡಿರಿ. ನಿಮ್ಮ ವರ್ಗವು ನಿಮ್ಮ ಸಾಮಾನ್ಯ ಯೋಗ್ಯತೆಯ ದ್ಯೋತಕವಾಗಿರಲಿ. (೫) ಹಿಂದುಳಿದ ಅಥವಾ ಮಂದ ವಿದ್ಯಾರ್ಥಿಗಳನ್ನು ಸತತ ಪ್ರಯತ್ನದಿಂದ ಉತ್ತೇಜನಗೊಳಿಸಿರಿ. ಕಲಿಸುವ ವಿಷಯಗಳನ್ನೂ ಹುಡುಗರ ಬುದ್ಧಿಯನ್ನೂ ಅನುಲಕ್ಷಿಸಿ ಪಾಠವನ್ನು ಹೇಳಿಕೊಡಿರಿ. ಇವು ಶಿಕ್ಷಕನ ಕರ್ತವ್ಯದಕ್ಷತೆಯ ಮುಖ್ಯಲಕ್ಷಣಗಳು.

೯. **ನಿಶ್ಚಿತತೆ.**—(೧) ನೀವು ಕೊಟ್ಟ ಗೃಹಪಾಠದ ವಿಷಯಗಳು ಹುಡುಗರಿಗೆ ಎಂತು ರುಚಿಸಬಹುದೆಂಬುದನ್ನು ನೀವು ಮೊದಲೇ ವಿಚಾರಿಸಿರಿ. (೨) ಪ್ರತಿಯೊಂದು ವರ್ಗಕ್ಕೆಲ್ಲ ನಿಶ್ಚಿತವಾದ ಚಟುವಟಿಕೆಗಳನ್ನು ಮಾಡಿಸುವಾಗ ಮೊದಲೇ ಬರೆದಿಟ್ಟ ಟಿಪ್ಪಣಿಗಳ ಪುಸ್ತಕವನ್ನು ತಪ್ಪದೇ ಉಪಯೋಗಿಸಿರಿ. (೩)ಯಾವುದಾದರೊಂದು ವಿಷಯವನ್ನು

ನಿರ್ಣಯಿಸುವ ಮೊದಲು ಚೆನ್ನಾಗಿ ಆಲೋಚನೆಯನ್ನು ಮಾಡಿರಿ. ನಿಮ್ಮ ನಿರ್ಣಯವನ್ನು ಕೊಡುವುದಕ್ಕಿಂತ ಮೊದಲು ನೀವು ಸ್ವತಃ ಪಾಲಿಸತಕ್ಕ ನಿಯಮಗಳನ್ನು ಪಾಲಿಸಿರಿ. (೪) ನಿರ್ದಿಷ್ಟವಾದ ಪಾಠದ ಅಭ್ಯಾಸವನ್ನು ಚೆನ್ನಾಗಿ ಮಾಡಿರಿ. ನಿಮ್ಮ ವಿದ್ಯಾರ್ಥಿಗಳ ಪ್ರಶ್ನೆಗಳಿಗೆ ನಿಮ್ಮಲ್ಲಿರುವ ಜ್ಞಾನದ ವಿಷಯವಾಗಿ ನಂಬಿಕೆ ಹುಟ್ಟುವಂಥ ಉತ್ತರಗಳನ್ನು ಕೊಡಿರಿ. (೫) ವಿದ್ಯಾರ್ಥಿಗಳ ಸಮಸ್ಯೆಗಳನ್ನು ಬಿಡಿಸುವಾಗ ವ್ಯವಹಾರಜ್ಞಾನವನ್ನು ಉಪಯೋಗಿಸಿರಿ. ಕೆಲವು ಮಾದರಿಯ ನಶಾಸ್ತ್ರವಾದ ಉದಾಹರಣೆಗಳನ್ನು ನೀವು ನೋಡಿಕೊಂಡಿರುವುದು ಒಳಿತು.

**೧೦. ಕಲಿಸುವ ಶಕ್ತಿ .—** (೧) ನೀವು ಯಾವಾಗಲೂ ' ನಾನು ಯಶಸ್ವಿಯಾದ ಶಿಕ್ಷಕನಾಗುವೆನು ' ಎಂದು ತಿಳಿಯುತ್ತಿರಬೇಕು. ನಿರೀಕ್ಷಣೆಯಿಂದಲೂ ಬಹುಮುಖವಾದ ವಾಚನದಿಂದಲೂ ನಿಮ್ಮ ವಿಚಾರಗಳನ್ನು ಕಾರ್ಯರಂಗಕ್ಕೆ ತರಲು ಯತ್ನಿಸಿರಿ. (೨) ಮೇಲಿನವರ ವಿಮರ್ಶೆಯ ಸಾಹಾಯ್ಯದಿಂದ, ಶಿಕ್ಷಕನ ವ್ಯಕ್ತಿತ್ವದ ದೃಷ್ಟಿಯಿಂದ ನಿಮ್ಮ ಗುಣದೋಷಗಳನ್ನು ಕಂಡುಹಿಡಿದು ದೋಷಗಳನ್ನು ತಿದ್ದುವ ಚಟುವಟಿಕೆಗಳನ್ನು ಕೈಕೊಳ್ಳಿರಿ. ನಿಮ್ಮ ಹಂಚಿಕೆಗಳನ್ನು ರೂಢಿಯಲ್ಲಿ ತರಲು ಯತ್ನಿಸಿರಿ. (೩) ಶಿಕ್ಷಣದ ಬೇರೆ ಬೇರೆ ದೃಷ್ಟಿಯಿಂದ ನಿಮ್ಮನ್ನು ನೀವೇ ನಿಯಮಿತ ಕಾಲಕ್ಕೆ ಪರೀಕ್ಷಿಸಿಕೊಳ್ಳಿರಿ. (೪) ನೀವು ಕಲಿಸುವ ವಿಷಯಗಳಿಗೆ ಬೇಕಾಗುವ ಜ್ಞಾನವು ನಿಮ್ಮಲ್ಲಿ ಸಾಕಷ್ಟು ಇರದಿದ್ದರೆ, ಸರಿಯಾದ ಸಾಧನಗಳಿಂದ ನಿಮ್ಮ ಜ್ಞಾನವನ್ನು ಬೆಳೆಯಿಸಿಕೊಳ್ಳಿರಿ. ಯಾವುದಾದರೂ ಒಂದು ವಿಶೇಷ ವಿಷಯದಲ್ಲಿ ನೈಪುಣ್ಯವನ್ನು ಸಂಪಾದಿಸಲು ಯತ್ನಿಸಿರಿ. ಪ್ರವಾಸದಿಂದ ಎಷ್ಟೋ ಶಿಕ್ಷಕರು ಜಾಣರಾಗುವರು. ಹುಡುಗರ ಮನಸ್ಸನ್ನು ತಿದ್ದುವುದಕ್ಕೂ ಅವರನ್ನು ರಾಷ್ಟ್ರದ ನಿಪುಣ ನಾಗರಿಕರನ್ನಾಗಿ ಮಾಡಲಿಕ್ಕೂ ಕಲಿಸುವ ಕ್ರಮದಲ್ಲಿ ಮೇಲ್ಮೆಯನ್ನು ಪಡೆದ ನುರಿತ ಶಿಕ್ಷಕನೇ ಬೇಕು. ವಿದ್ಯಾರ್ಥಿಗಳ ಬುದ್ಧಿಯ ಬೆಳವಣಿಗೆಯನ್ನು ಮಾಡಲೂ ಶಿಕ್ಷಣ ಶಾಸ್ತ್ರವನ್ನರಿತ ಶಿಕ್ಷಕನೇ ಬೇಕು.

ಶಿಕ್ಷಕನು ಮೇಲ್ಕಾಣಿಸಿದ ಸಲಹೆ-ಸೂಚನೆಗಳನ್ನು ಅನುಸರಿಸಿ ವ್ಯಕ್ತಿತ್ವದ ಅಂಗಗಳನ್ನು ತನ್ನಲ್ಲಿ ಸಂಪೂರ್ಣವಾಗಿ ಅಳವಡಿಸಿಕೊಂಡಿರ

ಸಂಭವವಿದೆ; ಮತ್ತು ಜನತೆಯಲ್ಲಿ ತಾನಾವ ಹೆಚ್ಚಿನವನಲ್ಲವೆಂಬ ತಪ್ಪು ತಿಳಿವಳಿಕೆಯೂ ಹುಟ್ಟುವ ಸಂಭವವುಂಟು. ಇವೆರಡೂ ದೋಷಗಳಿಗೆ ಒಳಗಾಗದೆ ತನ್ನನ್ನು ತಾನರಿತು ನಡೆಯುವುದು ಶಿಕ್ಷಕನ ಕರ್ತವ್ಯವು.

**೧. ಶಿಕ್ಷಕನೂ ವೈಯಕ್ತಿಕತೆಯೂ.—** ಶಿಕ್ಷಕನು ತಾನು ನಟಿಸುವ ರಂಗಭೂಮಿಗೆ ತಕ್ಕಂತೆ ಯಾವ ಭೂಮಿಕೆಯಲ್ಲಿದ್ದರೂ ತನ್ನನ್ನು ಮರೆತಿರಕೂಡದು ಮತ್ತು ಅವನು ಈ ಕೆಳಗಿನ ಮಾತುಗಳನ್ನು ಮರೆಯಲಾಗದು.

(ಅ) ಶಿಕ್ಷಕನು ಯಾವಾಗಲೂ ಆಶಾವಾದಿಯಾಗಿರಬೇಕು. ಜೋಲುಮೋರೆಯವನು ಅಥವಾ ಬಾಡಿಬತ್ತಿದ ಮೋರೆಯುಳ್ಳವನು ಎಂದೂ ಒಳ್ಳೆಯ ಶಿಕ್ಷಕನಾಗಲಾರನು.

(ಆ) ಶಿಕ್ಷಕನು ಯಾವಾಗಲೂ ಜ್ಞಾನೇಂದ್ರಿಯ-ಪ್ರೇರಿತನಾಗಿರಬೇಕು, ಎಂದರೆ ಬಾಹ್ಯಘಟನೆಗಳಿಂದ ತಟ್ಟನೆ ವಿಕಾರವಶನಾಗಿ ಉದ್ರೇಕಗೊಳ್ಳದೆ, ತಾನು ಮಾಡುವ ಕಾರ್ಯಗಳನ್ನು ವಿಚಾರಪೂರ್ವಕವಾಗಿ ಮಾಡುವವನಾಗಿರಬೇಕು. ಇದಕ್ಕೆ ವಿರುದ್ಧವಾಗಿ ಕರ್ಮೇಂದ್ರಿಯಗಳ ಪ್ರೇರಣೆಗೆ ಒಳಗಾಗುವವನು ಹಿಂದುಮುಂದಿನ ಧೋರಣೆಯನ್ನು ಲಕ್ಷಿಸದೆ ಕಾರ್ಯಮಾಡುವ ಪ್ರವೃತ್ತಿಯುಳ್ಳವನಾಗಿರುವನು. ಇಷ್ಟರಿಂದಲೇ ಶಿಕ್ಷಕನು ಚತುರನೂ ಚಟುವಟಿಕೆಯುಳ್ಳವನೂ ಇರಬಾರದೆಂದು ಅರ್ಥಮಾಡಿಕೊಳ್ಳಲಾಗದು. ಈ ಗುಣಗಳೂ ಅವನಲ್ಲಿರಬೇಕು.

(ಇ) ಶಿಕ್ಷಕನು ಅಂತರ್ಮುಖನಾಗಿ ಒಂಟಿಸೊಲಗನಂತೆ ನಡೆಯದೆ ಜನರಲ್ಲಿ ಕೂಡಿನಡೆಯುವ ಸ್ವಭಾವದವನಾಗಿರಬೇಕು; ಮತ್ತು ಹಾಗೆ ಜನರಲ್ಲಿ ಒಡನಾಡುತ್ತಿರುವಾಗ ಅವರ ಶೀಲಸ್ವಭಾವಗಳ ಗುಟ್ಟನ್ನು ತಟ್ಟನೆ ತಿಳಿದುಕೊಳ್ಳುವ ಜಾಣ್ಮೆಯುಳ್ಳವನಾಗಿರಬೇಕು. ಹರಟೆಯುಮಲ್ಲನಾದ ಶಿಕ್ಷಕನು ತನ್ನ ಮಾತಿನ ಗಡಿಬಿಡಿಯಲ್ಲಿಯೇ ಕಾಲಕಳೆಯುತ್ತಿದ್ದು ತನ್ನ ಗುಟ್ಟನ್ನೆಲ್ಲ ಜನರ ಮುಂದೆ ತೋರಾಡುವನಲ್ಲದೆ ಅನ್ಯರ ಗುಟ್ಟನ್ನು ತಿಳಿದುಕೊಳ್ಳಲು ಅವನಿಗೆ ಅವಕಾಶವೇ ಉಳಿಯದು. ಶಿಕ್ಷಕನು ಇಂಥ ವಾಚಾಳಿಯಾಗಿರಕೂಡದು. ಹಾಗೆಯೆ ನಾಲ್ಕು ಜನರು

ಕೂಡಿದಲ್ಲಿ ಹೋಗಲಂಜುವವನೂ ಪ್ರಸಂಗದಲ್ಲಿ ಬಾಯಿಬಿಟ್ಟು ಮಾತನಾಡಲಾರದ ಶುಂಭನೂ ಒಳ್ಳೆಯ ಶಿಕ್ಷಕನಾಗಲಾರನು. ಒಳ್ಳೆಯ ಶಿಕ್ಷಕನು ಇವೆರಡೂ ಮಾರ್ಗಗಳ ನಡುವೆ ಸಾಗುವವನಾಗಿ, ಕೂರ್ಮದಂತೆ ಬೇಕಾದಾಗ ಬಹಿರ್ಮುಖನೂ ಬೇಡವಾದಾಗ ಅಂತರ್ಮುಖನೂ ಆಗಲು ಬಲ್ಲವನಾಗಿರಬೇಕು.

ಶಿಕ್ಷಕನ ಹೋರೆಯು ಪರಾವಲಂಬಿಯಾದುದು; ಇದರಿಂದ ಅವನು ತನ್ನನ್ನು ಹೇಗೆ ಉಳಿಸಿಕೊಳ್ಳಬಹುದೆಂಬುದು ತೊಡಕಿನ ಪ್ರಶ್ನೆ. ಶಿಕ್ಷಕನನ್ನು ಗಾಣದೆತ್ತಿಗೊ ಗಂಟುಗಳನ್ನು ಹೊರುವ ಆಳಿಗೊ ಹೋಲಿಸಕೂಡದು. "ಮಾಡಿದ್ದನ್ನೆ ಮಾಡುವುದು," "ಅವನ ಚಟುವಟಿಕೆಗಳೆಲ್ಲ ಏಕಮುಖವಾಗಿರುವುವು," ಇಂಥ ನಿಯಮಿತ ಕಾರ್ಯಕಲಾಪಗಳ ಮೂಲಕವಾಗಿ ಶಿಕ್ಷಕನ ಹೋರೆಯನ್ನು ಹಾಗೆ ಹೋಲಿಸುವುದುಂಟು. ಆದರೆ, ಇತ್ತೀಚೆಗೆ ಶಿಕ್ಷಕನ ಹೋರೆಯ ಬಗೆಗೆ ಜನತೆಯಲ್ಲಿ ಗೌರವವು ತಲೆದೋರುತ್ತಿದೆ. ಇದು ಹೆಚ್ಚಾಗುವಂತೆ ಶಿಕ್ಷಕನು ನಡೆಯಬೇಕು.

**೨. ಶಿಕ್ಷಕನೂ ಸಮಾಜವೂ.**— ಪ್ರಾಥಮಿಕ ಶಿಕ್ಷಕನೇ ಆಗಲಿ, ಶಿಕ್ಷಣಕಾರ್ಯವನ್ನು ಕೈಕೊಂಡ ಇನ್ನಾವನೇ ಆಗಲಿ, ಅವನಿಗೆ ಸಮಾಜದಲ್ಲಿ ಸಾಕಾದಷ್ಟು ಮನ್ನಣೆಯಿಲ್ಲ. "ಬುದ್ಧಿಯ ದೇವತೆಗೇ ಪ್ರಪಂಚದಲ್ಲಿ ಸಾಕಾದಷ್ಟು ಮನ್ನಣೆ ಇಲ್ಲದಿರುವಾಗ ಮರ್ತ್ಯರಾದ ಶಿಕ್ಷಕರ ಪಾಡೇನು?" ಎಂದು **ಗಟೇ** ಎಂಬ ಜರ್ಮನ್ ಕವಿಯ ಉದ್ಗಾರ. ಇಂಥ ಪರಿಸ್ಥಿತಿಗೆ ಕಾರಣವೇನು? (೧) ಶಿಕ್ಷಕನು ವಾಚಾಳಿಯೆಂದೂ ಮಿಕ್ಕ ಹೋರೆಯವರೆಲ್ಲರೂ ಕಾರ್ಯತತ್ಪರರೆಂದೂ ಹೇಳುವರು. "ಪ್ರಪಂಚವೆಲ್ಲ ಒಳ್ಳೆಯದು; ಶಾಲೆ ಮಾತ್ರ ಕೆಟ್ಟುದು"ಎಂಬ ಗಾದೆಯ ಮಾತೊಂದು ಜರ್ಮನಿಯಲ್ಲಿ ಪ್ರಚಾರದಲ್ಲಿದೆ. ಶಿಕ್ಷಕರು ಸಾತ್ತ್ವಿಕ ಪ್ರಾಣಿಗಳೆಂದೂ ದುಷ್ಟ ಜಗತ್ತಿನ ತುಂಟರ ಪ್ರಶ್ನೆಗಳನ್ನು ಬಿಡಿಸಲು ಅಸಮರ್ಥರಾದ ಅಂಜುಬುರುಕರೆಂದೂ ಜನರ ತಿಳಿವಳಿಕೆಯಿದೆ. (೨) ಶಿಕ್ಷಕನು ಚಿಕ್ಕಮಕ್ಕಳ ಗುಂಪಿನಲ್ಲಿ ಅದರಗುಂಚಿಯ ದೊಡ್ಡಪ್ಪನಂಥ ಕಟ್ಟಾಳಾಗಿ ತೋರಿಸಿಕೊಳ್ಳುತ್ತ, ಸಮಾಜದಲ್ಲಿಯೂ ಅದೇ ರೀತಿಯಾಗಿ

ವರ್ತನೆಯನ್ನಿಡುವನೆಂಬ ಆರೋಪವೊಂದಿದೆ. ತಾನು ಸುಶಿಕ್ಷಿತನು; ಆದುದರಿಂದ ತನ್ನ ಮಾತಿಗೆ ಪ್ರಾಧಾನ್ಯವಿರಬೇಕೆಂದು ಶಿಕ್ಷಕನು ಬಯಸುವ ಸಂಭವವುಂಟು. ಸಮಾಜವು ಇಂತಹ ಹೆಮ್ಮೆಯುವನೊಡನೆ ಕೂಡಿ ನಡೆಯಲು ಬಯಸಲಾರದು. ಮೇಲಾಗಿ ಶಿಕ್ಷಕನು ವಿಧಿಸುತ್ತಿರುವ ದಂಡನೆ ಗಳಿಗಾಗಿ ಅವನನ್ನು ದೂರೀಕರಿಸಿ ಅವನ ವಿಷಯದಲ್ಲಿ ಅನಾದರವನ್ನು ತೋರಿಸುವ ಸಂಭವವೂ ಉಂಟು. (೩) ಶಿಕ್ಷಣದ ಹೋರೆಯಲ್ಲಿ ಹುರುಳಿಲ್ಲ ವೆಂಬ ಕಲ್ಪನೆಯೇ ಈ ಬಗೆಯ ಅನಾದರವನ್ನೊ ಅಲ್ಪಾದರವನ್ನೊ ಹುಟ್ಟಿಸುವ ಮೂರನೆಯ ಕಾರಣವು. ಓದುಬರೆಹಗಳನ್ನು ಕಲಿತವರೆಲ್ಲರೂ ಶಿಕ್ಷಕನ ಹೋರೆಯನ್ನು ಮಾಡಬಹುದೆಂಬುದೊಂದು ಸಾಮಾನ್ಯರ ಕಲ್ಪನೆ; ಶಿಕ್ಷಕರೂ ಅವರ ವರ್ತನೆಯೂ ಈ ಕಲ್ಪನೆಗೆ ಮುಖ್ಯ ಕಾರಣ. "ಶಿಕ್ಷಣವು ಕಲೆಯೂ ಅಹುದು, ಶಾಸ್ತ್ರವೂ ಅಹುದು" ಎನ್ನುವ ಹಾಗೆ ಶಿಕ್ಷಕನ ಕಾರ್ಯಕಲಾಪಗಳಿದ್ದರೆ, ಆ ಮಾತು ಅವನು ವಹಿಸಿದ ಭೂಮಿಕೆ ಯಿಂದ ವ್ಯಕ್ತವಾದರೆ, ಸಮಾಜವು ಆ ವ್ಯವಸಾಯಕ್ಕೆ ಸಾಕಾದಷ್ಟು ಮನ್ನಣೆಯನ್ನು ಕೊಟ್ಟೇ ಕೊಡುವುದು.

ಈಚೆಗೆ ಶಿಕ್ಷಕನ ಹಾಗೂ ಶಿಕ್ಷಣದ ಹೋರೆಯು ಕಡೆಗೆ ಸಮಾಜದ ದೃಷ್ಟಿಯು ಹೊರಳಿದೆ. ರಾಜಕಾರಣಪಟುಗಳೂ ಮಾನಸಶಾಸ್ತ್ರಜ್ಞರೂ ಜ್ಞಾನಿಗಳೂ ಶಿಕ್ಷಣದ ಮಹತ್ತ್ವವನ್ನು ಸಾರಿ ಸಾರಿ ಹೇಳಿ ಸಮಾಜವನ್ನು ಎಚ್ಚರಿಸುತಿದ್ದಾರೆ. ಇಂಥ ಪರಿಸ್ಥಿತಿಯಲ್ಲಿ ಶಿಕ್ಷಕನು ತನ್ನ ಗೌರವವನ್ನು ಕಾದುಕೊಳ್ಳುವಷ್ಟು ದಕ್ಷತೆಯಿಂದ ಕೆಲಸಮಾಡುತ್ತಿದ್ದರೆ, ತನ್ನ ಭೂಮಿಕೆ ಯನ್ನು ಸರಿಯಾಗಿ ಸಾಗಿಸಿದರೆ, ಅವನಿಗೆ ತಕ್ಕಷ್ಟು ಗೌರವವು ದಿಟವಾಗಿ ದೊರೆಯುವುದು.

**೩. ಶಿಕ್ಷಕನೂ ಸಾಹಿತ್ಯವೂ.—** ಸಾಹಿತ್ಯದಲ್ಲಿ ಶಿಕ್ಷಕನಿಗೂ ಅವನ ಹೋರೆಗೂ ಉಚ್ಚ ಸ್ಥಾನವಿಲ್ಲ; ಕವಿಗಳೂ ನಾಟಕಕಾರರೂ ಕಾದಂಬರಿಗಳ ಲೇಖಕರೂ ಶಿಕ್ಷಕವೃತ್ತಿಯಿಂದ ಜೀವಿಸುವವರಿಗೆ ಸರಿ ಯಾದ ಸ್ಥಾನಮಾನಗಳನ್ನು ತಮ್ಮ ಕೃತಿಗಳಲ್ಲಿ ಒದಗಿಸಿಕೊಡುವುದಿಲ್ಲ. ಶಿಕ್ಷಕನ ಜೀವನದಲ್ಲಿ ಅದ್ಭುತರಮ್ಯತೆಯಿಲ್ಲ; ಶಿಕ್ಷಕನ ಕಾರ್ಯರಂಗ

ವಾದ ಶಾಲೆಯ ಶಾಂತ-ನಿರ್ದುಷ್ಟ-ವಾತಾವರಣದಲ್ಲಿ ಪ್ರೇಮ-ಕಲಹಗಳಿಗೂ, ಕೊಲೆ-ಸುಲಿಗೆಗಳಿಗೂ, ಕ್ರಾಂತಿಗಳಿಗೂ, ತಕ್ಕ ಸನ್ನಿವೇಶಗಳಿಲ್ಲ; ಆದುದರಿಂದ ನೂತನ ಸಾಹಿತ್ಯದಲ್ಲಿ ಪ್ರಧಾನಸ್ಥಾನವನ್ನು ಪಡೆದಿರುವ ಕಾವ್ಯ-ನಾಟಕ-ಕಾದಂಬರಿಗಳಿಗೆ ಆವಶ್ಯಕವಾದ ಸನ್ನಿವೇಶವು ದೊರೆಯದೆ ಸಾಹಿತಿಗಳು ಶಿಕ್ಷಕನ ಹೋರೆಯನ್ನೂ ಅವನ ಕಾರ್ಯರಂಗವನ್ನೂ ತಮ್ಮ ಕೃತಿಗಳಲ್ಲಿ ಸೇರಿಸಿಲ್ಲ.

**೪. ಶಿಕ್ಷಕನೂ ಮಾನಸಶಾಸ್ತ್ರವೂ.**— ಬಾಲಕರ ಮನೋವಿಕಾಸವೇ ಶಿಕ್ಷಣದ ಗುರಿಯೆಂಬುದನ್ನು ಒಪ್ಪಿಕೊಂಡರೆ, ಶಿಕ್ಷಕನು ಅವರ ಮನಸ್ಸಿನ ಒಲವುಗಳ ಕೂಲಂಕಷವಾದ ಅಭ್ಯಾಸವನ್ನು ಮಾಡುವುದು ಅವಶ್ಯವೆಂಬುದನ್ನು ಒಪ್ಪಿಕೊಂಡ ಹೊರತು ಗತ್ಯಂತರವಿಲ್ಲ. ಮಕ್ಕಳ ಮನಸ್ಸೂ ಅದರ ಬೆಳವಣಿಗೆಯ ಮೆಟ್ಟಿಲುಗಳೂ ಅದರ ಒಲವುಗಳೂ ಸುಶಿಕ್ಷಣದಲ್ಲಿ ಇವುಗಳಿಂದಾಗುವ ಉಪಯೋಗವೂ – ಇವೇ ಮೊದಲಾದ ಅತಿ ಮಹತ್ತ್ವದ ಸಂಗತಿಗಳು ಮಾನಸಶಾಸ್ತ್ರದ ಅಭ್ಯಾಸದಿಂದ ಗೊತ್ತಾಗುವುವು. ಬಾಲಕರ ಮನೋಭೂಮಿಕೆಗಳು ಶೈಕ್ಷಣಿಕ ಮಾನಸಶಾಸ್ತ್ರದ ಮುಖ್ಯ ವಿಷಯ. ಇವುಗಳ ಅಭ್ಯಾಸವನ್ನು ಚೆನ್ನಾಗಿ ಮಾಡಿದ ಶಿಕ್ಷಕನೇ ತನ್ನ ಕಾರ್ಯವನ್ನು ಸುಗಮವಾಗಿ ಸಾಗಿಸಬಲ್ಲನು.

ಮಕ್ಕಳ ಮನಸ್ಸಿನ ಒಲವುಗಳನ್ನು ಅರಿಯದವನಾದ ಶಿಕ್ಷಕನ ಪಾಡು ಒಳಿತಾಗದು. ರೋಗದ ಮೂಲವನ್ನೇ ಅರಿಯದೆ ಅದಕ್ಕೆ ಉಪಾಯವನ್ನು ಮಾಡಲೆಳಸುವ ವೈದ್ಯನು ರೋಗವನ್ನು ಹೋಗಲಾಡಿಸಲಾರನು; ಅಲ್ಲದೆ ಇಂತಹ ವೈದ್ಯನು ರೋಗಿಗೆ ಹಾನಿಯನ್ನೂ ಮಾಡುವ ಸಂಭವವುಂಟು; ಹಾಗೆಯೇ ಮಕ್ಕಳ ಮನೋವಿಕಾಸದ ಮೆಟ್ಟಿಲುಗಳನ್ನೂ ಅವರ ಒಲವುಗಳನ್ನೂ ಅರಿಯದವನಾದ ಶಿಕ್ಷಕನು ಅವರಿಗೆ ಶಿಕ್ಷಣವನ್ನು ಕೊಡಲು ಹವಣಿಸಿದರೆ, ಮಕ್ಕಳ ಮನಸ್ಸು ಸುಸಂಸ್ಕೃತವಾಗಲಾರದು; ಒಮ್ಮೊಮ್ಮೆ ಮಕ್ಕಳ ಮನೋಭಾವನೆಗಳ ಪೋಷಣೆಯನ್ನು ಸರಿಯಾಗಿ ಮಾಡಲಾರದೆ, ಇಂತಹ ಶಿಕ್ಷಕನು ಅಪಯಶಸ್ಸಿಗೂ ಗುರಿಯಾಗಬಹುದು.

ಮಕ್ಕಳಿಗೆ ಕಲಿಸುವ ವಿಷಯಗಳಿಗೂ, ಅವುಗಳನ್ನು ಕಲಿಸುವಾಗ ಶಿಕ್ಷಕನು ಉಪಯೋಗಿಸುವ ಕ್ರಮಗಳಿಗೂ ಹಿಂದಿನ ಕಾಲದಲ್ಲಿ ಪ್ರಾಧಾನ್ಯವಿದ್ದಿತು; ಈಗ ಇವೆರಡನ್ನೂ ಕಡೆಗಣಿಸಿ, ಶಿಕ್ಷಣ ಕಾರ್ಯದಲ್ಲಿ ಮಗುಗಳ ಮನದ ಹರಿಗಳನ್ನೇ ಹೆಗ್ಗುರಿಯನ್ನಾಗಿರಿಸಿಕೊಳ್ಳಬೇಕೆಂದು ಇಂದಿನ ಶಿಕ್ಷಣ ಶಾಸ್ತ್ರಜ್ಞರು ಸಾರಿ ಸಾರಿ ಹೇಳುತಿದ್ದಾರೆ; ಈ ಕಾರಣ ದಿಂದ, ಸಾಲೆಗಳಲ್ಲಿ ಕಲಿಯುತಿರುವ ಮಕ್ಕಳ ಮನದ ಬೆಳವಣಿಗೆಗೂ ಅವರ ಶಿಕ್ಷಣದ ಪ್ರಗತಿಗೂ ಇರುವ ಸಮವಾಯುಸಂಬಂಧವನ್ನು ಅರಿತು ಕೊಳ್ಳುವ ಮಟ್ಟಿಗಾದರೂ ಶಿಕ್ಷಕರು ಮಾನಸಶಾಸ್ತ್ರದ ಅಭ್ಯಾಸವನ್ನು ಮಾಡಿರಲೇಬೇಕು.

**೫. ಶಿಕ್ಷಕನೂ ಮಗುಗಳನ್ನು ಪರಿಪೂರ್ಣ ಮಾನವರನ್ನಾಗಿ ಮಾರ್ಪಡಿಸುವ ಮಾಟಗಾರಿಕೆಯೂ.**—ಈ ದೃಷ್ಟಿಯಿಂದ ಆಲೋಚನೆ ಮಾಡುವಾಗ ಶಿಕ್ಷಕರನ್ನು ಮೂರು ವರ್ಗಗಳಾಗಿ ವಿಂಗಡಿಸಬಹುದು:—(೧) ತಾವೇ ಉತ್ತಮೋತ್ತಮ ಶಿಕ್ಷಕರೆಂದು ತಿಳಿದುಕೊಂಡು ಹೆಮ್ಮೆ ತಾಳಿರುವವರು. (೨) ತಮ್ಮ ಯೋಗ್ಯತೆಯನ್ನು ಸರಿಯಾಗಿ ತಿಳಿದುಕೊಂಡ ವರು. (೩) ತಮ್ಮ ಯೋಗ್ಯತೆಯನ್ನು ಅಳೆದು ನಿರ್ಧರಿಸಿಕೊಳ್ಳಲು ಸಿದ್ಧ ರಿಲ್ಲದವರು. ಶಿಕ್ಷಕರಲ್ಲಿ ಮೂರನೆಯ ತರಗತಿಯವರೇ ಹೆಚ್ಚಾಗಿ ಇರು ವರು. ಮೊದಲನೆಯ ತರಗತಿಯವರು ವಿರಳ; ಆದುದರಿಂದ ಎರಡನೆಯ ತರಗತಿಯವರ ವಿಷಯವಾಗಿಯೇ ಕೆಲವು ಸಂಗತಿಗಳನ್ನು ವಿವೇಚಿಸುವೆವು.

ಓದುಬರೆಹಗಳನ್ನು ಕಲಿಸಿಕೊಡುವುದಷ್ಟೇ 'ಶಿಕ್ಷಣ'ವಲ್ಲ; ವಿಶಿಷ್ಟ ವಾದ ವಿಷಯದ ಜ್ಞಾನವನ್ನು ವಿದ್ಯಾರ್ಥಿಗಳಲ್ಲಿ ಉಂಟುಮಾಡುವುದೂ ಇಂತಹ ಜ್ಞಾನವನ್ನು ದೊರಕಿಸಲು ಬೇಕಾಗುವ ದಾರಿಯನ್ನು ಅವರಿಗೆ ತೋರಿಸಿಕೊಡುವುದೂ ಸರಿಯಾದ ಶಿಕ್ಷಣವೆಂದು ಹೇಳಬಹುದು; ಜ್ಞಾನ-ಸಂಪಾದನೆಯನ್ನು ಮಾಡಿಕೊಂಡು, ಆ ಜ್ಞಾನದ ಉಪಯೋಗವನ್ನು ಮಾಡಿಕೊಳ್ಳುವಂತೆ ವಿದ್ಯಾರ್ಥಿಗಳನ್ನು ಪ್ರೇರಿಸಿ, ಅವರ ಶೀಲ-ಸ್ವಭಾವ ಗಳನ್ನು ಒಳ್ಳೆಯದಕ್ಕೆ ಮಾರ್ಪಡಿಸಿ, ಅವರನ್ನು ಪರಿಪೂರ್ಣ ಮಾನವ ರನ್ನಾಗಿ ಮಾಡುವ ವರೆಗಿನ ಸರ್ವ ಧ್ಯೇಯಗಳ ಸಮಾವೇಶವೂ 'ಶಿಕ್ಷಣ' ವೆಂಬ ಶಬ್ದದಲ್ಲಿಯೇ ಆಗುವುದು.

ವಿದ್ಯಾರ್ಥಿಗಳನ್ನು ಪರಿಪೂರ್ಣ ಮಾನವರನ್ನಾಗಿ ಮಾಡಬಲ್ಲೆವೆಂಬ ಅಭಿಮಾನವನ್ನು ತಳೆದಿರುವ ಹಲವು ಶಿಕ್ಷಕರನ್ನು ನಾವು ಕಾಣಬಹುದಾದರೂ, ನಿಶ್ಚಯವಾಗಿ ಅಂತಹ ಯೋಗ್ಯತೆಯುಳ್ಳವರು ತೀರ ವಿರಳ; ಇದು ಕಠಿನವಾದ ಕೆಲಸ; ತನ್ನ ಯೋಗ್ಯತೆಯಿಂದಲೇ ಶಿಕ್ಷಕನು ಈ ಗುರಿಯನ್ನು ಸಾಧಿಸಲಾರನು; ಯೋಗ್ಯತೆಯುಳ್ಳ ವಿದ್ಯಾರ್ಥಿಗಳೂ ಈ ಧ್ಯೇಯವನ್ನು ಸಾಧಿಸಲು ಅನುಗುಣವಾದ ಪರಿಸ್ಥಿತಿಯೂ ಬೇಕು; ವಿದ್ಯಾರ್ಥಿಗಳು ಶಾಲೆಗೆ ಬರಲು ಪ್ರಾರಂಭಿಸುವ ಮುಂಚೆಯೇ ಹಲವು ಗುಣದೋಷಗಳ ಸಂಸ್ಕಾರಗಳನ್ನು ಪಡೆದೇ ಬರುವರು; ಆದ್ದರಿಂದ 'ಶಿಕ್ಷಕನು ಮಗುಗಳಿಗೆ ಪರಿಪೂರ್ಣ ಮನುಷ್ಯತ್ವವನ್ನು ದಯಪಾಲಿಸುವ ಮಾಟಗಾರನು' ಎಂದು ಹೇಳುವುದಕ್ಕಿಂತಲೂ 'ಮಗುಗಳಲ್ಲಿ ಮೊದಲಿನಿಂದಲೂ ಬೀಜರೂಪದಿಂದ ಇರುವ ಜಾಣ್ಮೆಯನ್ನು ಸರಿಪಡಿಸಿ ಬೆಳೆಯಿಸುವ ಕುಶಲತೆಯನ್ನು ಪಡೆದಿರುವ ತೋಟಗಾರ'ನೆಂದು ಹೇಳುವುದು ಮೇಲು. ಒಂದು ಹಲಗೆಯ ಮೇಲೆ ದಪ್ಪವಾದ ಅಕ್ಷರಗಳಿಂದ 'ಮಾನವರನ್ನು ತಿದ್ದುವ ಸಂಸ್ಥೆ' ಎಂದು ಬರೆದು ಅದನ್ನು ಶಾಲೆಯ ಹೆಬ್ಬಾಗಿಲಲ್ಲಿ ತೂಗಹಾಕಬೇಕೆಂದು ಹೇಳುವವರೂ ಹಲವರಿದ್ದಾರೆ. ಈ ಧ್ಯೇಯವನ್ನು ಸಾಧಿಸುವ ಮಾರ್ಗದಲ್ಲಿ ಬಹು ಜನರು ಹೊರಬೇಕಾದ ಹೊಣೆಗಾರಿಕೆಯ ಸಮಾವೇಶವಾಗುವುದು; ತಮ್ಮ ಗುರಿಯು ತಪ್ಪಿದಾಗ, ಬಾಲಕರ ಮನೆಗಳಲ್ಲಿಯ ಪ್ರತಿಕೂಲ ಪರಿಸ್ಥಿತಿಯೇ ಅದಕ್ಕೆ ಕಾರಣವೆಂದು ಪ್ರಾಥಮಿಕ ಶಾಲೆಗಳಲ್ಲಿಯ ಶಿಕ್ಷಕರೂ, ಪ್ರಾಥಮಿಕ ಶಿಕ್ಷಣದ ದೋಷವೇ ಇದಕ್ಕೆ ಮೂಲವೆಂದು ಮಾಧ್ಯಮಿಕ ಶಾಲೆಗಳ ಶಿಕ್ಷಕರೂ, ದೂರುಗಳನ್ನು ಹೇಳಿ ತಮ್ಮ ಹೊಣೆಗಾರಿಕೆಯಿಂದ ಪಾರಾಗಲು ಪ್ರಯತ್ನಿಸುವುದೂ ಉಂಟು.

ವಿದ್ಯಾರ್ಥಿಗಳ ಬುದ್ಧಿಶಕ್ತಿಗೆ ಅನುಗುಣವಾಗುವಂತೆ ಬೌದ್ಧಿಕ ಶಿಕ್ಷಣವನ್ನು ಅವರಿಗೆ ಕೊಡಬೇಕೆಂಬ ತತ್ತ್ವಕ್ಕೆ ಈಚೆಗೆ ಪ್ರಾಧಾನ್ಯ ವುಂಟಾಗಿರುವುದು; ಇದರಿಂದ ಶಿಕ್ಷಕನ ಹೊಣೆಗಾರಿಕೆಯು ಕಡಿಮೆಯಾಗತೊಡಗಿದೆ. ವಿದ್ಯಾರ್ಥಿಗಳನ್ನು ಆದರ್ಶ ಮನುಷ್ಯರನ್ನಾಗಿ ಮಾರ್ಪಡಿಸುವುದರಲ್ಲಿ ಮಾತ್ರ ಶಿಕ್ಷಕನ ಹೊಣೆಗಾರಿಕೆಯು ಕಡಿಮೆ

ಯಾಗಿಲ್ಲ. ವೈದ್ಯನು ಮಾನವನ ದೇಹದ ಬೇನೆಗಳನ್ನು ಕಳೆಯುವಂತೆ ಶಿಕ್ಷಕನು ಮಗುವಿನ ಮನಸ್ಸಿನ ಬೇನೆಗಳನ್ನು ಕಳೆಯುವನು; ವೈದ್ಯನು ಆರೋಗ್ಯದ ರಕ್ಷಣೆಗೆ ತಕ್ಕ ಸಲಹೆಗಳನ್ನು ಕೊಟ್ಟು ಮಾನವರನ್ನು ದೃಢ-ಕಾಯರನ್ನಾಗಿ ಮಾಡುವಂತೆ ಉತ್ತಮ ಶಿಕ್ಷಕನು ವಿದ್ಯಾರ್ಥಿಗಳ ಶೀಲ-ಸ್ವಭಾವಗಳನ್ನು ತಿದ್ದಿ ಅವರನ್ನು ಒಳ್ಳೆಯ ಮನುಷ್ಯರನ್ನಾಗಿ ಮಾರ್ಪಡಿಸಲು ತಕ್ಕ ಶಕ್ತಿ-ಸಾಹಸಗಳನ್ನೂ, ಸರಿಯಾದ ಸಮಯವನ್ನೂ ಉಪಯೋಗಿಸುವನು. ಇಂತಹ ಶಿಕ್ಷಕರಿಗೆ ವಿದ್ಯಾರ್ಥಿಗಳು ಚಿರಋಣಿಗಳಾಗಿರುವರು.

೬. **ಶಿಕ್ಷಕನೂ ಬಾಲಕರ ಪಾಲಕತ್ವವೂ.**— ಶಾಲೆಗೆ ಬರುವ ಚಿಕ್ಕಮಕ್ಕಳ ಪಾಲಕನೆಂಬ ಹೊಣೆಗಾರಿಕೆಯೂ ಶಿಕ್ಷಕನ ಮೇಲೆಯೆ ಇರುವುದು. ಶಾಲೆಯ ಪಾಠಗಳ ವೇಳೆಯಲ್ಲಿ ಶಿಕ್ಷಕನೇ ಬಾಲಕರ ಪಾಲಕನು. ಬಾಲಕರ ಶರೀರಗಳ ಲಾಲನೆ-ಪಾಲನೆಗಳಿಗೆ ಅವರ ಪಾಲಕರು ಹೊಣೆಗಾರರಾಗಿರುವಷ್ಟೇ, ಅದೇಕೆ? ಅದಕ್ಕೂ ಹೆಚ್ಚಾಗಿಯೆ ಅವರ ಶೀಲ-ಸ್ವಭಾವ-ಸಂಸ್ಕಾರಗಳ ಪೋಷಣೆಗೆ ಶಿಕ್ಷಕನು ತಾನೇ ಹೊಣೆಗಾರನು. ವಸತಿಗೃಹಗಳುಳ್ಳ ಶಾಲೆಗಳಲ್ಲಿಯಂತೂ ಶಿಕ್ಷಕನೇ ಅಲ್ಲಿರುವ ಎಲ್ಲ ವಿದ್ಯಾರ್ಥಿಗಳ ಪಾಲಕನು.

ಬಾಲಕರನ್ನು ತಿದ್ದುವ ಕಾರ್ಯದಲ್ಲಿ ತಾಯ್ತಂದೆಗಳೂ ಇಲ್ಲವೆ ಪಾಲಕರೂ ಶಿಕ್ಷಕನಿಗೆ ನೆರವಾಗಲೇಬೇಕು. ಗೃಹಪಾಠಗಳ, ವೇಳೆಗೆ ಸರಿಯಾಗಿಯೂ ಕ್ರಮವಾಗಿಯೂ ಸಾಲೆಗೆ ಬರುವುದರ, ಸಾಲೆಗೆ ಬಿಡುವಿರುವ ಕಾಲದಲ್ಲಿ ವಿದ್ಯಾರ್ಥಿಗಳ ನಡಾವಳಿಗಳ ವಿಷಯದಲ್ಲಿ ಪಾಲಕರು ಶಿಕ್ಷಕನ ಹೊಣೆಯನ್ನರಿತು ನಡೆಯದಿದ್ದರೆ, ಅವನ ಕಾರ್ಯವು ಯಶಸ್ವಿಯಾಗಲಾರದು.

ಶಾಲೆಯ ವಿದ್ಯಾರ್ಥಿಗಳೆಲ್ಲರೂ ತನ್ನ ಮಕ್ಕಳೆಂದು ಶಿಕ್ಷಕನು ಭಾವಿಸಬಹುದೇ? ತನ್ನ ಮಕ್ಕಳು ಶಾಲೆಯ ವಿದ್ಯಾರ್ಥಿಗಳಾಗಿದ್ದಾಗ ಅವರ ಬಗೆಗೆ ಶಿಕ್ಷಕನ ಹೊಣೆಗಾರಿಕೆಯೇನು? ಇವೇ ಮೊದಲಾದ ಪ್ರಶ್ನೆಗಳು ಶಿಕ್ಷಕನು ತನ್ನ ಪಾತ್ರವಿಶೇಷದ ಅಭಿನಯವನ್ನು ಕೈಕೊಂಡಾಗ ವಿಮರ್ಶೆ ಮಾಡತಕ್ಕ ಮಾತುಗಳಾಗಿವೆ.

ಕಾಗೆಯೂ ಕೂಡ ತನ್ನ ಮರಿಯೇ ಹೊನ್ನಮರಿಯೆಂದು ಹೇಳುವು ದೆಂಬ ಗಾದೆಯ ಮಾತಿನಂತೆ ಶಿಕ್ಷಕನಿಗೆ ತನ್ನ ಮಕ್ಕಳ ವಿಷಯದಲ್ಲಿ ಅಭಿಮಾನವಿರುವುದೂ ಆ ಅಭಿಮಾನದ ಮೂಲಕವಾಗಿ ತನ್ನ ಮಕ್ಕಳಲ್ಲಿ ಇಲ್ಲದ ಗುಣಗಳನ್ನು ಕಲ್ಪಿಸಿಕೊಳ್ಳುವುದೂ ಮನುಷ್ಯಸ್ವಭಾವದ ಹೊರಗಿನ ಮಾತಲ್ಲ; ಆದರೆ, ನಿಜವಾದ ಶಿಕ್ಷಕನು ಪಾಲಕನ ಪಾತ್ರವನ್ನು ಅಭಿನಯಿಸು ವಾಗ ಮಕ್ಕಳ ನಿಜವಾದ ಗುಣಾವಗುಣಗಳನ್ನು ಕಂಡುಕೊಂಡು ನಡೆಯುವನಲ್ಲದೆ, ಕಾಗೆಯು ಮರಿಯನ್ನು ತನ್ನ ಮರಿಯೆಂದು ತಿಳಿದು ಕೊನೆಯಲ್ಲಿ ಮೋಸ ಹೋಗುವ ಕೋಗಿಲೆಯಂತೆ ನಿರಾಶೆಗೆ ಎಂದೂ ಒಳಗಾಗನು.

ಶಿಕ್ಷಕರ ವಿಷಯವಾಗಿ ಇನ್ನೊಂದು ಲೋಕಾಪವಾದವಿದೆ.— ಮೊಚ್ಚೆಗಾರನ ಕಾಲಿಗೆ ಯಾವಾಗಲೂ ಹರಕು ಮೊಚ್ಚೆಯೆಂದೂ ಅಗಸನ ಮೈಗೆ ಮಾಸಿದ ಬಟ್ಟೆಯೆಂದೂ ಜನರು ಹೇಳುವ್ರದುಂಟು. ಹಾಗೆಯೆ ಶಿಕ್ಷಕನ ಮಕ್ಕಳು ಮಿಕ್ಕವರೆಲ್ಲರ ಮಕ್ಕಳಿಗಿಂತ ದಡ್ಡರಾಗಿರುವ ಉದಾಹರಣೆಗಳೇ ಹೇರಳವಾಗಿರುವುವಂತೆ. ತನ್ನ ಮಕ್ಕಳ ವಿಷಯದಲ್ಲಿ ಶಿಕ್ಷಕನು ಇಂಥ ತಪ್ಪನ್ನು ಮಾಡಿದರೂ ಮಾಡಬಹುದು. ಆದರೆ ತಾನು ಶಿಕ್ಷಕನಷ್ಟೇ ಅಲ್ಲದೆ, ಬಾಲಕರ ಪಾಲಕನೂ ಆಗಿರುವನು ಎಂದು ಭಾವಿಸಿ ನಡೆಯುವ ಶಿಕ್ಷಕನು ತನ್ನ ವಿದ್ಯಾರ್ಥಿಗಳನ್ನು ಸರ್ವಾಂಗ ಪರಿಪೂರ್ಣ ರನ್ನಾಗಿ ಮಾಡಲು ಹಗಲಿರಳೂ ಯತ್ನಿಸುವನೆಂಬುದರಲ್ಲಿ ಯಾವ ಸಂದೇಹವೂ ತೋರಲಾರದು.

೭. **ಶಿಕ್ಷಕನೂ ಕಲಾಭಿಜ್ಞತೆಯೂ.**— ಶಿಕ್ಷಕನು ಕಲಾಭಿಜ್ಞ ನೆಂದರೆ ಚಿತ್ರಕಲೆ, ಸಂಗೀತ, ಶಿಲ್ಪ ಮೊದಲಾದುವುಗಳಲ್ಲಿ ಒಂದನ್ನೂ ಹಲವನ್ನೊ ಬಲ್ಲವನೆಂದಲ್ಲ; ತಾನು ಕೈಕೊಂಡ ಕಾರ್ಯವನ್ನು ಸುಗಮ ವಾಗಿಯೂ ಸುಲಲಿತವಾಗಿಯೂ ನೆರವೇರಿಸಬಲ್ಲವನೆಂದು ಅರ್ಥ. ನಿಂತು ಹೋದ ಗಡಿಯಾರವನ್ನು ಅಲ್ಲಾಡಿಸಿ ಎರಡು ನಿಮಿಷಗಳ ವರೆಗೆ ಮುಂದೆ ಸಾಗಿಸುವ ಮಾತು ಬೇರೆ. ಸರಿಯಾಗಿ ನಡೆಯುವಂತೆ ಅದನ್ನು ಸರಿಪಡಿ ಸುವ ಮಾತು ಬೇರೆ. ಶಿಕ್ಷಣಶಾಸ್ತ್ರದ ಜ್ಞಾನ ಮತ್ತು ಅನುಭವ ಇವೆರಡರ

ಸಂಗಮದಿಂದ ಒಳ್ಳೆಯ ಕಲಾಭಿಜ್ಞನಾದ ಶಿಕ್ಷಕನಾಗಬಹುದು. ಇವುಗಳ ಅಭಾವವಿದ್ದರೆ ನಿಂತ ಗಡಿಯಾರವನ್ನು ಅಲುಗಾಡಿಸಿ ನಾಲ್ಕಾರು ನಿಮಿಷಗಳವರೆಗೆ ಮಾತ್ರ ನಡೆಯುವಂತೆ ಮಾಡುವ ಅಂಗಡಿಕಾರನಂತೆ 'ಶಿಕ್ಷಕ' ನೆಂದು ಹೆಸರನ್ನಿಟ್ಟುಕೊಂಡ ಒಬ್ಬ ವ್ಯವಸಾಯಗಾರನೆಂಬ ದೋಷಕ್ಕೆ ಶಿಕ್ಷಕನು ಗುರಿಯಾಗಬಹುದು.

ಕಲಾಭಿಜ್ಞನಾದ ಶಿಕ್ಷಕನಾಗಬೇಕಾದರೆ ಅವನಿಗೆ ಕೆಳಗೆ ಹೇಳಿರುವ ಸಂಗತಿಗಳ ಜ್ಞಾನವಿರಬೇಕು; ಇಲ್ಲದಿದ್ದರೆ ಆತನು ಕಲಾಭಿಜ್ಞನ ಸೋಗು ಹಾಕಿದ ಸಾಮಾನ್ಯ ಮನುಷ್ಯನೆಂಬುದು ಸ್ಪಷ್ಟವಾಗುವುದು.

(೧) ವಿದ್ಯಾರ್ಥಿಗಳ ಮನಸ್ಸಿನ ಚಟುವಟಿಕೆಗಳ ಮರ್ಮವನ್ನು ತಿಳಿದಿರಬೇಕು. (೨) ತನ್ನ ವಿದ್ಯಾರ್ಥಿಗಳ ವೈಶಿಷ್ಟ್ಯಗಳನ್ನು ವೈಯಕ್ತಿಕವಾಗಿ ಅರಿತಿರಬೇಕು. (೩) ತನ್ನ ವಿದ್ಯಾರ್ಥಿಗಳ ಮನೋಬಲವನ್ನು ಅಳೆದು ನೋಡಿಕೊಂಡಿರಬೇಕು. ಒಣಗಿದ ಕಟ್ಟಿಗೆಯಿಂದ ಮತ್ತು ತಾಮ್ರದ ತಂತಿಗಳಿಂದ ಮಾಡಿದ ವೀಣೆಯನ್ನು ವೀಣಾವಾದನಪಟುವು ಮೀಂಟಿ ಇಂಚರದ ಅಲೆಗಳನ್ನು ಹೊರಹೊಮ್ಮಿಸಿ ಕೇಳುವವರನ್ನು ಮಂತ್ರಮುಗ್ಧರನ್ನಾಗಿ ಮಾಡುವಂತೆ ಕಲಾಭಿಜ್ಞನಾದ ಶಿಕ್ಷಕನು ಕ್ಷಣಮಾತ್ರದಲ್ಲಿ ತನ್ನ ಮುಂದಿರುವ ಮಗುಗಳ ಗುಟ್ಟುಗುರಿಗಳನ್ನು ಅರಿತುಕೊಂಡು ಅವುಗಳಿಗೆ ಅನುಗುಣವಾದ ವಾಚಾಲಹರಿಯನ್ನು ಹೊರಹೊಮ್ಮಿಸಿ ಯೋಗ್ಯ ಪ್ರಶ್ನೋತ್ತರಗಳಿಂದ ಅವರನ್ನು ನಗಿಸುತ್ತ ಸೊಗಸಾಗಿ ಪಾಠವನ್ನು ಸಾಗಿಸುವನು.

ವೀಣೆಯ ರಚನೆಯನ್ನು ಅರಿತುಕೊಂಡಿರುವ ವಾದನಪಟುವು ಹರಿದ ತಂತಿಯನ್ನು ಪರಕ್ಷಣದಲ್ಲಿಯೆ ಸರಿಪಡಿಸಿಕೊಂಡು ಮುಂದೆ ಸಾಗುವಂತೆ ಕಲಾಭಿಜ್ಞನಾದ ಶಿಕ್ಷಕನು ತನಗೊದಗಿದ ಪ್ರತಿಕೂಲ ಸನ್ನಿವೇಶದಿಂದ ಎಳ್ಳಷ್ಟೂ ಗಾಬರಿಯಾಗನು; ಅಲ್ಲದೆ ಪ್ರತಿಕೂಲ ಪರಿಸ್ಥಿತಿಯಿಂದ ಇನ್ನೊಂದು ಹೊಸತಾದ ಅನುಭವವನ್ನು ಪಡೆಯುವೆನೆಂಬ ಹೊಸ ಹುಮ್ಮಸದಿಂದ ಮುಂದೆಸಾಗುವನು.

ಶಿಕ್ಷಕನು ಕೆಲವೊಂದು ಕಟ್ಟುನಿಟ್ಟುಗಳನ್ನು ನಿರ್ಣಯಿಸಿಕೊಂಡು ಕೆಲಸವನ್ನು ಸಾಗಿಸಬಲ್ಲವನಾಗಿರಬೇಕೆಂದು ಕೆಲವರೂ, ಹಾಗೆ ನಿರ್ಬಂಧ

ಗಳ ಇರುಕಿನ ಕಣಿವೆಯಲ್ಲಿ ಸಾಗುವುದು ಸುಸಾಧ್ಯವಲ್ಲವೆಂದು ಮತ್ತೆ ಕೆಲವರೂ ಹೇಳುವರು. ಉಚ್ಚತರಗತಿಯ ಕಲಾಭಿಜ್ಞನಾದ ಶಿಕ್ಷಕನು ಗೊತ್ತುಗುರಿಯಿಲ್ಲದ ದಾರಿಯಲ್ಲಿ ಎಂದೂ ಸಾಗನು; ಮತ್ತು ತಾನೂ ತನ್ನ ವಿದ್ಯಾರ್ಥಿಗಳೂ ಕೂಡಿಯೇ ಬಿಕ್ಕಟ್ಟಿನ-ಇಕ್ಕಟ್ಟಿನ ದಾರಿಯಲ್ಲಿಯೂ ತಡೆಯಿಲ್ಲದೆ ಸಾಗಿ ತಮ್ಮ ಗುರಿಯನ್ನು ಖಂಡಿತವಾಗಿ ಮುಟ್ಟುವರು. ಶಿಕ್ಷಣವು ಶಿಕ್ಷಕನ ಸ್ವಗತಭಾಷಣವಲ್ಲ. ನಾಟ್ಯರಂಗದಲ್ಲಿ ಅಭಿನಯಿಸಿ ಮಾತಾಡಿ ಪ್ರೇಕ್ಷಕರಿಂದ ತಕ್ಕ ಪ್ರತಿಫಲವನ್ನು ಪಡೆಯುವಂಥ ಪಾತ್ರಾಭಿನಯದ ಕೌಶಲ.

ಶಿಕ್ಷಕನು ವಿದ್ಯಾರ್ಥಿಗಳ ವೈಯಕ್ತಿಕತೆಯನ್ನು ಅರಿತಿರಬೇಕು. ವಿದ್ಯಾರ್ಥಿಗಳನ್ನು ಅರಿತುಕೊಂಡು ಅವರನ್ನು ಅನುಸರಿಸಿ ಸಾಗಿದರೆ ಮಾತ್ರ ಶಿಕ್ಷಕನಿಗೆ ವಿದ್ಯಾರ್ಥಿಗಳಿಂದ ತಕ್ಕ ಪ್ರೋತ್ಸಾಹ-ಪ್ರತಿಫಲಗಳು ದೊರೆಯುವುವು.

೮. **ಶಿಕ್ಷಕನೂ ವಿನಯಶೀಲತ್ವವೂ:—** ವಿದ್ಯಾರ್ಥಿಗಳಿಗೆ ಕಲಿಸುವುದು ಅಥವಾ ಶಿಕ್ಷಣವನ್ನು ಕೊಡುವುದು-ಎಂದರೆ, ಶಿಕ್ಷಕನು ತನ್ನ ವ್ಯಕ್ತಿತ್ವವನ್ನು ಅವರಲ್ಲಿ ಒಡಮೂಡಿಸುವುದು-ಎಂದು ಹೇಳುವುದುಂಟು. ಉತ್ತಮ ಶಿಕ್ಷಕನು ತನ್ನ ವರ್ಗದಲ್ಲಿ ಇದ್ದೂ ಇಲ್ಲದಿರುವನೆಂತೆ. ಹಡಗದ ಚುಕ್ಕಾಣಿಯವನು ಎಲ್ಲಿಯೊ ಒಂದು ತುದಿಯ ಮೂಲೆಯಲ್ಲಿ ಕುಳಿತಿರುವನು; ಅವನು ತಿರುಗಿಸುವ ಚಕ್ರವಂತೂ ಯಾರಿಗೂ ಕಾಣದು. ಆದರೂ ಆತನ ಇಚ್ಛಾನುಸಾರಿಯಾದ ಆ ಚಕ್ರದ ಚಾಲನೆಗೆ ಅನುಸರಿಸಿ ಇಡಿಯ ಹಡಗ ಯೋಗ್ಯ ದಿಕ್ಕಿನಲ್ಲಿ ಸಾಗುವುದೆಂಬುದನ್ನು ಯಾರೂ ಅಲ್ಲಗಳೆಯರು. ಇದೇ ರೀತಿಯಾಗಿ ಶಿಕ್ಷಕನ ಚಿಕ್ಕಪುಟ್ಟ ಚಲನೆವಲನೆಗಳನ್ನೂ ಅಲ್ಪಸ್ವಲ್ಪವಾದ ಮಾತುಗಳನ್ನೂ ಅನುಸರಿಸಿ ಇಡಿಯ ವರ್ಗದ ಕಾರ್ಯಕಲಾಪಗಳು ನಡೆದು ವಿದ್ಯಾರ್ಥಿಗಳು ಸುಸಂಸ್ಕೃತರಾಗಲು ಅನುಕೂಲವಾಗುವುದು. ಶಿಕ್ಷಕನ ಶ್ರಮವೂ ವರ್ಗದ ಸುಪರಿಣಾಮವೂ ವ್ಯಸ್ತಪ್ರಮಾಣದಲ್ಲಿರುವುವೆಂದರೆ ತಪ್ಪಾಗದು. ಶಿಕ್ಷಕನು ಎಷ್ಟು ಹೆಚ್ಚು ಮಾತಾಡಿ ದಣಿಯುತ್ತಿದ್ದರೆ ವರ್ಗವು ಅಷ್ಟು ಅಸಮರ್ಪಕವಾಗಿ ನಡೆದಿದೆ

ಯೆಂದೂ ಶಿಕ್ಷಕನು ಕಡಮೆಯ ಶ್ರಮದಿಂದ ಪಾಠವನ್ನು ಸಾಗಿಸಿದರೆ ವರ್ಗವು ಅಷ್ಟು ಸುಸಂಘಟಿತವಾಗಿ ಸಾಗಿದೆಯೆಂದೂ ನಿರ್ಣಯಿಸಬಹುದು. ಶಿಕ್ಷಕನೂ ವಿದ್ಯಾರ್ಥಿಗಳೂ ಏಕಾಗ್ರಚಿತ್ತರಾಗಿರಬೇಕು. ಪರಸ್ಪರ ಭಾವೋದ್ರೇಕದಿಂದ ಪ್ರಸನ್ನಚಿತ್ತರಾಗಿರಬೇಕು.

ಶೈಕ್ಷಣಿಕ ಸಾಧನಗಳೆಲ್ಲ ಸರಿಯಾಗಿದ್ದರೆ ಶಿಕ್ಷಣವು ತಾನಾಗಿಯೇ ಸರಿಯಾಗಿ ಸಾಗುವುದೆಂದು ಕೆಲವು ಶಿಕ್ಷಣಾಧಿಕಾರಿಗಳ ಅಭಿಪ್ರಾಯವಿದೆ. ಆದರೆ ಇದು ಸರಿಯಲ್ಲವೆಂದೆನಿಸುವುದು. ಏಕೆಂದರೆ ಬಿದಿರಿನ ಕೊಳವೆಯಲ್ಲಿ ಗಾಳಿಯಾಡಿದರೆ ನಾದವುಂಟಾಗುವುದು; ಆದರೆ ಬಿದಿರಿನ ಕೊಳವೆ, ಗಾಳಿ–ಇವೆರಡೂ ವಿಪುಲವಾಗಿದ್ದರೂ, ಆ ಕೊಳವೆಯನ್ನು ಕೊಳಲನಾಗಿಸಿ, ಅದರಲ್ಲಿ ಗಾಳಿಯನ್ನಾಡಿಸಿ, ನಾದವನ್ನುಂಟುಮಾಡಿ, ಕೇಳುವವರನ್ನು ನಲಿದಾಡಿಸುವ ವೇಣುವಾದನ-ವಿಶಾರದನ ಕಾರ್ಯವು ಶಿಕ್ಷಕನದು. ವಿಷಯಜ್ಞಾನಕ್ಕೂ ವಿದ್ಯಾರ್ಥಿಗಳಿಗೂ ನಡುವೆ ಶಿಕ್ಷಣಕಲಾಕೋವಿದನೂ ವಿನಯಶೀಲನೂ ಆದ ಶಿಕ್ಷಕನ ಸ್ಥಾನವಿದ್ದು ಅವನೇ ಇಂಥ ಕಲಾನೈಪುಣ್ಯವನ್ನು ಪ್ರಕಟಿಸುವನು.

**೯. ಶಿಕ್ಷಕನೂ ನಟನೆಯೂ:—** ಶಿಕ್ಷಕನು ಒಬ್ಬ ಮನುಷ್ಯನು; ಮನುಷ್ಯಮಾತ್ರನಲ್ಲಿ ಗುಣದೋಷಗಳೆರಡೂ ಇರುವವು. ದೋಷರಹಿತವಾದ ವ್ಯಕ್ತಿಯು ಕೇವಲ ಕಾಲ್ಪನಿಕವಾದುದು. ಆದುದರಿಂದ ಶಿಕ್ಷಕನು ತನ್ನ ದೋಷಗಳನ್ನೆಲ್ಲ ಮುಚ್ಚಿಟ್ಟು ತನ್ನ ಗುಣಗಳನ್ನಷ್ಟೇ ವಿದ್ಯಾರ್ಥಿಗಳ ಮುಂದಿಡುವುದು ಹಿತಕರವೋ ಹೇಗೆಂಬುದು ಒಂದು ಪ್ರಶ್ನೆ. ವಿದ್ಯಾರ್ಥಿಗಳ ಹಿತದ ದೃಷ್ಟಿಯಿಂದ ಈ ಮಾತು ಆವಶ್ಯಕವೇ ಸರಿ. ಉದಾ:— ಶಿಕ್ಷಕನು ತನ್ನ ಪ್ರಾಪಂಚಿಕ ತೊಂದರೆಗಳಿಂದ ನಿರ್ವಿಣ್ಣನಾದಾಗ ಅದೇ ಅವಸ್ಥೆಯಲ್ಲಿಯೇ ತನ್ನ ವಿದ್ಯಾರ್ಥಿಗಳ ಮುಂದೆ ಹೋಗದೆ, ಕೃತ್ರಿಮವಾದ ಆನಂದವನ್ನು ಬೀರುತ್ತ ವಿದ್ಯಾರ್ಥಿಗಳ ಎದುರಿನಲ್ಲಿ ನಿಲ್ಲಬೇಕು.

ಶಿಕ್ಷಕನು ತನ್ನ ದೋಷಗಳನ್ನು ಬಚ್ಚಿಡಲು ಆತಂಕವಿಲ್ಲ; ಆದರೆ ತನ್ನಲ್ಲಿ ಇಲ್ಲದ ಗುಣಗಳನ್ನು ಇರುವಂತೆ ತೋರಿಸುವುದು ಸರಿಯಲ್ಲವೆಂದು ಕೆಲವರ ಅಭಿಪ್ರಾಯವಿದೆ. ಇದು ಮೇಲಿನ ಪ್ರಶ್ನೆಯ ಇನ್ನೊಂದು

ರೂಪವು; ಇದ್ದುದನ್ನು ಇಲ್ಲದಂತೆ ತೋರಿಸುವುದಕ್ಕೆ ಒಪ್ಪುವವರು ಇಲ್ಲದುದನ್ನು ಇದ್ದಂತೆ ತೋರಿಸುವುದಕ್ಕೆ ಒಪ್ಪಲೇ ಬೇಕಾಗುವುದು.

ಇಲ್ಲದುದನ್ನು ಇದ್ದಂತೆ ತೋರಿಸುವುದಕ್ಕೂ ಇದ್ದುದನ್ನು ಬಚ್ಚಿಡುವುದಕ್ಕೂ ಕುಶಲತೆ ಬೇಕು. ಇದರಲ್ಲಿ ಶಿಕ್ಷಕನ ನಟನೆಯ ಕೌಶಲ್ಯವು ವ್ಯಕ್ತವಾಗುವುದು. ಈ ಸಂದರ್ಭದಲ್ಲಿ ಶಿಕ್ಷಕನು ಕುಶಲ ನಟನಾಗದೆ ಇದ್ದರೆ ಎಲ್ಲವೂ ಕೆಟ್ಟು, ಹುಳುಕು ಹೊರಬಿದ್ದು, ಪರಿಣಾಮವು ವಿಪರೀತವಾಗುವುದು. ತನಗೆ ಅಭಿರುಚಿಯಿಲ್ಲದ ವಿಷಯವನ್ನು ಕಲಿಸಲು ಹೊರಟ ಶಿಕ್ಷಕನು ಕೃತ್ರಿಮತೆಯಿಂದ ತನ್ನಲ್ಲಿ ಇಲ್ಲದ ಉತ್ಸಾಹವನ್ನು ನಟಿಸುತ್ತ ಪಾಠವನ್ನು ಸಾಗಿಸುತಿರುವಾಗ ಆಕಳಿಸತೊಡಗಿದರೆ, ಕ್ಷಣಮಾತ್ರದಲ್ಲಿ ಎಲ್ಲವೂ ಬಯಲಾಗಿ ಬಿಡುವುದು. ಇಂಥ ಮೋಸವಾಗದಂತೆ ಶಿಕ್ಷಕನು ಎಚ್ಚರದಿಂದಿರಬೇಕು.

ಹಲಕೆಲವು ಸಂದರ್ಭಗಳಲ್ಲಿ ಇಂಥ ನಟನೆಯಿಂದಲೂ ಕ್ವಚಿತ್ತಾಗಿ ಪ್ರಯೋಜನವಾಗಬಹುದು. ಮುಂಗೋಪಿಯಾದ ಶಿಕ್ಷಕನು ತನ್ನ ಕೋಪವನ್ನು ಹತ್ತಿಕ್ಕಲು ಪ್ರಯತ್ನಿಸುತ್ತಿರುವಾಗ ಒಮ್ಮೊಮ್ಮೆ ಆಕಸ್ಮಿಕವಾಗಿ ಆ ನಟನೆಯು ಬಯಲಾದರೂ ವಿಚಾರವುಳ್ಳ ವಿದ್ಯಾರ್ಥಿಗಳು ಶಿಕ್ಷಕನ ಮನೋವೃತ್ತಿಯನ್ನು ತಿಳಿದುಕೊಂಡು ತಾವೂ ತಮ್ಮಲ್ಲಿರುವ ದುರಭ್ಯಾಸಗಳನ್ನು ಬಿಟ್ಟುಬಿಡಲು ಯತ್ನಿಸಬಹುದು.

ಹೀಗೆ, ಶಿಕ್ಷಕರಷ್ಟೇ ಬೇರೆ ಬೇರೆ ವ್ಯಕ್ತಿತ್ವವನ್ನು ಧರಿಸಬೇಕಾಗುವುದೆಂದು ಭಾವಿಸಕೂಡದು. ಪ್ರತಿವ್ಯಕ್ತಿಯೂ ಪ್ರತಿದಿನದ ವ್ಯವಹಾರದಲ್ಲಿ ಹಲವು ಸಾರೆ ತನ್ನ ರೂಪವನ್ನು ಬದಲಿಸಬೇಕಾಗುವುದು; ನ್ಯಾಯಾಧೀಶನು ತನ್ನ ನ್ಯಾಯಾಸನದಲ್ಲಿ ಕುಳಿತಿರುವಾಗ ನಡೆಯುವ ರೀತಿ—ನೀತಿಗಳೇ ಬೇರೆ; ಮನೆಯಲ್ಲಿ ಮಕ್ಕಳೊಡನೆ ಆಡುವಾಗ ಅವನ ನಡೆನುಡಿಗಳೇ ಬೇರೆ. ಅದೇ ನ್ಯಾಯಾಧೀಶನು ಅಂಗಡಿಗೆ ಹೋಗಿ ಬಟ್ಟೆಗಳನ್ನು ಕೊಳ್ಳುವಾಗ, ಶಿಂಪಿಗನ ಮುಂದೆ ನಿಂತಾಗ, ನಾವಲಿಗನೆದುರಿಗೆ ಕುಳಿತಿರುವಾಗ ಈ ಬಗೆಯ ಬೇರೆ ಬೇರೆ ಸಂದರ್ಭಗಳಲ್ಲಿ ಬೇರೆ ಬೇರೆ ರೀತಿ ನೀತಿಗಳಿಂದ ನಡೆಯಬೇಕಾಗುವುದು. ಇದೇ ರೀತಿಯಾಗಿ ಶಿಕ್ಷಕನೂ ಬೇರೆ ಬೇರೆ

ಸಂದರ್ಭಗಳಲ್ಲಿ ಬೇರೆ ಬೇರೆ ನಡೆನುಡಿಗಳನ್ನೂ ರೀತಿನೀತಿಗಳನ್ನೂ ಅನುಸರಿಸಬೇಕಾಗುವುದು; ಎಂದರೆ, ಅವನ ನಡೆವಳಿಕೆಯು ನಾಟಕದೊಳಗಿನ ನಟನ ಅಭಿನಯದಂತೆ ಆಗಾಗ ಬದಲಾಗಬೇಕಾಗುವುದು. ವರ್ಗದ ಕೋಣೆಯಲ್ಲಿ, ಆಟದ ಬಯಲಿನಲ್ಲಿ, ವಿದ್ಯಾರ್ಥಿಯ ಮನೆಯಲ್ಲಿ, ಅವನ ಪಾಲಕರ ಸಹವಾಸದಲ್ಲಿ ಒಂದೇ ರೀತಿಯಾಗಿ ನಡೆದರೆ, ಅವನು ಕೀಲಿಲ್ಲದ ಕಟ್ಟಿಗೆಯ ಗೊಂಬೆಯಂತೆ ಮುಗ್ಗರಿಸಿ ನಗೆಗೀಡಾಗಬೇಕಾದೀತು.

ಸೀತಾಸ್ವಯಂವರ ನಾಟಕದಲ್ಲಿ ರಾಮನ ಪಾತ್ರವನ್ನು ವಹಿಸಿದ ನಟನು ರಾಮನಂತೆಯೆ ನಡೆಯಬೇಕು. ಆಗಿನ ರಾಮನ ಮನೋಭಾವನೆಗಳನ್ನೆಲ್ಲ ಅರಿತುಕೊಂಡು ಅದರಲ್ಲಿ ತನ್ಮಯನಾದವನೇ ಉತ್ತಮ ನಟನೆನಿಸಿಕೊಳ್ಳಬಹುದಲ್ಲದೆ ಆ ಸಂದರ್ಭದ ರಾಮನ ಮಾತುಗಳನ್ನಷ್ಟೇ ಹೇಳುವವನು ಅಥವಾ ರಾಮನ ಉಡುತೊಡುಗೆಗಳನ್ನಷ್ಟೇ ಹಾಕಿಕೊಂಡವನು ಆ ಪಾತ್ರವನ್ನು ಸರಿಯಾಗಿ ಅಭಿನಯಿಸಿ ಪ್ರೇಕ್ಷಕರ ಮನಸ್ಸನ್ನು ಸೆಳೆದುಕೊಳ್ಳಲಾರನೆಂಬುದನ್ನು ಮರೆಯಕೂಡದು. ಇದೇ ರೀತಿಯಾಗಿ ಶಿಕ್ಷಕನ ಪಾತ್ರವನ್ನು ಹೃತ್ಪೂರ್ವಕವಾಗಿ ಅಭಿನಯಿಸುವ ವ್ಯಕ್ತಿಯೂ ಕಾಲಾಂತರದಲ್ಲಿ ಒಳ್ಳೆಯ ಶಿಕ್ಷಕನಾಗಿ ಮಾರ್ಪಡುವ ಸಂಭವವುಂಟು.

**೧೦. ಶಿಕ್ಷಕನೂ ಶಿಸ್ತುಗಾರಿಕೆಯೂ.—** ವರ್ಗದ ಸುವ್ಯವಸ್ಥೆಯನ್ನು ಕಾದುಕೊಂಡು ಎಲ್ಲ ವಿದ್ಯಾರ್ಥಿಗಳನ್ನು ವೇಳೆಯ ಅಪವ್ಯಯವಾಗದಂತೆ ಯೋಗ್ಯ ಕಾರ್ಯದಲ್ಲಿ ತೊಡಗಿಸಬಲ್ಲ ಶಿಕ್ಷಕನೇ ಒಳ್ಳೆಯ ಶಿಕ್ಷಕನೆಂದು ಹೇಳುವುದುಂಟು. ಇದೇನು ಹುಟ್ಟು ಗುಣವೋ, ಕಲಿತರೆ ಬರಬಹುದೋ, ಎಂಬುದೊಂದು ಪ್ರಶ್ನೆ. ವಿದ್ಯಾರ್ಥಿಗಳು ಶಿಕ್ಷಕನ ಅಪ್ಪಣೆಯನ್ನು ಏಕೆ ಪಾಲಿಸುವರು? ಶಿಕ್ಷಕನ ಶಾರೀರಿಕ ಶಕ್ತಿಯಿಂದಲೋ? ಜ್ಞಾನಬಲದಿಂದಲೋ? ಶಿಕ್ಷಕನ ವಿಷಯದಲ್ಲಿ ವಿದ್ಯಾರ್ಥಿಗಳು ತೋರುವ ಗೌರವ-ಆದರ-ಬುದ್ಧಿಯಿಂದಲೇ ಶಾಲೆಯಲ್ಲಿ ಶಿಸ್ತು ಬರುವುದೆಂದು ಹೇಳುವವರಿದ್ದಾರೆ.

ಶಿಕ್ಷಕನ ಶಾರೀರಿಕ ದಕ್ಷತೆಯಿಂದಾಗಲಿ, ಕಟ್ಟಳೆಗಳ ಮತ್ತು ದಂಡನೆಗಳ ಭಯದಿಂದಾಗಲಿ, ಪಾರಿತೋಷಕಗಳ ಆಸೆಯಿಂದಾಗಲಿ,

ಶಿಸ್ತನ್ನು ಕಾದುಕೊಳ್ಳುವುದು ಉತ್ತಮ ಮಾರ್ಗವಲ್ಲ. ಶಿಕ್ಷೆಯ ಮೇಲೆಯೇ ಕೈಯೂರುವ ಶಿಕ್ಷಕನ ವರ್ಗವು ವಿದ್ಯಾರ್ಥಿಗಳು ತುಸು ಧಿಟ್ಟರಾದ ಕೂಡಲೆ ಕಾಳಗದ ಕಣವಾಗುವ ಸಂಭವವುಂಟು. ಇನ್ನು ಶಿಕ್ಷಕನು ತನ್ನ ಜ್ಞಾನಬಲವನ್ನು ಅವಲಂಬಿಸಿದರೆ, ಪುಸ್ತಕೀಯ ಜ್ಞಾನಕ್ಕಿಂತಲೂ ವ್ಯಾವಹಾರಿಕ ಚತುರತೆಗೆ ವಿದ್ಯಾರ್ಥಿಗಳು ಹೆಚ್ಚಾಗಿ ವಶರಾಗುವರೆಂಬುದನ್ನು ಮರೆಯಲಾಗದು. ಗಂಡುಮಕ್ಕಳಿಗಿಂತಲೂ ಹೆಣ್ಣುಮಕ್ಕಳಲ್ಲಿ ಶಿಕ್ಷಕನ ವಿಷಯವಾಗಿ ಆದರಬುದ್ಧಿಯು ಹೆಚ್ಚಾಗಿರುವುದು. ಇದೊಂದು ಅವರ ವಿಶಿಷ್ಟ ಗುಣವು. ಶಿಕ್ಷಕನು ತನ್ನ ಜ್ಞಾನ ಮತ್ತು ಅನೂಚಾನವಾದ ಕರ್ತವ್ಯನಿಷ್ಠೆ ಇವುಗಳ ಮೂಲಕವಾಗಿಯೇ ತನ್ನ ವಿದ್ಯಾರ್ಥಿಗಳ ಆದರಬುದ್ಧಿಯನ್ನು ಬೆಳೆಯಿಸಿಕೊಂಡು ವರ್ಗದಲ್ಲಿ ಶಿಸ್ತನ್ನು ಕಾದುಕೊಳ್ಳಬೇಕೆಂದರೆ ಹೆಚ್ಚಾಗಿ ಒಪ್ಪುವುದು.

ಶಿಕ್ಷಕನ ಅಧಿಕಾರವು ಮುಖ್ಯವಾಗಿ ಎರಡು ಮೂಲಾಧಾರಗಳನ್ನು ಹೆಚ್ಚಾಗಿ ಅವಲಂಬಿಸಿರುವುದು.

(೧) ಸಮಾಜದಲ್ಲಿ ಅವನ ಬಗೆಗೆ ಇರುವ ಆದರದಿಂದ ಉಂಟಾಗುವ ವರ್ಚಸ್ಸು.

ವಿದ್ಯಾರ್ಥಿಗಳು ಸ್ವಾಭಾವಿಕವಾಗಿ ಶಿಕ್ಷಕನಿಗೆ ವಿಧೇಯರಾಗಿ ನಡೆಯುವರು. ವಿದ್ಯೆಯನ್ನು ಪ್ರೀತಿಯಿಂದ ದೊರಕಿಸಲೇಬೇಕೆಂಬ ಪ್ರಬಲವಾದ ಹವಣಿಕೆ, ಇದರ ಜೊತೆಗೆ ವಿದ್ಯಾಶಾಖೆಯ ಗೌರವ, ವ್ಯವಸ್ಥೆ, ಮೇಲಧಿಕಾರಿಗಳ ವಿಚಾರಣೆ, ಮುಂತಾದ ಬಾಹ್ಯಾಡಂಬರಗಳು ಸೇರಿ, ವಿದ್ಯಾರ್ಥಿಗಳು ಶಿಕ್ಷಕನ ಅಧಿಕಾರವನ್ನು ಒಪ್ಪಿಕೊಳ್ಳುವರು; ವಿದ್ಯಾರ್ಜನೆಯಾಗಬೇಕಾದರೆ ಶಿಕ್ಷಕನಿಗೆ ವಿಧೇಯರಾಗಿ ನಡೆಯಲೇಬೇಕೆಂಬ ಒತ್ತಾಯದ ಭಾವನೆಯೂ ಶಿಕ್ಷಕನ ವಿಷಯದ ಗೌರವದ ಭಾವನೆಯೂ ಸೇರಿ ವಿದ್ಯಾರ್ಥಿಗಳು ಅವನೊಡನೆ ವಿನೀತರಾಗಿ ನಡೆಯುವರು.

(೨) ಶಿಕ್ಷಕನ ವ್ಯಕ್ತಿತ್ವದ ಮೂಲಕವಾಗಿ ಹುಟ್ಟುವ ಆಂತರಿಕ ವರ್ಚಸ್ಸು.

ಮೇಲೆ ಹೇಳಿದ ಹೊರಗಿನ ಆಡಂಬರಗಳನ್ನೆಲ್ಲ ಬಿಟ್ಟ ಬಳಿಕ ಶಿಕ್ಷಕನಿಗೆ ಉಳಿಯುವುದೆಂದರೆ ಅವನ ವ್ಯಕ್ತಿತ್ವ. ಹಲಕೆಲವು ಶಿಕ್ಷಕರು ವರ್ಗಕ್ಕೆ ಬಂದ ಕೂಡಲೆ ವರ್ಗವು ತಾನಾಗಿಯೇ ಸುವ್ಯವಸ್ಥಿತವಾಗಿ ಮಾರ್ಪಡುವುದು; ಕೆಲವು ಶಿಕ್ಷಕರಿಗೆ ತಮ್ಮ ವರ್ಗದಲ್ಲಿ ಯಾವ ಮಾರ್ಗದಿಂದಲೂ ಶಿಸ್ತನ್ನು ಕಾದುಕೊಳ್ಳಲು ಸಾಧ್ಯವೇ ಆಗದು. ಇದಕ್ಕೆ ಅವರ ಉತ್ತಮ ಮಧ್ಯಮ ವ್ಯಕ್ತಿತ್ವಗಳೇ ಕಾರಣ. ಕಲಿತರೆ ಶಿಕ್ಷಕನಾಗಲಾರನೆಂದೂ ಒಳ್ಳೆಯ ಶಿಕ್ಷಕನು ಹುಟ್ಟಿ ಬರುವನೆಂದೂ ಹೇಳುವವರಿದ್ದಾರೆ. ಶಿಕ್ಷಣ ಸಂಸ್ಥೆಗಳು ಶಿಕ್ಷಕರ ಹುಟ್ಟು ಗುಣಗಳನ್ನು ಬೆಳೆಯಿಸಿ ಹೆಚ್ಚಾಗಿ ಒಳ್ಳೆಯ ಶಿಕ್ಷಕರನ್ನು ಸಿದ್ಧಮಾಡುವ ಕೆಲಸವನ್ನು ಮಾಡುವುವು. ಈ ಕೆಳಗಿನ ಸೂಚನೆಗಳು ವರ್ಗದಲ್ಲಿ ಶಿಸ್ತನ್ನು ಕಾದುಕೊಳ್ಳುವುದಕ್ಕೆ ಸಹಾಯಕವಾಗಬಹುದು.

(೧) ವಿದ್ಯಾರ್ಥಿಗಳಿಗೆ ಕಡಿಮೆಯೆನಿಸದಷ್ಟು ಕೆಲಸದಲ್ಲಿ ವಿದ್ಯಾರ್ಥಿಗಳನ್ನು ತೊಡಗಿಸಿರುವುದು.

(೨) ವರ್ಗದ ಬಾಹ್ಯವ್ಯವಸ್ಥೆಯನ್ನು ಸರಿಯಾಗಿಟ್ಟಿರುವುದು.

(೩) ವರ್ಗದ ಅವ್ಯವಸ್ಥೆಯ ಕಾರಣಗಳನ್ನು ಮುಂಗಂಡು, ಪ್ರತಿಬಂಧೋಪಾಯದ ಪೂರ್ವಸಿದ್ಧತೆಯನ್ನು ಮಾಡಿಕೊಂಡಿರುವುದು.

(೪) ಉಗ್ರವಾದ ಶಿಕ್ಷೆಯ ಭಯವನ್ನು ತೋರಿಸದಿರುವುದು.

(೫) ವರ್ಗದ ಅವ್ಯವಸ್ಥೆಯಿಂದ ಶಿಕ್ಷಕನು ತಾಳ್ಮೆಯನ್ನು ಕಳೆದುಕೊಳ್ಳದಿರುವುದು.

(೬) ಶಿಕ್ಷಕನು ವಿದ್ಯಾರ್ಥಿಗಳ ಕೀಟಕತನವನ್ನೂ ಹುಡುಗಾಟಿಕೆಯನ್ನೂ ಕೂಡಲೆ ಕಂಡುಹಿಡಿಯುವಷ್ಟು ತಾನು ದಕ್ಷನಿರುವನೆಂಬುದನ್ನೂ ಅಂಥ ಅಪರಾಧಗಳಿಗೆ ತಕ್ಕ ದಂಡನೆಯಾಗುವುದು ನಿಶ್ಚಯವೆಂಬುದನ್ನೂ ವಿದ್ಯಾರ್ಥಿಗಳು ಮನಗಂಡಿರುವಂತೆ ಮಾಡುವುದು.

ಶಿಕ್ಷಕನು ಕಣ್ಣಸನ್ನೆಯಿಂದಲೇ ತನ್ನ ವರ್ಗವನ್ನಾಳುವನೆಂದು ಹೇಳುವರು. ಆ ಕಣ್ಣಿಗೆ ಅಂಥ ಶಕ್ತಿಯನ್ನು ತಂದುಕೊಡುವ ಅಂತಃಶಕ್ತಿಯಿದ್ದರೆ ಮಾತ್ರ ಈ ಮಾತು ನಿಜ. ಅಂಜುಗುಳಿಯಾದ

ಒಬ್ಬ ಬಾಲಕನು ಶಿಕ್ಷಕನ ಬೆದರುಗಣ್ಣಿನಿಂದ ಗಾಬರಿಯಾಗುವನು. ಇನ್ನೊಬ್ಬ ತುಂಟ ಮಗುವು ತಾನೂ ಅದಕ್ಕೆ ಪ್ರತಿಯಾಗಿ ಬೆದರುಗಣ್ಣನ್ನು ಮಾಡಿ ತೋರಿಸಬಹುದು.

ವರ್ಗದೊಳಗಿನ ವಿದ್ಯಾರ್ಥಿಗಳ ಸಂಖ್ಯೆಯ ಪ್ರಮಾಣದ ಮೇಲೆಯೇ ಅದರ ಶಿಸ್ತು ಅವಲಂಬಿಸಿರುವುದು. ಕೆಲವು ಶಿಕ್ಷಕರು ಕೆಲವೊಂದು ನಿಯಮಿತ ಸಂಖ್ಯೆಯ ವರ್ಗಗಳನ್ನಷ್ಟೇ ಅಂಕಿತದಲ್ಲಿಟ್ಟುಕೊಳ್ಳಬಹುದು. ಶಿಕ್ಷಕನ ಆಳಿಕೆಯ ಸಾಮರ್ಥ್ಯವು ಅವನ ವ್ಯಕ್ತಿತ್ವವನ್ನೇ ಹೆಚ್ಚಾಗಿ ಅವಲಂಬಿಸುವುದು. ಅದನ್ನು ಕೆಲವೊಂದು ನಿಯಮಗಳಿಂದ ವಿವರಿಸಿ ಹೇಳಲು ಸಾಧ್ಯವಿಲ್ಲ.

**೧೧. ಶಿಕ್ಷಕನೂ ವಿನೋದಗಾರಿಕೆಯೂ.**— ವಿನೋದಪ್ರಿಯತೆಯು ಮನುಷ್ಯನ ಮನಸ್ಸಿನ ಒಂದು ಸಹಜಧರ್ಮ. ಅದಕ್ಕನುಗುಣವಾಗಿ ಶಿಕ್ಷಕನು ಪ್ರಸಂಗಾನುಸಾರವಾಗಿ ಹಾಸ್ಯವಿನೋದಗಳನ್ನು ಹುಟ್ಟಿಸುವುದರಿಂದ ಅವನ ವರ್ಗದ ಕಾರ್ಯಗಳು ಸುಸೂತ್ರವಾಗಿ ಸಾಗಬಹುದು. ಶ್ರಮಪರಿಹಾರಕ್ಕೆ ವಿನೋದವು ಸಹಕಾರಿಯಾಗಿರುವುದರಿಂದ ಹೆಚ್ಚಿನ ಶ್ರಮವಾಗದೆ ಪಾಠವನ್ನು ಸಾಗಿಸುವುದಕ್ಕೆ ಶಿಕ್ಷಕನ ವಿನೋದಶೀಲತೆಯು ಸಹಾಯಕವಾಗುವುದು. ವಿನೋದದ ಅತಿರೇಕವಾದರೆ, ಅದು ಅಪ್ರಾಸಂಗಿಕವಾದರೆ, ವಿನೋದವು ಇನ್ನೊಬ್ಬರ ಮನಸ್ಸನ್ನು ನೋಯಿಸುವುದಕ್ಕೆ ಕಾರಣವಾದರೆ, ಅಥವಾ ಶಿಕ್ಷಕನು ತನ್ನ ವಿನೋದಕ್ಕೆ ಸ್ವಾಭಾವಿಕವಾದಷ್ಟಕ್ಕಿಂತ ಹೆಚ್ಚಿನ ಪ್ರತಿಫಲವನ್ನು ಅಪೇಕ್ಷಿಸಿದರೆ, ಎಲ್ಲವೂ ಕೆಟ್ಟುಹೋಗುವುದು.

ಶಿಕ್ಷಕನು ಒಳ್ಳೆಯ ಸ್ವಭಾವದವನಿರಬೇಕು. ಯಾವಾಗಲೂ ನಗುಮೊಗದಿಂದಿರಬೇಕು. ಗಂಟುಮೋರೆಯ ಶಿಕ್ಷಕನು ಸದಯಾಂತಃಕರಣಿಯಾಗಿದ್ದರೂ ಚಿಕ್ಕಮಕ್ಕಳು ಅವನ ಬಳಿಗೆ ಹೋಗಲು ಅಂಜುವರು.

ವರ್ಗದಲ್ಲಿ ವಿನೋದದ ಮಾತುಗಳನ್ನಾಡುವಾಗ ಕೆಲವೊಂದು ವ್ಯಕ್ತಿಯ ಮನಸ್ಸಿಗೆ ಹತ್ತುವಂತೆ ಟೀಕೆಯನ್ನು ಮಾಡುವುದು ಒಳಿತಲ್ಲ. ಇಂಥ ವಿನೋದಕರವಾದ ಟೀಕೆಗಳು ಯಾವಾಗಲೂ ಸಾಮಾನ್ಯವಾಗಿರ

ಬೇಕಲ್ಲದೆ ವೈಯಕ್ತಿಕವಾಗಿರಕೂಡದು. ಎಳೆಯ ಮಕ್ಕಳ ಮನಸ್ಸನ್ನು ನೋಯಿಸುವಂಥ ಟೀಕೆಗಳಿಂದಂತೂ ವಿಪರೀತ ಪರಿಣಾಮವಾಗುವುದು. ಅವಿವೇಕಿಗಳಾದ ವಿದ್ಯಾರ್ಥಿಗಳ ದೋಷವನ್ನೆತ್ತಿ ಟೀಕೆಯನ್ನು ಮಾಡುವುದರಿಂದ ಪ್ರಯೋಜನವಾಗದು. ಸಾಮಾನ್ಯ ಶಿಕ್ಷಕನು ಈ ಮಾರ್ಗವನ್ನು ಬಿಟ್ಟುಬಿಡುವುದೇ ಒಳಿತು. ಅಡ್ಡತಿಡ್ಡ ಮಾತಾಡಿ ಒಬ್ಬರ ಮನಸ್ಸನ್ನು ನೋಯಿಸುವುದಕ್ಕಿಂತ ಸರಳವಾಗಿ 'ನೀನು ಈ ಗುಣವನ್ನು ಬಿಟ್ಟುಬಿಡು' ಎಂದು ಸಿಟ್ಟುಮಾಡಿ ಹೇಳುವುದರಿಂದಲೇ ಒಳ್ಳೆಯ ಪರಿಣಾಮವಾಗುವ ಸಂಭವವುಂಟು. ಶಿಕ್ಷಕನು ತನ್ನ ಟೀಕೆಯನ್ನು ವಿದ್ಯಾರ್ಥಿಗಳನ್ನು ತಿದ್ದುವುದಕ್ಕಾಗಿ ಉಪಯೋಗಿಸಿಕೊಳ್ಳಬೇಕಲ್ಲದೆ ಅವರ ಮೇಲಿನ ಸೇಡುತೀರಿಸಿಕೊಳ್ಳುವುದಕ್ಕೆ ಎಂದೂ ಉಪಯೋಗಿಸಲಾಗದು. ವಿನೋದಪ್ರಿಯನಾದ ಶಿಕ್ಷಕನು ವಿದ್ಯಾರ್ಥಿಗಳಿಗೆ ಆನಂದವಾಗುವಂತೆ ಅವರನ್ನು ನಗಿಸುತ್ತ ಪಾಠಗಳನ್ನು ಸಾಗಿಸಬಹುದು; ಆದರೆ ವಿನೋದಕ್ಕೂ ಒಂದು ಮಿತಿಯಿರಬೇಕು. ಮಾತುಮಾತಿಗೆ ಕೃತ್ರಿಮ ವಿನೋದವನ್ನು ತರುವುದಾಗಲಿ, ಮಿತಿಯನ್ನು ಮೀರಿ ಅದು ಬೀಭತ್ಸಸ್ವರೂಪಕ್ಕೆ ಇಳಿಯುವುದಾಗಲಿ, ಅಪಹಾಸಕ್ಕೆ ಕಾರಣವಾಗಬಹುದು.

ಶಿಕ್ಷಕನು ಬಾಲಕರ ಮನಸ್ಸಿಗೆ ವಿನೋದವೆನಿಸುವಂಥ ಸನ್ನಿವೇಶಗಳನ್ನೇ ಆರಿಸಿಕೊಳ್ಳಬೇಕಲ್ಲದೆ ಪ್ರಬುದ್ಧರಿಗೆ ಅಥವಾ ತನ್ನ ಮನಸ್ಸಿಗೆ ವಿನೋದವೆನಿಸುವ ಸಂದರ್ಭಗಳನ್ನು ಪಾಠದ ಸಮಯದಲ್ಲಿ ತರಲಾಗದು. ರಂಗಭೂಮಿಯಲ್ಲಿಯ ಹಾಸ್ಯಕಾರನಂತೆ ಶಿಕ್ಷಕನು ತನ್ನ ಕಾರ್ಯರಂಗದಲ್ಲಿ ವಿನೋದಗಾರನ ಪಾತ್ರವನ್ನು ಅಭಿನಯಿಸಿ ತನ್ನ ಕಾರ್ಯವನ್ನು ಸುಗಮವಾಗಿ ಸಾಗಿಸಿಕೊಂಡರೆ, ಶಿಕ್ಷಣಪ್ರಪಂಚದಲ್ಲಿ ಅವರಿಗೆ ಸ್ವರ್ಗಸುಖವುಂಟಾಗುವುದೆಂದು ಹೇಳುವುದುಂಟು.

**೧೨. ಶಿಕ್ಷಕನೂ ಸ್ಫೂರ್ತಿದಾಯಕತ್ವವೂ.—** ಶಿಕ್ಷಕನು ವಿದ್ಯಾರ್ಥಿಗಳಿಗೆ ವಿಷಯಜ್ಞಾನವನ್ನು ಮಾಡಿಕೊಡುವನು; ಜಾಣತನವನ್ನು ತಂದುಕೊಡುವನು; ಅವರಲ್ಲಿ ಕಾರ್ಯಸ್ಫೂರ್ತಿಯನ್ನೂ ಹುಟ್ಟಿಸುವನು. ಶಿಕ್ಷಕನ ನಡತೆಯೆ ಇದಕ್ಕೆ ಮುಖ್ಯ ಸಾಧನವಾಗಿರಬೇಕಲ್ಲದೆ, ಕೇವಲ

ವಾದ ಶಾಬ್ದಿಕ ಸ್ಫೂರ್ತಿಯು ಅಥವಾ ಅನ್ಯರ ಉದಾಹರಣೆಯು ಈ ಕಾರ್ಯಕ್ಕೆ ಸಾಕಷ್ಟು ನೆರವಾಗಲಾರದು. ಕಲಿಯುವ ಕೆಲಸದಲ್ಲಿಯೆ ಆಗಲಿ, ಅನ್ಯಕಾರ್ಯಗಳಲ್ಲಿಯೆ ಆಗಲಿ, ವಿದ್ಯಾರ್ಥಿಗಳ ಆಂತರಿಕ ಸ್ಫೂರ್ತಿಯಿಲ್ಲದೆ ಮುನ್ನಡೆ ಸಾಗದು. ಅಂತಹ ಸ್ಫೂರ್ತಿಯನ್ನು ಹುಟ್ಟಿಸುವುದು ಶಿಕ್ಷಕನ ಕೆಲಸ. ವಿದ್ಯಾರ್ಥಿಗಳಲ್ಲಿರುವ ಸ್ವಾಭಾವಿಕ ಮನಃಪ್ರವೃತ್ತಿಗೆ ಶಿಕ್ಷಕನ ಪ್ರೇರಣೆಯು ಸಹಾಯಕವಾಗಬೇಕು. ಶಿಕ್ಷಕನು ಅವರ ಮನೋವಿಕಾಸಕ್ಕೆ ತಡೆಯನ್ನುಂಟುಮಾಡದೆ ಮೇಲ್ವಿಚಾರಣೆಯನ್ನು ನಡೆಯಿಸಬೇಕು. ವಿದ್ಯಾರ್ಥಿಗಳು ಶಾಂತತೆಯಿಂದಲೂ ಸಮಾಧಾನದಿಂದಲೂ ಶಿಕ್ಷಕನನ್ನು ಅನುಸರಿಸುವಂತೆ ಮಾಡಬೇಕು. ಶಿಕ್ಷಕನು ದೇವರಂತೆ ಇರಬೇಕೆಂದು ಹೇಳುವುದುಂಟು. ಬೆಕ್ಕು ತನ್ನ ಮರಿಗಳನ್ನು ನೆಕ್ಕಿ ಸಂಜ್ಞೆಮಾಡಿ ಅವು ತನ್ನನ್ನು ಅನುಸರಿಸುವಂತೆ ಮಾಡುವುದು. ಅದರಂತೆ ಒಳ್ಳೆಯ ಶಿಕ್ಷಕನು ಬಾಲಕರೊಡನೆ ಸಹಕರಿಸಿ ಅವರಲ್ಲಿ ಸ್ಫೂರ್ತಿಯನ್ನು ಬೀರುವನು.

೧೩. **ಶಿಕ್ಷಕನೂ ಪರೀಕ್ಷೆಗಾರಿಕೆಯೂ.—** ಪರೀಕ್ಷಕನು ತನ್ನ ಗೌರವದ ಆಡಂಬರಕ್ಕೆ ಹೋಗಬಾರದು; ಪರೀಕ್ಷಿಸಲ್ಪಡುವವರ ಕಡಮೆತನವನ್ನು ಟೀಕಿಸಬಾರದು. ಕೂಲಿಯ ಆಳುಗಳು ಕೂಡ 'ನೀವು ಹೀಗೆ ನಮ್ಮ ಬೆನ್ನ ಮೇಲೆ ಕೂತರೆ ಕೆಲಸ ಸಾಗುವುದಿಲ್ಲ' ಎಂದು ಒಡೆಯರಿಗೆ ಹೇಳುವುದುಂಟು. ಹಾಗೆಯೇ ಮೇಲ್ವಿಚಾರಣೆಯ ಅಧಿಕಾರಿಗಳನ್ನು ಕಂಡು ಆಳುಗಳು ನಡುಗುವ ಅಥವಾ ಮಾತು ತತ್ತರಿಸುವ ದಿವಸಗಳು ಈಗ ಉಳಿದಿಲ್ಲ. ಪರೀಕ್ಷಕರು ಶಿಕ್ಷಕರ ಗೆಳೆಯರು; ಚತುರ ಸಲಹೆಗಾರರು; ಉಪಯುಕ್ತ ಸಹಾಯಕರೂ ಅಹುದು. ಶಿಕ್ಷಕನ ಕಷ್ಟಕರವಾದ ಮಾರ್ಗವನ್ನು ಸುಗಮವಾಗುವಂತೆ ಮಾಡುವುದೇ ಅವರ ಕೆಲಸ. ಶಿಕ್ಷಕನ ದೋಷಗಳನ್ನು ಸರಿಪಡಿಸುವುದೂ ಅವರನ್ನೇ ಸೇರಿರುವುದು. ಆದುದರಿಂದ ಶಿಕ್ಷಕನು ತನ್ನ ಕೆಲಸದ ಯೋಗ್ಯತೆಯ ಪರೀಕ್ಷೆಯನ್ನು ತಾನೇ ಮಾಡಿಕೊಳ್ಳುವ ಪರಿಸ್ಥಿತಿಯು ಇತ್ತೀಚೆಗೆ ಪ್ರಚಾರದಲ್ಲಿ ಬಂದಿರುವುದು.

ಇನ್ನು ವಿದ್ಯಾರ್ಥಿಗಳ ವಿಷಯಜ್ಞಾನದ ಯೋಗ್ಯತೆಯು ಶಿಕ್ಷಕನಿಗೆ ನಿಯತಕಾಲಿಕವಾಗಿ ನಡೆಯಿಸುವ ಪರೀಕ್ಷೆಯಿಂದಲೇ ಗೊತ್ತಾಗುವುದು;

ಎಂದು ಭಾವಿಸಲಾಗದು. ಪಾಠಗಳು ನಡೆದಾಗ ಪ್ರತಿಕ್ಷಣಕ್ಕೆ ಅವನು ತನ್ನ ವಿದ್ಯಾರ್ಥಿಗಳನ್ನು ಪರೀಕ್ಷಿಸುತ್ತಿರುವನು. ಅಲ್ಲದೆ ಪ್ರತಿಯೊಬ್ಬ ವಿದ್ಯಾರ್ಥಿಯ ಯೋಗ್ಯತೆಯು ಎಷ್ಟೆಂಬುದು ಅವನಿಗೆ ತಿಳಿದೇ ಇರುವುದು. ಆದರೂ ವಿದ್ಯಾರ್ಥಿಗಳ ತರಗತಿಗಳನ್ನು ನಿರ್ಣಯಿಸುವುದಕ್ಕೂ ಅವರ ಸರ್ವಸಾಮಾನ್ಯ ಪ್ರಗತಿಯನ್ನು ಕಂಡುಹಿಡಿಯುವುದಕ್ಕೂ ಸಾಲೆಗಳಲ್ಲಿ ಪರೀಕ್ಷೆಯು ನಡೆಯಬೇಕಾಗುವುದು. ಅದು ಶಿಕ್ಷಣದ ಒಂದು ಮುಖ್ಯಾಂಗವೆಂದು ಹೇಳುವುದೂ ಉಂಟು.

ವಿದ್ಯಾರ್ಥಿಗಳ ಶಕ್ತಿವಿಕಾಸವನ್ನು ಅಳೆಯುವುದು, ಅವರ ಜ್ಞಾನದ ಮಟ್ಟವನ್ನು ಕಂಡುಹಿಡಿಯುವುದು ಇವೆರಡೂ ಪರೀಕ್ಷೆಯ ಧ್ಯೇಯಗಳು. ಶಾಲೆಗಳಲ್ಲಿ ನಡೆಯುವ ಪರೀಕ್ಷೆಗಳು ಈ ಧ್ಯೇಯದಿಂದಲೇ ನಡೆಯಬೇಕು.

ಶಿಕ್ಷಕನು ಪರೀಕ್ಷೆಗಳ ವಿಷಯದಲ್ಲಿ ಈ ಕೆಳಗಿನ ಸೂಚನೆಗಳನ್ನು ನೆನಪಿನಲ್ಲಿ ಇಟ್ಟುಕೊಳ್ಳಬೇಕು:—

(೧) ಪ್ರಶ್ನಪತ್ರಿಕೆಯು ಕಲಿಸಿದ ವಿಷಯಕ್ಕೆ ಅನುಗುಣವಾಗಿರಬೇಕು. ಅದು ಅಭ್ಯಾಸಕ್ರಮದ ಸರ್ವ ವಿಭಾಗಗಳನ್ನೂ ಒಳಗೊಂಡಿರಬೇಕು.

(೨) ಪ್ರಶ್ನಪತ್ರಿಕೆಯು ತೀರ ಕಠಿನವಾಗಿರಕೂಡದು. ನಾಲ್ಕು ಪಾಲುಗಳಲ್ಲಿ ಮೂರು ಪಾಲುಗಳಷ್ಟು ಪ್ರಶ್ನೆಗಳು ಮಂದಬುದ್ಧಿಯವರಿಗೂ ಬಿಡಿಸಲು ಬರುವಂಥವಾಗಿರಬೇಕು; ಇನ್ನುಳಿದುವು ಜಾಣರಾದ ವಿದ್ಯಾರ್ಥಿಗಳಿಗಷ್ಟೇ ತಕ್ಕುವಾಗಿರಬೇಕು.

(೩) ಪ್ರಶ್ನಪತ್ರಿಕೆಯಲ್ಲಿ ನಿಬಂಧ ರೂಪದ ಪ್ರಶ್ನೆಗಳು ಹೇರಳವಾಗಿರಕೂಡದು. ಬೇರೆ ಬೇರೆ ಪರಿಸ್ಥಿತಿಗಳಲ್ಲಿ ಕಲಿತ ಬಹು ಜನ ವಿದ್ಯಾರ್ಥಿಗಳಿಗಾಗಿ ತೆಗೆದ ಪ್ರಶ್ನಪತ್ರಿಕೆಗೆ ಈ ಮಾತು ಅನ್ವಯಿಸಲಾರದು.

ವಿದ್ಯಾರ್ಥಿಗಳ ಜಾಣ್ಮೆಯನ್ನು ಪರೀಕ್ಷಿಸುವುದಕ್ಕಾಗಿ ಕೆಲವು ಸಮಸ್ಯೆಗಳನ್ನು ಕೊಡಬೇಕಾಗುವುದು. ಅವೂ ಕೂಡ ಕಗ್ಗತ್ತಲೆಯಲ್ಲಿ ಕಣ್ಣುಕಟ್ಟಿ ದಾರಿಯನ್ನು ಹುಡುಕೆಂದು ಹೇಳುವಂತಿರಬಾರದು. ಅವರಿಗೆ ಆವಶ್ಯಕವಾದ ಸಾಹಾಯ್ಯ ಸೌಕರ್ಯಗಳನ್ನೆಲ್ಲ ಒದಗಿಸಿಕೊಡುವುದೂ

ಅವರ ಯೋಗ್ಯತೆಗೆ ಅನುಗುಣವಾದ ಸಮಸ್ಯೆಗಳನ್ನೇ ಅವರ ಮುಂದಿಡುವುದೂ ಮಹತ್ವದ ಮಾತು.

ವಿದ್ಯಾರ್ಥಿಗಳು ಬರೆದ ಉತ್ತರಗಳನ್ನು ನೋಡಿ ಅವುಗಳಿಗೆ ತಕ್ಕಂತೆ ಗುಣಗಳನ್ನು ಕೊಡುವುದು ಸುಲಭವಲ್ಲ. ಈ ಸಮಯದಲ್ಲಿ ಶಿಕ್ಷಕನ ತಾಳ್ಮೆ, ಸಹಾನುಭೂತಿ, ಸೂಕ್ಷ್ಮವಿವೇಚನೆ ಮುಂತಾದ ಗುಣಗಳು ಬಯಲಿಗೆ ಬರುವುವು. ಈ ಸಮಯದಲ್ಲಿ ಶಿಕ್ಷಕನು ನಿಃಪಕ್ಷಪಾತ ಬುದ್ಧಿಯವನು ಆಗಿರಬೇಕೆಂಬುದನ್ನಂತೂ ಹೇಳುವುದು ಅವಶ್ಯವಿದೆಯೆ? ಇದೊಂದೇ ಸಂದರ್ಭದಿಂದ ಶಿಕ್ಷಕನ ಬೆಲೆಯನ್ನು ಕಟ್ಟುವ ವಿದ್ಯಾರ್ಥಿಗಳೂ ಉಂಟು.

ಪರೀಕ್ಷೆಯು ವಿದ್ಯಾರ್ಥಿಗಳಿಗೆ ತಮ್ಮ ತಪ್ಪುಗಳನ್ನು ತಿದ್ದಿಕೊಳ್ಳುವುದಕ್ಕೆ ಸಹಾಯಕವಾಗಬೇಕು. ಈ ಉದ್ದೇಶವನ್ನು ಬಗೆದು ನೋಡಿದರೆ, ಶಿಕ್ಷಕನು ಅವರ ಉತ್ತರಗಳಿಗೆ ಗುಣಗಳನ್ನು ಕೊಟ್ಟರೆ ಸಾಲದು; ಅವುಗಳಲ್ಲಿಯ ತಪ್ಪುಗಳನ್ನೂ ತಿದ್ದಬೇಕಾಗುವುದು. ಈ ತಿದ್ದುವಿಕೆಗೆ ಮಿತಿಯಿರಬೇಕು. ಶಿಕ್ಷಕನು **ತನ್ನ** ಯೋಗ್ಯತೆಗೆ ತಕ್ಕಂತೆ ತಿದ್ದದೆ ಯೋಗ್ಯ (ಉತ್ತಮ) **ವಿದ್ಯಾರ್ಥಿಯ** ಯೋಗ್ಯತೆಗೆ ತಕ್ಕಂತೆ ತಿದ್ದಬೇಕು. ವಿದ್ಯಾರ್ಥಿಗಳಿಗೆ ಉತ್ತರದ ಕಾಗದಗಳನ್ನು ತಿರುಗಿ ಕೊಟ್ಟ ಬಳಿಕ ಅವರು ತಮ್ಮ ತಪ್ಪುಗಳನ್ನು ತಾವೇ ತಿದ್ದಿಕೊಳ್ಳುವಂತೆ ಮಾಡುವುದು ಉತ್ತಮ ಪಕ್ಷ. ಈ ದಾರಿಯಲ್ಲಿ ಹಲವು ತೊಂದರೆಗಳೂ ಉಂಟು.

ಪರೀಕ್ಷಾಧಿಕಾರಿಯ ಪಾತ್ರವನ್ನು ವಹಿಸಿದಾಗ ಶಿಕ್ಷಕನು ವಿದ್ಯಾರ್ಥಿಗಳಿಗೆ ಭೀಕರನಾಗಿರಬಾರದು. ಅಥವಾ ಹಲ್ಲಿಲ್ಲದ ಹಾವಿನಂತೆಯೂ ಆಗಿರಬಾರದು.

ತೂಕ ತಪ್ಪದಂತೆ ನಡೆಯಲಾರದ ಶಿಕ್ಷಕನು ಯಾವ ಭೂಮಿಕೆಯಲ್ಲಿದ್ದರೂ ಯಾವ ಹೊಣೆಯನ್ನು ಹೊತ್ತಿದ್ದರೂ ಎಡವಿ ಬೀಳುವುದು ನಿಶ್ಚಯ. ತನ್ನನ್ನು, ತನ್ನ ಭೂಮಿಕೆಯ ಔಚಿತ್ಯವನ್ನೂ ಹೊಣೆಯನ್ನೂ ಅರಿತವನಾಗಿ ನಡೆದರೆ ಶಿಕ್ಷಕನ ನಾಟಕರಂಗವು ಬಹು ರಮ್ಯವಾಗಿ ಪರಿಣಮಿಸುವುದರಲ್ಲಿ ಸಂದೇಹವಿಲ್ಲ.

೧೨

# ಪಠ್ಯಕ್ರಮ ರಚನೆಯ ಮೂಲತತ್ತ್ವಗಳು

ಪಠ್ಯಕ್ರಮದಲ್ಲಿ ಕೆಲವು ವಿಷಯಗಳನ್ನು ಉಪಯುಕ್ತತೆಯ ದೃಷ್ಟಿಯಿಂದಲೂ ಹಲವನ್ನು ಅವುಗಳಿಂದುಂಟಾಗಬಹುದಾದ ಮಾನಸಿಕ ಶಿಕ್ಷಣದ ಸಲುವಾಗಿಯೂ ಸೇರಿಸುವ ರೂಢಿಯು ಬಂದಿದ್ದಿತು. ಆದರೆ ಕೆಲವು ವಿಷಯಗಳ ಸಾಹಾಯ್ಯದಿಂದ ದೊರೆತ ಮಾನಸಿಕ ಸಂಸ್ಕಾರವು ಉಳಿದ ವಿಷಯಗಳ ಜ್ಞಾನಕ್ಕೆ ಅಥವಾ ವಿವಿಧವಿಷಯಗಳ ಅವಗಾಹನೆಗೆ ಸಹಸಾ ಅನುಕೂಲವಾಗಬಹುದೇ? ಎಂಬ ಪ್ರಶ್ನೆಯು ಚರ್ಚಾತ್ಮಕವಾಗಿಯೆ ಉಳಿಯಿತು. ಲೆಕ್ಕ, ಭೂಮಿತಿ, ಮುಂತಾದುವುಗಳಲ್ಲಿ ಬೇಕಾದ ವಿಚಾರಶಕ್ತಿಯು ಉಳಿದ ವಿಷಯಗಳನ್ನು ಅಭ್ಯಸಿಸುವಾಗ ಸಹಾಯವಾಗಬಹುದೆಂದು 'ಮಾನಸಿಕ ಸಂಸ್ಕಾರದ ಉಪಯೋಗ'ದ ಪ್ರತಿಪಾದಕರು ನಂಬುತ್ತಿದ್ದರು. ಏಕೆಂದರೆ ಒಂದು ವಿಷಯವನ್ನು ಅಥವಾ ಒಂದು ಉದ್ಯೋಗವನ್ನು ಕಲಿಯುವಾಗ ದೊರೆತ ಅನುಭವವು ಅದನ್ನು ಹೋಲುವ ಅನ್ಯ ವಿಷಯಗಳನ್ನು ಗ್ರಹಿಸುವಾಗಲೂ ಸಹಾಯವಾಗುವುದು. ಈಗಿನ ಪಠ್ಯಕ್ರಮದಲ್ಲಿ ಸೇರಿದ ವಿಷಯಗಳು, ಮಾನವ ಕುಲದ ಶಾಸ್ತ್ರೀಯ, ಕಲಾತ್ಮಕ, ವ್ಯಾವಹಾರಿಕ ಕಾರ್ಯಗಳಲ್ಲಿ ವಿದ್ಯಾರ್ಥಿಗಳು ಆಸ್ಥೆಯುಳ್ಳ ಪ್ರೇಕ್ಷಕರಾಗುವಂತೆ ಅಥವಾ ಶಕ್ಯವಿದ್ದಲ್ಲಿ ಸಮಭಾಗಿಗಳಾಗುವಂತೆ ಕಲಿಸಬೇಕೆಂಬ ಉದ್ದೇಶದ ಪ್ರತಿಫಲಗಳಾಗಿವೆ. ಪುರಾಣಪದ್ಧತಿಯ ಅನುಯಾಯಿಗಳು ಹೆಚ್ಚಿನ ಮಹತ್ತ್ವವನ್ನು ಕೊಟ್ಟಿರುವ ಮಾನಸಿಕ ಶಿಕ್ಷಣವನ್ನು ವಿದ್ಯಾರ್ಥಿಗಳಿಗೆ ಒದಗಿಸಿಕೊಡುವಂತಹ ಪದ್ಧತಿಗಳನ್ನೇ ಶಿಕ್ಷಕರು ಆಯ್ದುಕೊಳ್ಳಬೇಕು.

ಸಾಂಪ್ರದಾಯಿಕ ವಿಷಯಗಳು ಕೊಡಬಹುದಾದ ಮಾನಸಿಕ ಸಂಸ್ಕೃತಿಯ ಮಹತ್ತ್ವವನ್ನು ಮನ್ನಿಸಿ, ಅವುಗಳನ್ನು ಕಲಿಸಲೇಬೇಕೆಂದು ಪುರಾಣಪದ್ಧತಿಪ್ರಿಯರು ನಿರ್ಬಂಧಿಸುವರು. ಆದರೆ, ಇಂತಹ ಜನರ

ಸಂಖ್ಯೆಯು ಈಗ ತೀರ ಕಡಮೆಯಾಗಿದೆ. ಈಗಿನವರು "ಹುಡುಗರ ಮನಸ್ಸಿಗೆ—ಪ್ರೌಢರ ಮನಸ್ಸಿಗೆ—ರುಚಿಸಿದ ವಿಷಯಗಳು ಬೌದ್ಧಿಕ ಆಹಾರವನ್ನು ಪೂರೈಸುತ್ತವೆ" ಎಂಬ "**ಪ್ರಯತ್ನದ ದೀಕ್ಷೆ**" ಯನ್ನು ತೆಗೆದುಹಾಕದೆ ಅದಕ್ಕೆ ಪೋಷಕವಾಗಿ "**ಅಭಿರುಚಿಯ ದೀಕ್ಷೆ**" ಯನ್ನು ಜೋಡಿಸಿದ್ದಾರೆ. ವಿದ್ಯಾರ್ಥಿಗಳ ಅಭ್ಯಾಸದ ವಿಷಯಗಳು ಅವರ ಸ್ವಾಭಾವಿಕವಾದ ಒಲವುಗಳಿಗೆ ಅಥವಾ ಅಭಿರುಚಿಗೆ ಅನುಗುಣವಾಗಿದ್ದರೆ, ಅವರು ಮುಂದುವರಿಯುವುದಕ್ಕಾಗಿ ಬಲವಾದ ಪ್ರಯತ್ನವನ್ನು ಮಾಡು ವರು. ತಾಂತ್ರಿಕ ಕಾರ್ಯಕ್ಕೆ ಉದ್ದೇಶವನ್ನು ತೋರಿಸಿದ ಕೂಡಲೆ ಅದು ಬೇಸರಗೊಳಿಸುವ ಕಾರ್ಯವೆನಿಸಲಾರದು. ಯಾವುದಾದರೂ ಒಂದು ಕಾರ್ಯವು ವಿದ್ಯಾರ್ಥಿಗೆ ರುಚಿಸಲಿ, ಅಥವಾ ರುಚಿಸದಿರಲಿ, ಅದನ್ನು ಪ್ರಯತ್ನಪೂರ್ವಕವಾಗಿ ಮಾಡಲೇಬೇಕೆಂದು ನಿರ್ಬಂಧಪಟ್ಟರೆ, ನಾವು ಅಭಿರುಚಿಗೆ ಮಹತ್ತ್ವವನ್ನು ಕೊಟ್ಟಂತಾಗುವುದಿಲ್ಲ; ಆದರೆ ವಿದ್ಯಾರ್ಥಿಗಳು ಮಾಡತಕ್ಕ ಕಾರ್ಯದಲ್ಲಿ ಅಭಿರುಚಿಯನ್ನು ಹುಟ್ಟಿಸಿದರೆ ಅವರು ತಾವಾಗಿಯೆ ಸಂತೋಷದಿಂದ ಪ್ರಯತ್ನವನ್ನು ಮಾಡುವರು. ಇಲ್ಲಿ ಅಭಿರುಚಿಯೆಂದರೆ ಮನೋರಂಜನೆಯೆಂದು ಅರ್ಥಮಾಡಿಕೊಳ್ಳಬಾರದು. "ಹುಡುಗನಿಗೆ ಸೇರುವ ವಿಷಯಗಳು ಯಾವುವು?" ಎಂದು ಕೇಳಿದರೆ "ಪ್ರೌಢ ವಯಸ್ಕನಂತೆ ಜೀವನವನ್ನು ಉತ್ತಮ ರೀತಿಯಿಂದಲೂ ಪ್ರಫುಲ್ಲತೆಯಿಂದಲೂ ಸಾಗಿಸಲು ಸಹಾಯವಾಗುವ ಸರ್ವ ವಿಷಯಗಳೂ ಅವನಿಗೆ ಸೇರುವುವು" ಎಂದು ಹೇಳಬಹುದು. ಬೆಳವಣಿಗೆಯ ಪ್ರತಿ ಯೊಂದು ತರಗತಿಯಲ್ಲಿಯೂ ಪಠ್ಯವಿಷಯಗಳು ವಿದ್ಯಾರ್ಥಿಗೆ ತಾನು ಸಮಾಜದಲ್ಲಿಯ ಒರ್ವ ಘಟಕನಾಗಿ ಜೀವಿಸಲು ಅನುಕೂಲವಾದುವು ಗಳಿರಬೇಕು. ಆದುದರಿಂದ ಪಠ್ಯವಿಷಯಗಳನ್ನು ನಿರ್ಣಯಿಸುವಾಗ ಕೆಳಗಿನ ಸಂಗತಿಗಳನ್ನು ಗಮನಿಸಬೇಕು.

೧. ಶಿಕ್ಷಕನು ಸದಾ 'ಮಾನಸಿಕ ಶಿಕ್ಷಣ' ವೆಂಬ ಉದ್ದೇಶವನ್ನು ಇಟ್ಟುಕೊಳ್ಳದೆ 'ಸಾಮಾಜಿಕ ಉಪಯುಕ್ತತೆ' ಎಂಬ ಧ್ಯೇಯವನ್ನು ಇಟ್ಟುಕೊಳ್ಳಬೇಕು. 'ಉಪಯುಕ್ತತೆ' ಎಂಬ ಶಬ್ದವು ವಿರಾಮಕಾಲಕ್ಕೂ ಮಾಡತಕ್ಕ ಕಾರ್ಯಕ್ಕೂ ಸಂಬಂಧಪಟ್ಟುದಾಗಿರಬೇಕು. ಏಕೆಂದರೆ

ಉಪಯುಕ್ತತೆಯೇ ಮುಖ್ಯ ಮಾರ್ಗದರ್ಶಕವಾಗಿದೆ. ವಿಷಯಗಳನ್ನು ಕೇವಲ ಅಲಂಕಾರವೆಂದು ಕಲಿಯುವುದು ಯಾವಾಗಲೂ ಮನುಷ್ಯನಿಗೆ ಸೇರುವುದಿಲ್ಲ. ಆದುದರಿಂದ ಕಲಿತ ವಿಷಯಗಳು ಎಷ್ಟರ ಮಟ್ಟಿಗೆ ವ್ಯವಹಾರದ ಬೇಡಿಕೆಗಳನ್ನು ಪೂರೈಸುವುವೆಂಬುದನ್ನು ಶಿಕ್ಷಣಜ್ಞರು ಆಗಾಗ್ಗೆ ವಿಚಾರಿಸಬೇಕು.

೨. ಕೆಲವು ವಿಷಯಗಳ ಜ್ಞಾನವನ್ನು ಮಾಡಿಕೊಟ್ಟರಾಯಿತೆಂಬುದನ್ನು ಬಿಟ್ಟು, ಸಂಸಾರದಲ್ಲಿ ಮಹತ್ತ್ವವುಳ್ಳ ಹಲವು ಚಟುವಟಿಕೆಗಳನ್ನು ಮಾಡಲು ವಿದ್ಯಾರ್ಥಿಗಳಿಗೆ ಶಾಲೆಯು ಕಲಿಸುವುದೆಂಬ ಧ್ಯೇಯವನ್ನು ಇಟ್ಟುಕೊಳ್ಳಬೇಕು. ಇವುಗಳಲ್ಲಿ ಎರಡು ಪ್ರಕಾರಗಳುಂಟು :— (೧) ವೈಯಕ್ತಿಕ ಜೀವನದ ಮತ್ತು (೨) ಸಾಮಾಜಿಕ ಜೀವನದ ಮಟ್ಟವನ್ನು ವಿಶಿಷ್ಟತರಗತಿಗೆ ಏರಿಸಿ, ಅದು ಅಲ್ಲಿ ಸ್ಥಿರವಾಗಿ ಉಳಿಯುವುದಕ್ಕೆ ಸಹಾಯವಾಗುವ ಚಟುವಟಿಕೆಗಳು. ಉದಾಹರಣಾರ್ಥವಾಗಿ,ಆರೋಗ್ಯದ ಹಾಗೂ ದೇಹಸೌಂದರ್ಯದ ರಕ್ಷಣೆ, ಸಾಮಾಜಿಕ ವ್ಯವಸ್ಥೆ ಮತ್ತು ನೀತಿ–ಧರ್ಮ–ಇತ್ಯಾದಿ.

೩. ಸುಧಾರಣೆಯ ಮೂಲಾಧಾರವಾದ ಆದರ್ಶ ರಚನಾತ್ಮಕವಾದ ಚಟುವಟಿಕೆಗಳೂ ಶಾಸ್ತ್ರ ಮತ್ತು ಕಲೆಗಳೂ ಇಲ್ಲದಿದ್ದರೆ ಸುಧಾರಣೆಗೆ ಎಂಥ ಹಾನಿಯಾಗುವುದು! ಕವಿಯು ಸವಿಗನಸುಗಳನ್ನು ಕಂಡು ಹಾಡದಿದ್ದರೆ, ವೀಣೆಯನ್ನಾಗಲಿ ವೇಣುವನ್ನಾಗಲಿ ನುಡಿಸುವವರು ಯಾರೂ ಇಲ್ಲದಿದ್ದರೆ, ಅಥವಾ ಕಲೆಗಾರನು ತನ್ನ ಚಾತುರ್ಯವನ್ನು ಮರೆತರೆ, ಎಂಥ ದುರ್ದೆಸೆಯು ಬರುವುದು! ಆ ದುರ್ದೆಸೆಯು ಬರದಂತೆ ಮಾಡುವುದಾದರೆ ಇಂಥ ಚಟುವಟಿಕೆಗಳಿಗೆ ಶಾಲೆಯಲ್ಲಿ ಸ್ಥಾನವು ದೊರೆಯಲೇಬೇಕು. ಪ್ರತಿಯೊಂದು ಶಿಕ್ಷಣಯೋಜನೆಯಲ್ಲಿ ಕೆಳಗಿನ ವಿಷಯಗಳು ಇರಲೇಬೇಕು.

(ಅ) ತಾಯ್ನುಡಿಯಲ್ಲಿರುವ ಉತ್ತಮ ಸಾಹಿತ್ಯ ಮತ್ತು ಸಾಧ್ಯವಿದ್ದಲ್ಲಿ ಜಗತ್ತಿನ ಅನ್ಯ ಭಾಷೆಗಳಲ್ಲಿಯ ಉತ್ತಮ ಸಾಹಿತ್ಯ.

(ಆ) ಎಲ್ಲ ಕಲೆಗಳಿಗೂ ತವರ್ಮನೆಯಾದ ಸಂಗೀತಕಲೆಯೇ ಮುಂತಾದ ಲಲಿತ ಕಲೆಗಳು.

(ಇ) ಕಲಾತ್ಮಕ ಸ್ವರೂಪವನ್ನು ತೋರಿಸುವ ನೇಯಿಗೆ, ಕೆತ್ತನೆ, ಬರೆಹ, ಕೊರೆಯುವುದು, ರಚನಾತ್ಮಕ ಸ್ವರೂಪವನ್ನು ದರ್ಶಿಸುವ ಬಡಿಗತನ, ಅಥವಾ ಹೊಲಿಗೆಯ ಕೆಲಸ--ಇತ್ಯಾದಿ.

(ಈ) ಗಣಿತ, ಶಾಸ್ತ್ರೀಯ ವಿಷಯ ಮತ್ತು ಇತಿಹಾಸ; ಆದರೆ ಇತಿಹಾಸವು ಸಾಹಿತ್ಯದಲ್ಲಿಯೂ ಭೂಗೋಲವು ಶಾಸ್ತ್ರೀಯ ವಿಷಯದ ವರ್ಗಕ್ಕೂ ಸೇರಿರುವುದರಿಂದ ಇವುಗಳಿಗೆ ಪಠ್ಯವಿಷಯಗಳಲ್ಲಿ ಕೇಂದ್ರ ಸ್ಥಾನವನ್ನು ಕೊಡಬೇಕು.

ಇತಿಹಾಸವು ವರ್ತಮಾನ ಭೂತಕಾಲಗಳ ನಿಕಟಸಂಬಂಧವನ್ನೂ ಐಕ್ಯವನ್ನೂ ತೋರಿಸುತ್ತದೆ. ಭೂಗೋಲವು ಮನುಷ್ಯನ ಜೀವನವು ಪರಿಸ್ಥಿತಿಯ ಮೇರೆಗೆ ಮಾರ್ಪಡುವುದನ್ನೂ ಪೃಥ್ವಿಯ ಮೇಲಿನ ಮಾನವ ಕುಲದ ಚಟುವಟಿಕೆಗಳಲ್ಲಿರುವ ಪರಸ್ಪರಸಂಬಂಧವನ್ನೂ ಕಲಿಸುತ್ತದೆ.

ಮೊದಲನೆಯ ತರದ ಚಟುವಟಿಕೆಗಳನ್ನು ವಿಷಯಗಳೆಂದು ಕಲಿಸಲು ಸಾಧ್ಯವಿಲ್ಲ. ವಿದ್ಯಾರ್ಥಿಗಳು ಕೈಕೊಂಡ ವಿಷಯಗಳ ಮೇಲೆಯೂ ನಿರ್ದಿಷ್ಟ ಉದ್ದೇಶದಿಂದ ಕಲಿಸುವುದರ ಮೇಲೆಯೂ ಅವು ಅವಲಂಬಿಸಿವೆ. ಆದರೆ ಧಾರ್ಮಿಕ ಶಿಕ್ಷಣವು ಈಗ ಸಮಾಧಾನಕಾರಕ ಸ್ಥಿತಿಯಲ್ಲಿ ಇಲ್ಲವೆಂಬುದು ಸ್ಪಷ್ಟವಿದೆ. ಇದಕ್ಕೋಸ್ಕರ ಶಾಲೆಗಳ ಮೇಲೆ ಆರೋಪ ವನ್ನು ಹೊರಿಸಬಹುದು. ಏಕೆಂದರೆ, ಸುಧಾರಿಸಿದ ಜನರ ಆಧ್ಯಾತ್ಮಿಕ ಶಕ್ತಿಯನ್ನು ಕುಗ್ಗಿಸುವ ಮನಸ್ಸಿನ ಜಂಜಾಟಗಳನ್ನು ಮತ್ತು ಅಜ್ಞಾನ ವನ್ನು ಶಾಲೆಗಳು ಪ್ರತಿಬಿಂಬಿಸುವುವು. ಧರ್ಮವನ್ನು ಚೆನ್ನಾಗಿ ಪರಿಶೀಲಿಸಿ ನಿಶ್ಚಿತ ಧೋರಣವನ್ನೂ ಕ್ರಮಗಳನ್ನೂ ಗೊತ್ತುಪಡಿಸುವ ವರೆಗೆ ಈ ಕೊರತೆಯು ದೂರವಾಗಲಾರದು. ಧಾರ್ಮಿಕ ಭಾವನೆಯನ್ನು ಜಾಗೃತ ಗೊಳಿಸಿ, ಸಾಮಾಜಿಕ ಸೇವೆಯಾಗಿ ಪರಿಣಮಿಸುವಂತೆ ಮಾಡುವುದು ಶಿಕ್ಷಣದ ಸಾಹಾಯ್ಯದಿಂದ ಸಾಧ್ಯವಿದೆ. ಧಾರ್ಮಿಕ ಸ್ವಾರಸ್ಯ-ಸಾರವನ್ನು ಅಭ್ಯಸಿಸುವುದೂ ಅವಶ್ಯವಾಗಿದೆ. ಆದರೆ ಧಾರ್ಮಿಕ ವಿಚಾರಗಳ ಚರ್ಚೆ ಯನ್ನು ಹುಡುಗರ ಮನಸ್ಸಿನ ಸ್ಥಿತಿಗೆ ಅನುಸರಿಸಿ ಅವರ ಅನುಭವಕ್ಕೆ ಅದು ನಿಲುಕುವಂತೆ ಮಾಡಬೇಕು; ಹಾಗೆ ಮಾಡಿದರೆ ಯಶಸ್ಸು ನಿಶ್ಚಯ ವಾಗಿ ದೊರೆಯುವುದು.

ಪಠ್ಯಕ್ರಮದಲ್ಲಿಯ ಸರ್ವ ವಿಷಯಗಳನ್ನು ಮುಂದೆ ವಿವರಿಸಲಾಗುವ 'ಕ್ರೀಡನ ಪದ್ಧತಿ'ಯ ಚಟುವಟಿಕೆಗಳನ್ನು ಕಲಿಸುವಂತೆ ಕಲಿಸಬೇಕು. ಕ್ರೀಡನಪದ್ಧತಿಯು ಬಾಲ್ಯದ ಹೊಣೆಯಿಲ್ಲದ ಚಿನ್ನಾಟದಿಂದ ಮೊದಲಾಗಿ ಪ್ರೌಢಮನುಷ್ಯನ ಸುವ್ಯವಸ್ಥಿತವಾದ ಪ್ರಯತ್ನಗಳವರೆಗೂ ಸಾಗುತ್ತಿರುವಂತೆ ಯತ್ನಿಸಬೇಕು. ಮೊದಲನೆಯ ತರಗತಿಯಲ್ಲಿ 'ಸುಖದುಃಖ' ತತ್ತ್ವಕ್ಕೆ ಅನುಸರಿಸಿ ಜ್ಞಾನವು ದೊರೆಯುವುದು. ಸೃಷ್ಟಿ ಪರಿಚಯ, ಪೌರಾಣಿಕ ಕಥೆ, ಕಾಲ್ಪನಿಕ ಕಥೆ, ಪ್ರವಾಸಿಕರ ಅದ್ಭುತ ಕಥೆ, ಇವುಗಳ ಮೇಲಿನ ಪ್ರೀತಿಯು ಸಾಹಿತ್ಯ, ಇತಿಹಾಸ, ಭೂಗೋಲ ಮುಂತಾದ ವಿಷಯಗಳ ಅಭ್ಯಾಸದಲ್ಲಿ ಪ್ರತಿಫಲಿಸುವುದು. ಬರಬರುತ್ತ 'ನಿಜಸ್ವರೂಪ'ದ ತತ್ತ್ವವು ತನ್ನ ಪ್ರಾಬಲ್ಯವನ್ನು ಬೀರುವುದು. ಇತಿಹಾಸವು ನಿಜವಾದ ಸಂಗತಿಗಳ ಚಿತ್ರವೆಂದೂ ಕಥೆಯು ನಿಜಸ್ವರೂಪದ ಛಾಯೆಯನ್ನು ತೋರುವುದೆಂದೂ ಶಾಸ್ತ್ರೀಯ ವಿಷಯದ ಮೇಲಿನ ಪ್ರೇಮವು ಯಂತ್ರಗಳ ಜ್ಞಾನ, ವಸ್ತುಗಳುಂಟಾದ ಬಗೆ, ಪ್ರಾಣಿ, ಸಸ್ಯ ಮೊದಲಾದವುಗಳ ಜೀವನಕ್ರಮವನ್ನು ತಿಳಿದುಕೊಳ್ಳುವುದರಲ್ಲಿ ವ್ಯಕ್ತವಾಗುವುದೆಂದೂ ಕಂಡುಬರುವುದು.

ಈ ತತ್ತ್ವವನ್ನು ಇನ್ನೊಂದು ರೀತಿಯಿಂದ ಸ್ಪಷ್ಟೀಕರಿಸಬಹುದು. ಪಠ್ಯವಿಷಯಗಳನ್ನು ಕಲಿಸುವುದರಲ್ಲಿ– ತೆರೆಗಳ ದೃಶ್ಯದಂತೆ– ಪರಿಳಿತಗಳಿರಬೇಕು. ಸಾಮಾನ್ಯ ವಿಷಯಗಳನ್ನು ಸ್ಥೂಲದೃಷ್ಟಿಯಿಂದ ಕಲಿಸುವುದಲ್ಲದೆ ಮಹತ್ತ್ವದ ವಿಷಯಗಳನ್ನಾಗಲಿ, ಅವುಗಳ ವಿವರಗಳನ್ನಾಗಲಿ ಕಲಿಸುವ ರೂಢಿಯಿರತಕ್ಕದ್ದು. ಬೌದ್ಧಿಕವಾದ ಚಟುವಟಿಕೆಗಳ ಕೆಳಗೆ ಕಾಣಿಸಿದ ಮೂರು ಹೇತುಗಳಲ್ಲಿ ಯಾವುದಾದರೊಂದು ಹೇತುವು ಆಯಾ ಪರಿಳಿತಗಳ ಅವಸ್ಥೆಯಲ್ಲಿ ಪ್ರಾಮುಖ್ಯವನ್ನು ಹೊಂದಿ ಅದಕ್ಕೆ ಆ ಅವಸ್ಥೆಯಲ್ಲಿ ವಿಶಿಷ್ಟಸ್ವರೂಪವನ್ನು ಕೊಡುವುದು :—

**೧. ಕೌತುಕವನ್ನು ಪಡುವ ಅವಸ್ಥೆ :—** ಒಂದು ಕ್ರಿಯೆಯಲ್ಲಿ ಇರುವ ಅಥವಾ ಮಾತಿನಲ್ಲಿರುವ ಸೋಜಿಗದಿಂದ ಅಥವಾ ಅವುಗಳಲ್ಲಿ ಅಡಕವಾಗಿರುವ ಸೌಂದರ್ಯದಿಂದ ಬಾಲಕನ ಕುತೂಹಲವೂ ಕಲ್ಪನಾಶಕ್ತಿಯೂ ಉದ್ಬೋಧಿತವಾಗುವುವು.

**೨. ಉಪಯುಕ್ತತಾವಸ್ಥೆ:**— ಇಲ್ಲಿ ವ್ಯಾವಹಾರಿಕ ಉಪಯುಕ್ತತೆಯ ವಿಚಾರವು ತಲೆದೋರುವುದು. ಈ ಸ್ಥಿತಿಯಲ್ಲಿ 'ಯೋಜನಾ ಪದ್ಧತಿ'ಗೆ ವಿಶೇಷ ಆಸ್ಪದವಿದೆ.

**೩. ಕ್ರಮಗೊಳಿಸುವ ಅವಸ್ಥೆ:**— ಈಗ ವಿಷಯವನ್ನು ಕ್ರಮಬದ್ಧವಾಗಿಯೂ ಸಂಪೂರ್ಣವಾಗಿಯೂ ಗ್ರಹಿಸಬೇಕೆಂಬ ಹಂಬಲವು ಬಾಲಕನಲ್ಲಿ ಕಂಡುಬರುವುದು ; ಮತ್ತು ಅವನು ಸಾಮಾನ್ಯ ನಿಯಮವನ್ನು ಕಂಡುಹಿಡಿಯಲು ಯತ್ನಿಸುವನು.

ವಿದ್ಯಾರ್ಥಿಗಳ ಎಳೆಯ ವಯಸ್ಸಿನಲ್ಲಿ ಜ್ಞಾನವನ್ನು "ವಸ್ತುಗಳ" ಮತ್ತು "ಅಭಿರುಚಿ ಕೇಂದ್ರಗಳ" ಮುಖಾಂತರವಾಗಿ ಕೊಡಬೇಕು. ಪ್ರೌಢಾವಸ್ಥೆಯಲ್ಲಿ ಕ್ರಮಬದ್ಧರೀತಿಯಿಂದ ಕಲಿಯುವ ಆಸಕ್ತಿಯು ಪ್ರಬಲವಾದಂತೆ ಶಿಕ್ಷಣವಿಷಯಗಳನ್ನು ವಿದ್ಯಾರ್ಥಿಗಳು ಬುದ್ಧಿಪುರಸ್ಸರವಾಗಿ ತರ್ಕಬದ್ಧರೀತಿಯಿಂದಲೇ ಗ್ರಹಿಸಬೇಕು.

ಪಠ್ಯವಿಷಯಗಳು, ಶಿಕ್ಷಣದ ಧ್ಯೇಯಗಳನ್ನು ಮೂರ್ತಸ್ವರೂಪಗೊಳಿಸಲು ಪ್ರಯತ್ನಪೂರ್ವಕವಾಗಿ ಕೈಕೊಂಡ ಸಾಧನಗಳು, ಜೀವನದ ಸಿದ್ಧಾಂತಗಳು ದೇಶ-ಕಾಲಗಳ-ಪರಿಸ್ಥಿತಿಗನುಸರಿಸಿ ಮಾರ್ಪಡುವಂತೆ, ಶಿಕ್ಷಣಧ್ಯೇಯಗಳ ಕೆಲವೊಂದು ಸ್ವರೂಪಕ್ಕೆ ವಿಶಿಷ್ಟವಾದ ಮಹತ್ತ್ವವು ಬರುವುದು. ಆದ್ದರಿಂದ ಶಿಕ್ಷಣ ಧ್ಯೇಯಗಳಿಂದ ನಿರ್ಣಯಿಸಲ್ಪಟ್ಟಿರುವ ಪಠ್ಯ ವಿಷಯಗಳು ಎಂದೂ ಬದಲಾಗಲಾರವೆಂದು ತಿಳಿಯಕೂಡದು.

ಪ್ರಾಚೀನ ಕಾಲದಲ್ಲಿ ಭಾರತದ ಜೀವನಸಿದ್ಧಾಂತದಲ್ಲಿ ಮೋಕ್ಷಸಾಧನವೇ ಮುಖ್ಯ ಧ್ಯೇಯವಾಗಿದ್ದುದರಿಂದ ಆಗಿನ ಕಾಲದಲ್ಲಿ ಆಧ್ಯಾತ್ಮಿಕತೆಯೇ ಪಠ್ಯವಿಷಯದ ಕೇಂದ್ರವಾಗಿತ್ತು. ಈಗ ಅಮೇರಿಕೆಯ ಜೀವನದ ಗುರಿಯು ಸಾಮಾಜಿಕ ಸುಖಜೀವನವಾದ್ದರಿಂದ ಅಲ್ಲಿಯ ಪಠ್ಯವಿಷಯಗಳಲ್ಲಿ ಸಮಾಜಶಾಸ್ತ್ರ, ಸಾಮಾಜಿಕ ಸೌಕರ್ಯ-ಮುಂತಾದ ವಿಷಯಗಳಿಗೆ ಪ್ರಾಮುಖ್ಯವು ದೊರೆತಿದೆ. ಜರ್ಮನಿ, ಇಟಲಿ ಮುಂತಾದ ಸರ್ವಾಧಿಕಾರಿಗಳ ಅಂಕಿತದಲ್ಲಿದ್ದ ರಾಷ್ಟ್ರಗಳಲ್ಲಿ ಜೀವನದ ಮುಖ್ಯ ಉದ್ದೇಶವು ವೈಯಕ್ತಿಕ ಹಿತವನ್ನು ಎಳ್ಳಷ್ಟು ಲೆಕ್ಕಿಸದೆ ರಾಷ್ಟ್ರವನ್ನು

ಮುಂಬರಿಸುವುದಿರುವುದರಿಂದ ಆ ದೇಶಗಳ ಪಠ್ಯಕ್ರಮದಲ್ಲಿ ಒತ್ತಾಯದ ಸೈನ್ಯಶಿಕ್ಷಣ ಮೊದಲಾದ ವಿಷಯಗಳಿಗೆ ಪ್ರಾಶಸ್ತ್ಯವು ದೊರೆತಿದೆ.

ನಮ್ಮ ದೇಶದಲ್ಲಿ ಇತ್ತೀಚೆಗೆ, ನಮ್ಮ ಪರಿಸ್ಥಿತಿಗೆ ಅನುಸರಿಸುವಂತೆ, ಪಠ್ಯವಿಷಯಗಳಲ್ಲಿ ತಕ್ಕ ಬದಲಾವಣೆಗಳನ್ನು ಮಾಡುವ ಶಿಕ್ಷಣಜ್ಞರ ಪ್ರಯತ್ನಗಳು ನಡೆದಿರುವುವೆಂಬುದು ಪ್ರಗತಿಯ ಶುಭಚಿಹ್ನವಾಗಿದೆ.

ಒಟ್ಟಿನಲ್ಲಿ ಪಠ್ಯಕ್ರಮವನ್ನು ರಚಿಸುವಾಗ ಕೆಳಗಿನ ಸೂಚನೆಗಳನ್ನು ಗಮನಿಸಬೇಕು :—

(೧) ಬಾಲಕರ ಸ್ವಾಭಾವಿಕವಾದ ಅನುಕೂಲತೆಗಳ ಲಾಭವನ್ನು ಪಡೆಯಬೇಕು.

(೨) ನಿಸರ್ಗದ ಪ್ರಚೋದಕಶಕ್ತಿಯಾದ ಆಟದ ವೃತ್ತಿಯು ಬಾಲಕರ ಚಟುವಟಿಕೆಗಳನ್ನು ಪ್ರೇರಿಸಬೇಕು.

(೩) ಆಟದ ಮುಖಾಂತರವಾಗಿ ಬಾಲಕನು ಸುಖದಾಯಕವಾದ ಉಪಯುಕ್ತತೆಯುಳ್ಳ ರೂಢಿಗಳನ್ನು ಕಲಿಯತಕ್ಕದ್ದು.

(೪) ಪಠ್ಯಕ್ರಮವು ಗತಸಂಪ್ರದಾಯದ ಆಧಾರದ ಮೇಲೆ ನಿಲ್ಲದೆ ಆದು ವರ್ತಮಾನ, ಭವಿಷ್ಯತ್ಕಾಲಗಳ ಬೇಡಿಕೆಗಳನ್ನು ಸಮಾಧಾನಗೊಳಿಸಬೇಕು.

(೫) ಎಲ್ಲ ಪ್ರದೇಶಗಳಲ್ಲಿಯ ಬಾಲಕರ ಅಗತ್ಯಗಳನ್ನು ಚೆನ್ನಾಗಿ ಅನುಲಕ್ಷಿಸಿ ಪಠ್ಯಕ್ರಮದ ರೂಪರೇಷೆಯನ್ನು ನಿರ್ಣಯಿಸಬೇಕು. ಪರಿಸ್ಥಿತಿಗೆ ತಕ್ಕಂತೆ ಅವಶ್ಯವಾದ ಮಾರ್ಪಾಡುಗಳನ್ನು ಮಾಡಿಕೊಳ್ಳಬೇಕು.

(೬) ಶಾಲೆಯ ಪರಿಸ್ಥಿತಿಯು ಆದಷ್ಟು ಮಟ್ಟಿಗೆ ಸಂಸಾರದಲ್ಲಿಯ ಅನುಭವಗಳ ಪುನರಾವೃತ್ತಿಯಾಗುವಂತೆ ರಚಿಸಲ್ಪಡಬೇಕು. ಅಪೂರ್ಣವಾದ ಅಥವಾ ತುಣುಕು-ಮಿಣುಕಾದ ಅನುಭವಗಳಿಗೆ ಆಶ್ರಯವನ್ನು ಕೊಡಬಾರದು.

(೭) ಇಂಥ ಪರಿಸ್ಥಿತಿಯಿಂದ ಉದ್ಭವಿಸಿದ ಅಭಿರುಚಿಯು ಯೋಗ್ಯ ವಿಚಾರಗಳನ್ನು ಹುಟ್ಟಿಸಿ, ಶಾಲೆಯಲ್ಲಿಯ ಜೀವನವನ್ನು ಸಜ್ಜುಗೊಳಿಸಬೇಕು.

(೮) ಓದು, ಬರೆಹ, ಲೆಕ್ಕ ಮುಂತಾದ ವಿಷಯಗಳು ಜೀವನಕ್ಕೆ ಸಂಬಂಧವಿದ್ದ ವ್ಯವಹಾರಗಳಂತೆ ಕಲಿಸಲ್ಪಡಬೇಕು. ತರ್ಕಬದ್ಧ ರೀತಿಯಿಂದ ಕಲಿಸದೆ ಮಾನಸಶಾಸ್ತ್ರದ ನಿಯಮದಂತೆ ಅವುಗಳನ್ನು ಕಲಿಸಬೇಕು.

(೯) ಕ್ರಿಯಾಶಕ್ತಿಯನ್ನೂ ವಿಚಾರಶಕ್ತಿಯನ್ನೂ ಪ್ರೋತ್ಸಾಹಿಸುವ ವಿಷಯಗಳಿಗೆ ವಿಪುಲ ಸಂಧಿಗಳಿರಬೇಕು.

(೧೦) ಆಯಾ ವರ್ಗಗಳಲ್ಲಿಯ ಚಟುವಟಿಕೆಗಳಿಂದ ಮಾತ್ರವಲ್ಲದೆ ಬೇರೆ ಬೇರೆ ವರ್ಗಗಳ ಸಹಕಾರದಿಂದ ಸಾಮೂಹಿಕವಾದ ಅರಿವನ್ನೂ ಸೌಹಾರ್ದವನ್ನೂ ಬಲಪಡಿಸಬೇಕು

# ೧೩
# ಕ್ರೀಡನ

**ಕ್ರೀಡನ** ( ಆಟ ) ವೆಂದರೆ ವ್ಯರ್ಥವಾಗಿ ವೇಳೆಯನ್ನು ಕಳೆಯುವ ಹಂಚಿಕೆ ಎಂದೂ ಹೇಗಾದರೂ ಸಹಿಸತಕ್ಕ ಒಂದು ಅನಿಷ್ಟವೆಂದೂ ಅದು ತೀವ್ರವಾಗಿ ಮುಗಿದರೆ ಒಳ್ಳೆಯದೆಂದೂ ಸಾಮಾನ್ಯ ಜನರು ಅದರಲ್ಲಿ ಅನಾದರವನ್ನು ಅಥವಾ ತಿರಸ್ಕಾರವನ್ನು ವ್ಯಕ್ತಪಡಿಸುವರು. ಆಟದಲ್ಲಿ ವೇಳೆಯನ್ನು ಕಳೆಯುವ ಬಾಲಕನು ಉಡಾಳನೆಂದೂ ಆದರ್ಶವಿದ್ಯಾರ್ಥಿಯು ಆಟವಾಡಿ ವೇಳೆಯ ಅಪವ್ಯಯವನ್ನು ಸರ್ವಥಾ ಮಾಡನೆಂದೂ ಅವರ ಅಭಿಪ್ರಾಯ. ಆದರೆ ಪುಸ್ತಕಗಳನ್ನೇ ಯಾವಾಗಲೂ ಕೈಯಲ್ಲಿ ಹಿಡಿಯುವ ವಿದ್ಯಾರ್ಥಿಯು ಪಾಂಡಿತ್ಯದಲ್ಲಿಯಾಗಲಿ, ವ್ಯವಹಾರದಲ್ಲಿಯಾಗಲಿ, ಸಮಾಜದಲ್ಲಿಯೆ ಆಗಲಿ, ಮುಂದುವರಿಯುವನೆಂದು ಯಾರೂ ಎದೆತಟ್ಟಿ ಹೇಳಲಾರರು. ಪುಸ್ತಕ-ಪಾಂಡಿತ್ಯವೇ ಜೀವನದ ಮುಖ್ಯ ಧ್ಯೇಯವಲ್ಲ. ದೇಹಬಲ, ಆತ್ಮಿಕ ಸಾಮರ್ಥ್ಯ, ಸಮಾಜಸೇವೆ— ಇವುಗಳಿಂದಲೇ ವ್ಯಕ್ತಿಯ ಯೋಗ್ಯತೆಯನ್ನು ನಿರ್ಣಯಿಸಬೇಕಾಗುವುದು. ಆಟವು ಇವೆಲ್ಲ ಶಕ್ತಿಗಳನ್ನು ಹೇಗೆ ಪೂರೈಸುವುದೆಂದು ಮನಸದಟ್ಟಾಗುವಂತೆ ಅದರ ಸ್ವರೂಪವು ತಿಳಿಯಬೇಕಾದರೆ ಆಟದ ಯಥಾರ್ಥ ಕಲ್ಪನೆಯನ್ನು ಮಾಡಿಕೊಳ್ಳುವುದು ಅವಶ್ಯವಾದ ವಿಷಯ.

ಸ್ವಾಭಾವಿಕವಾಗಿ ಮಗುವಿಗೆ ಆಟವು ಮೆಚ್ಚಿನ ವಿಷಯ ಅಥವಾ ಹುಟ್ಟುಗುಣವು. ಆಟದ ಮುಖಾಂತರವಾಗಿಯೇ ಅದು ತನ್ನ ಸ್ವಾಭಾವಿಕ ಶಕ್ತಿಗಳನ್ನು ವ್ಯಕ್ತಗೊಳಿಸುತ್ತದೆ. ತನ್ನ ಶಕ್ತಿಗಳನ್ನು ಉಪಯೋಗಿಸುವುದಕ್ಕೂ, ಚಟುವಟಿಕೆಯಲ್ಲಿ ತನಗಿರುವ ಹಂಬಲವನ್ನು ವ್ಯಕ್ತಪಡಿಸುವುದಕ್ಕೂ, ಆಟವನ್ನೇ ಮುಖ್ಯ ಸಾಧನವನ್ನಾಗಿ ಮಾಡಿಕೊಳ್ಳುವುದು. ಹೀಗೆ ಮಾಡದೆ ಅದಕ್ಕೆ ಗತ್ಯಂತರವಿಲ್ಲ. ಹುಡುಗನು ತನ್ನ ಆಟದ ಸಾಹಾಯ್ಯದಿಂದಲೇ ಶಾರೀರಿಕ ಬಲವನ್ನು ತಂದುಕೊಳ್ಳುತ್ತಾನೆ; ಮತ್ತು

ಆಟಗಳಲ್ಲಿಯೇ ಸಮಾಜದ ಪರಿಚಯವನ್ನೂ ಮಾಡಿಕೊಳ್ಳುತ್ತಾನೆ. ಆತನು ತನ್ನ ಚಟುವಟಿಕೆಗಳ ಮೂಲಕವಾಗಿ ವಸ್ತುಗಳ ಜ್ಞಾನವನ್ನೂ ಮಾಡಿಕೊಳ್ಳುತ್ತಾನೆ; ತನ್ನ ಓರಿಗೆಯವರ ಕೂಡ ಹೇಗೆ ಇರಬೇಕೆಂಬು ದನ್ನು ಅರಿತುಕೊಳ್ಳುತ್ತಾನೆ; ಅಲ್ಲದೆ ಸುತ್ತುಮುತ್ತಲಿನ ಪರಿಸ್ಥಿತಿಗೆ ತಕ್ಕಂತೆ ತನ್ನಲ್ಲಿ ಮಾರ್ಪಾಡುಗಳನ್ನು ಮಾಡಿಕೊಳ್ಳಲಿಕ್ಕೆ ಸಮರ್ಥ ನಾಗುತ್ತಾನೆ; ಆಟದಲ್ಲಿ ತನ್ನನ್ನು ತಾನು ಅರಿತುಕೊಂಡು, ಅನೇಕ ವಿಚಾರ ಗಳ ಲಾಭವನ್ನು ಪಡೆಯುತ್ತಾನೆ.

ಮಗುವು ಬೆಳೆದಂತೆ ಆಟದ ಸ್ವರೂಪವು ಬದಲಾಗುವುದು.

(೧) ತೊಟ್ಟಿಲಲ್ಲಿಯ ಕೂಸಿಗೆ ಕೈಕಾಲುಗಳನ್ನು ಅಲ್ಲಾಡಿಸುತ್ತ ನಗುವುದೇ ಆಟ; ದೊಡ್ಡದಾದ ಬಳಿಕ ಏಳುವ, ಕೂಡುವ, ಓಡಾಡುವ ಆಟಗಳು; ಅದಕ್ಕೂ ಮುಂದೆ ಬಯಲಲ್ಲಿ ವ್ಯವಸ್ಥಿತವಾಗಿ ಆಡುವ ಆಟಗಳು. ಈ ರೀತಿಯಿಂದ ದೇಹದ ಎಲ್ಲ ಶಕ್ತಿಗಳನ್ನು ವಶಮಾಡಿ ಕೊಂಡು ಶಕ್ಯವಿದ್ದಷ್ಟು ಅವನ್ನು ಹುಡುಗನು ಆತಂಕದಲ್ಲಿಟ್ಟು ಕೊಳ್ಳುವನು. “ಈ ಅವಧಿಯಲ್ಲಿಯ ಆಟಗಳೇ ಜೀವನದ ಆಗುಹೋಗು ಗಳ ಬಗೆಗೆ ಬಾಲಕನ ಧೋರಣವನ್ನು ತೋರಿಸುವುವು.”

(೨) ಆಟದಲ್ಲಿ ತನ್ನ ಬೌದ್ಧಿಕ ಶಕ್ತಿಗಳನ್ನು ಕಂಡುಕೊಂಡು, ಪ್ರೌಢಾವಸ್ಥೆಯಲ್ಲಿ ಯಾವ ಅಭಿರುಚಿಗಳು ಮುಖ್ಯವಾಗಿ ತನ್ನನ್ನು ಆಕರ್ಷಿಸಬಹುದೆಂಬುದನ್ನು ಅವನು ಗೊತ್ತುಹಿಡಿಯುವನು.

(೩) ತಾರುಣ್ಯದಲ್ಲಿ ಸಾಂಘಿಕವಾದ ಅಥವಾ ಸಾಮೂಹಿಕವಾದ ಆಟಗಳಲ್ಲಿ ಯುವಕ-ಯುವತಿಯರು ತಮ್ಮ ನೈತಿಕವರ್ತನೆಯ ಹಾಗೂ ಸಾಮಾಜಿಕವರ್ತನೆಯ ಹೊಣೆಯನ್ನು ಕಂಡುಹಿಡಿದು ತಮ್ಮ ನಡತೆ ಯನ್ನು ಮಾರ್ಪಡಿಸಿಕೊಳ್ಳುವರು.

(೪) ಪ್ರೌಢಾವಸ್ಥೆಯಲ್ಲಿ ಜೀವನದಲ್ಲಿಯ ದಿನಗಟ್ಟಲೆಯ ಹೋರೆ ಗಳಲ್ಲಿ ಉಂಟಾದ ಮಾನಸಿಕ ಹಾಗೂ ಶಾರೀರಿಕ ಶ್ರಮಗಳನ್ನು ಹೋಗಲಾಡಿಸಲೆಂದು ಆಟಗಳಲ್ಲಿ ಮನಸ್ಸನ್ನು ತೊಡಗಿಸಿದರೆ, ಅವಶ್ಯವಿದ್ದ ವಿಶ್ರಾಂತಿಯನ್ನು ಪಡೆಯುವ ಒಲವು ಉಂಟಾಗುವುದು.

ಆಟದ ನಿಜಸ್ವರೂಪವನ್ನು ಆಲೋಚಿಸಿದರೆ ಆಟವು ಆನಂದದ ಸಲುವಾಗಿ ಕೈಕೊಂಡ ಚಟುವಟಿಕೆ ಎಂದು ಕಾಣಬರುವುದು. ಅದರಿಂದ ಲಾಭವನ್ನು ಪಡೆಯುವ ವಿಚಾರವು ಸ್ವಲ್ಪವೂ ಇರುವುದಿಲ್ಲ. ಅದು ಕೆಲಸದಿಂದ ಭಿನ್ನವಾದುದು. ಕೆಲಸದಲ್ಲಿ ಮುಂದಾಗುವ ಲಾಭದ ಯೋಚನೆಯಿದೆ. ಕೆಲಸಮಾಡುವವನಿಗೆ ತನ್ನ ಕಾರ್ಯವನ್ನು ಬೇಕಾದಾಗ ನಡೆಯಿಸಲಿಕ್ಕೂ ಬೇಡವಾದಾಗ ಬಿಡಲಿಕ್ಕೂ ಬೇಕಾದಂತೆ ಮಾಡಲಿಕ್ಕೂ ಸ್ವಾತಂತ್ರ್ಯವಿದ್ದರೆ ಅವನ ಕೆಲಸವು ಆಟವೆನಿಸಬಹುದು. ಯಾವುದಾದರೊಂದು ಚಟುವಟಿಕೆಯನ್ನು ನಿರ್ವಾಹವಿಲ್ಲದೆ, ಅಗತ್ಯವಾಗಿ, ಕರ್ತವ್ಯವೆಂದಾಗಲಿ, ಹೊರೆಯ ಭಾಗವೆಂದಾಗಲಿ, ಮಾಡಬೇಕಾದರೆ ಅದಕ್ಕೆ 'ಕೆಲಸ'ವೆನ್ನಬೇಕು. ಸ್ವಯಂಸ್ಫೂರ್ತಿಯಿಂದ ಬಾಹ್ಯನಿರ್ಬಂಧಗಳನ್ನು ದೂರೀಕರಿಸಿ, ಮನಸ್ಸಿಗೆ ಬೇಕೆನಿಸಿ, ಕೈಕೊಂಡ ಚಟುವಟಿಕೆಯು ಆಟವೆನಿಸಬಹುದು. ಇಲ್ಲವಾದರೆ, ಸ್ವಚ್ಛಂದತೆಗೆ ಭಂಗಬರುವಂತಿದ್ದರೆ— ಆಟಕ್ಕೂ ಕೆಲಸಕ್ಕೂ ಭೇದವೇನು? ಆಟದಲ್ಲಿಯೂ ಅಸಹ್ಯವಾದ ನಿರ್ಬಂಧಗಳನ್ನು ಹಾಕಿಕೊಂಡರೆ ಆಟವು ಕೆಲಸವಾಗಿ ಪರಿಣಮಿಸುವುದು. ಆಟದ ಅನುಭವವೆಂದರೆ ಆನಂದದ ಅನುಭವ. ಆನಂದಾನುಭವವುಳ್ಳ ಹೊರೆಯು ಕೂಡ ಆಟವೇ ಎನಿಸುವುದು. ಯಶೋಭಾಗಿಯಾಗುವ ಇಂಜಿನಿಯರನು, ಸ್ಫೂರ್ತಿಶಾಲಿಯಾದ ಶಿಕ್ಷಕನು, ಪ್ರವೀಣನಾದ ಶಸ್ತ್ರಕ್ರಿಯಾಚಿಕಿತ್ಸಕನು— ಮುಂತಾದವರ ಹೊರೆಗಳಲ್ಲಿ ಆಟದ ಆನಂದಾನುಭವವಿರುವುದು. ಹೊರೆಯಲ್ಲಿ ಅಭಿರುಚಿಯೂ ಆಸಕ್ತಿಯೂ ಇಲ್ಲದವನಿಗೆ ಯಾವ ಕೆಲಸವಾದರೂ ಭಾರವೆನಿಸುವುದು. ಕಾರ್ಯವನ್ನು ಮಾಡುವಾಗ ಸಹಜವಾಗಿ ಆನಂದವು ದೊರೆಯುವಂತೆ ಅದನ್ನು ಜರುಗಿಸಿದರೆ ಆ ಕಾರ್ಯವೇ ಆಟವೆನಿಸುವುದು. 'ಕಾರ್ಯವೇ ಆಟ, ಆಟವೇ ಕಾರ್ಯ' ಈ ಪರಿಸ್ಥಿತಿಯನ್ನುಂಟುಮಾಡುವುದೇ ಅವೆರಡರ ಮಹತ್ತ್ವವನ್ನು ಹೆಚ್ಚಿಸಿದಂತೆ ಆಗುವದೆಂದು ತಜ್ಞರ ಅಭಿಪ್ರಾಯ. ಸ್ವಯಂಸ್ಫೂರ್ತಿಯೇ ಆಟದ ಗುಟ್ಟು. ಆಟದಲ್ಲಿ ಯಾವ ತಡೆಯೂ ಇಲ್ಲದಿದ್ದರೆ, ಅದು ಉತ್ತಮ ದೇಹಘಟನೆ, ಹೆಚ್ಚಿನ ಆತ್ಮವಿಕಾಸ, ಅನ್ಯೈಕ್ಯದಲ್ಲಿ ಐಕ್ಯದ ಅರಿವು- ಇವುಗಳನ್ನುಂಟುಮಾಡಿ ಕೊಡಲು

ಸಮರ್ಥವಾಗುವುದು. '**ನಿಸರ್ಗವು ಆಟವನ್ನು ಹುಡುಕಿ ತೆಗೆದುದು ಹೆಚ್ಚಿನ ಶಕ್ತಿಯನ್ನು ಹೊರದೂಡಲಿಕ್ಕಲ್ಲ; ಜೀವನದ ಗಂಭೀರ ಸ್ಥಿತಿಯನ್ನು ಎದುರಿಸುವ ಸಿದ್ಧತೆಯ ಹಂಚಿಕೆಯನ್ನು ತೋರಿಸುವುದಕ್ಕಾಗಿ**' ಎಂದು ತಿಳಿಯತಕ್ಕದ್ದು. ಆಟದಲ್ಲಿಯೇ ವ್ಯಕ್ತಿತ್ವವು ಪ್ರಫುಲ್ಲಿತವಾಗಿ ಪ್ರಕಟಗೊಳ್ಳುವುದು. ವ್ಯಕ್ತಿತ್ವವನ್ನು ಪ್ರಕಟಗೊಳಿಸುವ ಪ್ರಾಯೋಗಿಕಕ್ಷೇತ್ರವೇ ಆಟವು. ಬರುಬರುತ್ತ ಆಟ ಮತ್ತು ಕೆಲಸ ಇವು ಒಂದನ್ನೊಂದು ಹೋಲುವುವು. ಆಟದಲ್ಲಿ ನಮ್ಮ ಶಕ್ತಿಗಳನ್ನು ಉಪಯೋಗಿಸಿದರೆ ಆಟವು ಕೆಲಸವು; ಕೆಲಸದಲ್ಲಿ ನಿರ್ಬಂಧವನ್ನು ಎದುರಿಗೆ ಇಟ್ಟುಕೊಳ್ಳದೆ, ಕೆಲಸದ ಆನಂದಕ್ಕಾಗಿ ಕೆಲಸವೆಂದು ಅದನ್ನು ಮಾಡಿದರೆ ಕೆಲಸವೇ ಆಟವು.

ಆಟದ ಸ್ವರೂಪದ ವಿಷಯದಲ್ಲಿ ನಾಲ್ಕು ಸಿದ್ಧಾಂತಗಳಿವೆ :—

೧. **ಹೆಚ್ಚಾದ ಶಕ್ತಿಯನ್ನು ಹೊರಗೆಡಹುವುದು.**— ಒಂದು ದಿನದ ಕೆಲಸಕ್ಕೆ ಬೇಕಾಗುವ ಶಕ್ತಿಗಿಂತ ಹೆಚ್ಚಿನ ಶಕ್ತಿಯನ್ನು ಮಾನವರು ಸಂಗ್ರಹಿಸುವ ಸಂಭವವುಂಟು. ಚಿಕ್ಕಮಕ್ಕಳಿಗೆ ಇಂಥ ಶಕ್ತಿಯು ವಿಪುಲವಾಗಿ ಉಳಿದು ಅದನ್ನು ಅವರು ಆಟದ ಮುಖಾಂತರವಾಗಿ ಹೊರಗೆಡಹುವರು. ಆದರೆ ಈ ಸಿದ್ಧಾಂತವು ಸರಿಯಾಗಿ ತೋರುವುದಿಲ್ಲ. ನಡೆದು ನಡೆದು ಕಾಲುಸೋತ ಹುಡುಗನು ಕೂಡ ಕಣ್ಣುಮುಚ್ಚಾಲೆಯ ಆಟದ ಹೆಸರನ್ನು ಎತ್ತಿದ ಕೂಡಲೆ ಉತ್ಸಾಹದಿಂದ ಆಟದಲ್ಲಿ ಧುಮುಕುವನು. ಕೆಲಸಮಾಡಿ ದಣಿದು ಬೇಸತ್ತು ಬಂದವನು ಉತ್ಸಾಹದಿಂದ ಸಂಜೆಗೆ ಯಾವುದಾದರೊಂದು ಆಟದಲ್ಲಿ ತೊಡಗುವನು. ಆಟದ ಹುರುಪಿನಲ್ಲಿ, ತನ್ನನ್ನು ಇನ್ನುಳಿದ ವೇಳೆಯಲ್ಲಿ ಬೇಸರಗೊಳಿಸುವ ಶ್ರಮವನ್ನು ಸಹಿಸುವನಲ್ಲದೆ, ಮೊದಲಿಗಿಂತ ಇಮ್ಮಡಿಯಾದ ಉತ್ಸಾಹದಿಂದ ಅವನು ಆಟವಾಡುವನು. ದೇಹದಲ್ಲಿಯ ನರಗಳಿಂದ ಪೂರೈಸಲು ಅಸಾಧ್ಯವಾದ ಇಂಥ ಹೊಸ ಹುರುಪು ಮಿದುಳಿನ ಬೇರೆ ವಿಶಿಷ್ಟ ಭಾಗಗಳಿಂದ ದೇಹಕ್ಕೆ ದೊರಕುವುದೆಂದು ಪ್ರೊ. ಮ್ಯಾಕ್‌ಡೂಗಲ್ಲರು ಸೂಚಿಸುತ್ತಾರೆ. ದೇಹ-ಯಂತ್ರಕ್ಕೆ ಸಾಕಷ್ಟು ಶಕ್ತಿಯಿಲ್ಲದಾಗ ಸಾಂಪ್ರದಾಯದಿಂದ ರೂಢಿಯಲ್ಲಿ

ಬಂದ ಕೆಲವು ವಿಚಾರಗಳ ಅಥವಾ ವಿಚಾರಶ್ರೇಣಿಗಳ ಸಾಹಾಯ್ಯದಿಂದ ನವಚೈತನ್ಯವುಂಟಾಗಿ ಕಾರ್ಯದ ಶ್ರಮವು ಇಲ್ಲದಂತಾಗುವುದು. ಆದ್ದರಿಂದ ವಿಹಾರಕ್ಕಾಗಿ ನದಿಗೆ ಅಥವಾ ವನಭೋಜನಕ್ಕೆ ಹೋಗುವಾಗ ಆಗುವ ಶ್ರಮವು ಪ್ರೇಮಸಲ್ಲಾಪಗಳನ್ನಾಡುತ್ತ ಮೆಚ್ಚಿನ ಮಡದಿಯ ಕೂಡ ಅಥವಾ ಪ್ರೀತಿಯ ಗೆಳೆಯರ ಕೂಡ ಹೋಗುವ ಆನಂದದ ಭರದಲ್ಲಿ ಮರೆತುಹೋಗುವುದು. ಅದೇ ಮೇರೆಗೆ ವರ್ಗದಲ್ಲಿ ತೀರ ಹಿಂದುಳಿದ ಬಾಲಕನು ಮೇಲಾಟದಲ್ಲಿ ತನ್ನ ಪಕ್ಷದ ಗೆಲುವನ್ನು ದೊರಕಿಸಬೇಕೆನ್ನುವ ಹುಮ್ಮಸದಿಂದ ಬೌದ್ಧಿಕ ಸಾಹಸಗಳನ್ನು ಮಾಡಿ ತೋರಿಸಬಹುದು. ಆದ್ದರಿಂದ ಆಟಪಾಟಗಳು ದಣಿದ ದೇಹವನ್ನೂ ಬೇಸರಗೊಂಡ ಮನವನ್ನೂ ಪುನರುಜ್ಜೀವನಗೊಳಿಸುವ ಸಾಧನಗಳಾಗಿವೆ.

೨. **ಮುಂದಣ ಜೀವನದ ಪೂರ್ವ ಸಿದ್ಧತೆ:— ಕಾರ್ಲಗ್ರೂಸ** ಎಂಬವನ ಸಿದ್ಧಾಂತದಂತೆ ಆಟವು ಪ್ರಾಣಿಶಾಸ್ತ್ರದ ನಿಯಮಕ್ಕನುಸರಿಸಿ ಮುಂದಣ ಜೀವನದ ಚಟುವಟಿಕೆಗಳನ್ನು ಸೂಚಿಸುವುದು. ಪ್ರಾಣಿಗಳೂ ಚಿಕ್ಕಮಕ್ಕಳೂ ತಮ್ಮ ಸಹಜ ಪ್ರವೃತ್ತಿಗಳನ್ನು ಮುಂದೆ ತಮಗೆ ಉಪಯೋಗವಾಗುವಂತೆ ಆಟದಲ್ಲಿ ಉಪಯೋಗಿಸುವುವು. ಬೆಕ್ಕಿನ ಮರಿಗಳು ಮುಂದೆ ತಮಗೆ ಇಲಿಗಳ ಬೇಟೆಯಾಡಲು ಬರುವಂತೆ ಚಂಡಿನ ಕೂಡ ಚಿನ್ನಾಟವಾಡುವುವು. ಹುಡುಗೆಯು ಗೊಂಬೆಯ ಆಟವನ್ನು ಆಡುತ್ತ ತನ್ನ ಭಾವಿ ಜೀವನದ ಹೊಣೆಗೆ ಸಂಚಕಾರವನ್ನು ಕೊಡುವಳು. ಹುಡುಗರು ಭಾವಿ ಪ್ರಪಂಚದ ಭಾರವನ್ನು ಚೆನ್ನಾಗಿ ಸಾಗಿಸಲು ಅನುಕೂಲವಾದ ಆಟಗಳನ್ನು ಆಡುವರು. ಹೀಗೆ ಆಟದ ಬೌದ್ಧಿಕ ಸ್ವರೂಪವು ವ್ಯಕ್ತವಾಗುವುದು.

೩. **ಮಾನವಕುಲದ ಹಿಂದಿನ ಪ್ರಗತಿಯ ದ್ಯೋತಕ:—** ಆಟವು ಮಾನವಕುಲದ ಹಿಂದಿನ ಪ್ರಗತಿಯ ಮೆಟ್ಟಿಲುಗಳನ್ನು ಸೂಚಿಸುವುದೆಂದು **ಡಾ. ಸ್ಟ್ಯಾನ್ಲೇ ಹಾಲ್** ಇವರ ಪ್ರತಿಪಾದನೆಯು. ಒಂಬತ್ತು ವರ್ಷದ ಹುಡುಗನು ಕಾಲ್ಪನಿಕ ರೀತಿಯಿಂದ ರಕ್ತಪಾತದಲ್ಲಿ ಆನಂದಪಟ್ಟು ಮಾನವಕುಲದ ಇತಿಹಾಸದಲ್ಲಿಯ ಕಾಡಾಡಿಗನ

( Bushman ) ಪರಿಸ್ಥಿತಿಯ ನೆನಪನ್ನು ತಂದುಕೊಡುವನು. ಕ್ರೌರ್ಯಗಳ ಮತ್ತು ದುಷ್ಕೃತಿಗಳ ಕಡೆಗಿರುವ ತನ್ನ ಸಹಜ ಒಲವನ್ನು ಮನುಷ್ಯನು ಎಷ್ಟು ಸುಧಾರಿಸಿದರೂ ಸಂಪೂರ್ಣವಾಗಿ ಬಿಟ್ಟುಬಿಡಲಾರನು. ಆದ್ದರಿಂದ ಆಟಗಳ ಸಾಹಾಯ್ಯದಿಂದ ಈ ಬಗೆಯ ಹರಿಯು ಹೊರ ಹೊಮ್ಮುವಂತೆ ಮಾಡಿ, ದುಷ್ಟವಿಚಾರಗಳ ಪ್ರಾಬಲ್ಯವನ್ನು ಕುಗ್ಗಿಸಿ, ನೈತಿಕೋನ್ನತಿಯನ್ನು ಪಡೆಯುವಂತೆ ಮಾಡಲು ಸಾಧ್ಯವಿದೆಯೆಂದು ಸ್ಟ್ಯಾನ್ಲೆಯವರ ಅಭಿಪ್ರಾಯ.

ಈ ಸಿದ್ಧಾಂತವು ಹೊಸ ಆಟಗಳ ಅಥವಾ ಪ್ರೌಢರ ಆಟಗಳ ಹುಟ್ಟಿನ ವಿಷಯವಾಗಿ ಸಮಾಧಾನಕರ ಕಾರಣಗಳನ್ನು ಕೊಡಲಾರದು. ಆಟಗಳು ಕರ್ಮೇಂದ್ರಿಯಗಳ ವ್ಯಾಪಾರವೆಂಬ ಮಾತಿನ ಕಡೆಗೆ ಹೆಚ್ಚಿನ ಗಮನ ವನ್ನು ಕೊಟ್ಟು ನಿಶ್ಚಿತವ್ಯಾಯಾಮಪ್ರಕಾರಗಳ ಸ್ಥಾನದಲ್ಲಿ ನರ್ತನ, ನರ್ತನದಿಂದ ಕೂಡಿದ ಅಭಿನಯ, ಮುಂತಾದವುಗಳನ್ನು ಸೂಚಿಸಿ, ಬಾಲಕ-ಬಾಲಿಕೆಯರು ದೇಹವನ್ನು ಹೆಚ್ಚು ಆತಂಕದಲ್ಲಿ ಇಟ್ಟುಕೊಳ್ಳ ಬೇಕೆಂದು ಇದು ಸಾರುವುದು. ಆದ್ದರಿಂದ ಈ ಸಿದ್ಧಾಂತವು ಮೇಲಿನ ಸಿದ್ಧಾಂತಕ್ಕೆ ಪೂರಕವಾಗುವುದೇ ಹೊರತು ವಿರೋಧಕವಾಗಿರುವುದಿಲ್ಲ.

**೪. ಮನೋರಂಜನೆಯ ಸಾಧನ:—** ಮನೋರಂಜನೆಯೇ ಆಟದ ಮುಖ್ಯೋದ್ದೇಶ. ಮನುಷ್ಯನು ತನಗಾದ ದಣಿವನ್ನು ಸುವ್ಯವಸ್ಥಿತ ವಾದ ಆಟನೋಟಗಳಲ್ಲಿಯೆ ಭಾಗವಹಿಸಿ ಕಳೆದುಕೊಳ್ಳುವನು. ವಿದ್ಯಾರ್ಥಿಗಳು ಅಭ್ಯಾಸಕ್ರಮವು ಮುಗಿದ ಕೂಡಲೆ ವಿಶ್ರಾಂತಿಗಾಗಿ ಕ್ರೀಡಾಂಗಣಕ್ಕೆ ಓಡುತ್ತಹೋಗುವರು. ಕೆಲಸದಿಂದ ತೀರ ಬೇಸತ್ತಿದ್ದರೂ ಆಟವಾಡುವುದರಲ್ಲಿ ಅವರಿಗೆ ಅತ್ಯಾನಂದವಾಗುತ್ತದೆ. ಶಕ್ತಿಯನ್ನು ಪೂರೈಸುವ ಮತ್ತು ಅದನ್ನು ಆತಂಕದಲ್ಲಿಡುವ ನರಗಳ ಕೇಂದ್ರಗಳು ಬಲಹೀನವಾದರೆ, ಮಿದುಳಿನ ಬೇರೆ ಕೇಂದ್ರಗಳಿಂದ ನವಸಾಮರ್ಥ್ಯವು ಉದ್ಭವಿಸಿ, ಆಟಗಳನ್ನಾಡುವಂತೆ ಪ್ರೋತ್ಸಾಹಿಸುತ್ತದೆ. ಆದ್ದರಿಂದ ಮನೋರಂಜನೆಯೇ ಆಟದ ಗುರಿಯಾಗುವುದು.

ಇನ್ನು, ಆಟಗಳಿಂದಾಗುವ ಸಾಮಾನ್ಯ ಲಾಭಗಳನ್ನು ವಿವೇಚಿಸು ವುದು ವಿಹಿತವಾದುದೆಂದೂ ಆವಶ್ಯಕವಾದುದೆಂದೂ ತೋರುತ್ತದೆ.

ಆಟದಿಂದ ಕೆಳಗೆ ಕಾಣಿಸಿದ ಸಾಮಾನ್ಯ ಲಾಭಗಳಾಗುತ್ತವೆಂದು ಹೇಳಬಹುದು.

(ಅ) ಆಟವು ಜೀವನದ ಸಿದ್ಧತೆಯನ್ನು ಮಾಡಿ ಕೊಡುವುದಲ್ಲದೆ ಬಾಲಕರಲ್ಲಿ ಹುಟ್ಟಿನಿಂದಲೂ ಬಂದಿರುವ ಮಾನವಕುಲಕೆ ಸಾಮಾನ್ಯವಾದ ದುಷ್ಟಪ್ರವೃತ್ತಿಗಳನ್ನು ಆಟದ ಮುಖಾಂತರವಾಗಿ ಮರೆಯಿಸಿ ಜೀವನದ ಉದಾತ್ತ ಧ್ಯೇಯಗಳನ್ನು ಸಾಧಿಸಲು ಸಹಾಯವಾಗುವುದು.

(ಆ) ಆಟವು ಬಾಲ-ಬಾಲಿಕೆಯರ ಅಸ್ತವ್ಯಸ್ತವಾದ ಹೆಚ್ಚಿನ ಶಕ್ತಿಯನ್ನು ಕೇಂದ್ರೀಕರಿಸಿ ಸುವ್ಯವಸ್ಥಿತಗೊಳಿಸುವುದು. ಚಿಕ್ಕಮಕ್ಕಳು ತೀವ್ರವೇ ದಣಿಯುವುದರಿಂದ ಅವರನ್ನು ಆಟಗಳ ಸಾಹಾಯ್ಯದಿಂದ ವಿಶ್ರಾಂತಿಗೊಳಿಸಿ ಪುನಃ ಪಾಠಗಳನ್ನು ಹೇಳಿಕೊಡುತ್ತಿರಬೇಕು.

(ಇ) ಆಟದಿಂದಲೇ ದೇಹದ ಮತ್ತು ಮನಸ್ಸಿನ ಸಹಕಾರವು ದೊರೆತು ಉತ್ತಮವಿಧದ ವ್ಯಕ್ತಿತ್ವವು ವಿಕಾಸಗೊಳ್ಳುವುದು. ಬಾಲಕರು ಮನಃಪೂರ್ವಕವಾಗಿ ಕೆಲಸಮಾಡಬೇಕಾದರೆ ಅವರ ಕೆಲಸಕ್ಕೆ ಆಟದ ರೂಪವನ್ನು ಕೊಡಬೇಕು. ಮನಃಪೂರ್ವಕವಾಗಿ ಕೆಲಸ ಮಾಡುವುದೇ ಆಟ.

(ಈ) "ಆಟವು ವ್ಯಕ್ತಿಯ ವೈಯಕ್ತಿಕವಾದ ಬೆಳವಣಿಗೆಯ ಸಾಧನವು." ಆಟದ ಕೃತಿಯು ಕಾರ್ಯರೂಪವಾಗಿ ಪರಿಣಮಿಸುವುದು. "ನಿಜವಾದ ಕೆಲಸವು ಆಟದಂತೆಯೆ ಕೈಕೊಳ್ಳಲ್ಪಡುವುದು. ಆಟದ ರೀತಿಯೇ ಬಹು ಮಹತ್ತ್ವವುಳ್ಳದು. ಅದು ಹಸಿವಿಗಿಂತ ಪ್ರಬಲವಾದ ಭಾವನೆ. ಕಲಾಕೋವಿದನು ಕಲೆಗಾಗಿ ಉಪವಾಸವನ್ನು ಸಹಿಸುವನು. ಆನಂದದಿಂದ ಕೈಕೊಂಡ ಕೆಲಸವೂ ಅಪವ್ಯಯವಾಗದ ವಿಶ್ರಾಂತಿಯೂ ಕೂಡಿಕೊಂಡು ಆಟವಾಗುವುವು." "ನಿಜವಾದ ಕಾರ್ಯವೇ ಆಟದ ಅತ್ಯುನ್ನತವಾದ ರೀತಿ."

(ಉ) "ಆಟವು ಬಾಲಕನ ಸಾಮಾಜಿಕ ವಿಕಾಸದ ಮೇಲೆ ಮಹತ್ತರವಾದ ಪರಿಣಾಮವನ್ನುಂಟುಮಾಡುವುದು." ಬೇರೆ ಹುಡುಗರ ಕೂಡ ಆಟವಾಡುವುದರಿಂದ ಏರಾಟ, ಜಗಳಾಟ, ಮುಂತಾದ ಸಹಜ

ಪ್ರವೃತ್ತಿಗಳನ್ನು ಉದಾತ್ತ ಧ್ಯೇಯಗಳನ್ನಾಗಿ ಪರಿವರ್ತಿಸಲು ಸಾಧ್ಯವಿದೆ. ಆಟವು ಸುತ್ತುಮುತ್ತಲಿನ ಪರಿಸ್ಥಿತಿಗೆ ತಕ್ಕಂತೆ ತನ್ನಲ್ಲಿ ಮಾರ್ಪಾಟನ್ನು ಮಾಡಿಕೊಳ್ಳಲು ಕಲಿಸುವುದು.

(ಊ) "ಆಟವು ಬಾಲಕರಿಗೆ ಸಹಕಾರದ, ನಾಯಕತ್ವದ ಮತ್ತು ವಿಧೇಯತ್ವದ ಪಾಠಗಳನ್ನು ಕಲಿಸುವುದು." ಬಾಲಕರು ಆಟವಾಡುವಾಗ, ಆಟದ ರೀತಿಯಿಂದ ಕೂಡಿ ನಡೆಯುವಾಗ, ಸಹಕಾರದ ಪರಸ್ಪರ ಸಾಹಾಯ್ಯದ ಆನಂದವನ್ನು ಅನುಭವಿಸುವರು. ಮುಂದೆ 'ಜೀವನ ಪ್ರಯೋಗ'ದಲ್ಲಿ ಈ ತತ್ತ್ವಗಳಂತೆ ಆಚರಿಸಲು ಸಾಧ್ಯವಾಗುವುದು.

(ಎ) "ಆಟವು ವಿದ್ಯಾರ್ಥಿಗಳ ಬೌದ್ಧಿಕ ವಿಕಾಸಕ್ಕೆ ಅವಶ್ಯ ವಾಗುವುದು." ಆಟವಾಗಲಿ, ಆಟದ ರೀತಿಯಿಂದ ಕೈಕೊಂಡ ಕೆಲಸ ವಾಗಲಿ ಮನಃಪೂರ್ವಕವಾದ ಅಭಿರುಚಿಯಿಂದ ಕೂಡಿರುವುದು. ಆಟವು ಶಿಕ್ಷಣದ ಮಟ್ಟಿಗೆ ಏರಬೇಕಾದರೆ ಬುದ್ಧಿಪ್ರಧಾನವಾದ ಆಟದ ಒಲವು ಗಳನ್ನು ಬುದ್ಧಿಪೂರ್ವಕವಾಗಿ ಬೆಳೆಯಿಸಲು ಶಿಕ್ಷಣ ಪದ್ಧತಿಗಳು ಯತ್ನಿಸ ಬೇಕು. 'ಜೀವನ ಪ್ರಯೋಗ'ವನ್ನು ಮಾಡಲು ಹಾರೈಸುವ ಹುಡುಗನ ಹಂಬಲನ್ನು ಹೆಚ್ಚಿಸುವ ಮುಖ್ಯಸಾಧನಗಳೆಂದು ಅವುಗಳನ್ನು ಉಪ ಯೋಗಿಸಬೇಕು.

(ಏ) "ಆಟವು ನಟನೆಯ ಸಾಹಾಯ್ಯದಿಂದ ವಿದ್ಯಾರ್ಥಿಗಳಲ್ಲಿ ಕ್ರಿಯಾಶಕ್ತಿಯನ್ನೂ ಉತ್ಪಾದಕ ಶಕ್ತಿಯನ್ನೂ ಕೊನರಿಸಿ ಬಲಪಡಿಸು ತ್ತದೆ." ನಟನಾಸಾಮ್ರಾಜ್ಯದಲ್ಲಿಯ ವಿಚಾರಗಳನ್ನು ಪ್ರತ್ಯಕ್ಷ ವ್ಯವಹಾರ ದಲ್ಲಿ ತರಲು ಅವಕಾಶವಿದೆ. ಕಾರ್ಲಗ್ರೂಸನು ಸೂಚಿಸಿದಂತೆ ವಿದ್ಯಾರ್ಥಿ ಗಳ ವಿಚಾರಗಳನ್ನು ಅವರವರ ನಟನಾ ಸಾಮ್ರಾಜ್ಯದ ತಿಳಿವಳಿಕೆ ಯಂತೆಯೆ, ಎಂದರೆ ಅವರು ಕವಿಗಳು, ನಾಟಕಕಾರರು, ಎಂಜಿನಿಯರರು, ಸರ್ವೇಯರರು, ರಸಾಯನಶಾಸ್ತ್ರಜ್ಞರು ಮುಂತಾದವರೇ ಆಗಿರುವರೆಂಬ ಕಲ್ಪನೆಯನ್ನು ಆಧಾರವಾಗಿ ಮುಂದಿಟ್ಟುಕೊಂಡು ಅವರ ಇಷ್ಟಗಳು ಈಡೇರುವಂತೆ ಅವರಿಗೆ ನೆರವಾಗಬೇಕು.

**ಆಟವೂ ಕಲೆಯೂ.—** ಆಟದಂತೆ ಕಲೆಗಾದರೂ ಸ್ವಯಂ- ಸ್ಫೂರ್ತಿಯೇ ಮೂಲಾಧಾರ. ಅಂತಃಶಕ್ತಿಯನ್ನು ರೂಪುಗೊಳಿಸುವುದೇ

ಕಲಾಭಿಜ್ಞನ ಧ್ಯೇಯ. "ಕವಿಗಳು ಕವನದಲ್ಲಿ ಸೇರಿಸಿರುವ ವಿಷಯಗಳನ್ನು ಸ್ವಾನುಭವದಿಂದ ಕಂಡುಹಿಡಿಯುವರು." ಹಾಗೆ ಮಾಡುವುದರಲ್ಲಿ ಅವರಿಗೆ ವಿಲಕ್ಷಣವಾದ ಆನಂದವೆನಿಸುವುದು. 'ಕ್ರಿಕೆಟ್' ಆಟಗಾರನು ತನ್ನ ಕೌಶಲ್ಯವನ್ನೂ ಶಕ್ತಿಯನ್ನೂ ತನ್ನ ಕೈಯೊಳಗಿನ ದಂಡದಿಂದ ಚೆಂಡನ್ನು ಹೊಡೆದೋಡಿಸುವುದರಲ್ಲಿ ತೋರಿಸಿ ಆನಂದಪಡುವಂತೆ, ಚಿತ್ರಗಾರ, ಮೂರ್ತಿಶಿಲ್ಪಿ, ಕವಿ, ಗಾಯಕ ಮುಂತಾದ ಕಲಾಕೋವಿದರು ತಮ್ಮ ಕೃತಿಗಳ ಮಾಟವನ್ನು ನೋಡಿ ನೋಡಿ ಆನಂದಪಡುವರು. ಜನಾಂಗದ ಆಟಗಳ ಸ್ವರೂಪವು ಅದರ ಕಲಾಕುಶಲತೆಯ ಯೋಗ್ಯತೆಯನ್ನು ನಿರ್ಣಯಿಸುವುದು. ಕೈಕೆಲಸಗಳಲ್ಲಿಯ ಕೌಶಲವು ಆಟದ ಸ್ವರೂಪವನ್ನೇ ಅವಲಂಬಿಸಿದೆಯೆಂದು **ವಿಲಿಯಮ್ ಮಾರಿಸ್** ಎಂಬ ಆಂಗ್ಲ ಕವಿಯ ಅಭಿಪ್ರಾಯ. ಪೂರ್ವಜರು ತಮ್ಮ ಹೆಚ್ಚಾದ ಶಕ್ತಿಯ ಉಪಯೋಗದಿಂದ ವಸ್ತುಗಳ ಸೌಂದರ್ಯವನ್ನು ಹೆಚ್ಚಿಸಲು ಸಾಧ್ಯವಿದೆಯೆಂದು ತಿಳಿದು ಹೊಸ ಹೊಸವಾದ ಸುಂದರ ವಸ್ತುಗಳನ್ನು ನಿರ್ಮಿಸಲಾರಂಭಿಸಿದರು. ಸೌಂದರ್ಯವನ್ನು ಸೃಜಿಸುವ ಶಕ್ತಿಯು ಹೆಚ್ಚು ಕಡಮೆ ಪ್ರಮಾಣದಲ್ಲಿ ಎಲ್ಲರಲ್ಲಿಯೂ ಇದೆ. ವಿದ್ಯಾರ್ಥಿಗಳು ಆಟಗಳನಾಡುವಂತೆ ತಮ್ಮ ಕೃತಿಗಳನ್ನು ಉಲ್ಲಾಸವೃತ್ತಿಯಿಂದ ಮಾಡತೊಡಗಿದರೆ, ಆದರ್ಶಕೃತಿಗಳಿಗೆ ಬೇಕಾಗುವ ಜಾಗರೂಕತೆಯನ್ನು ಅವರು ಉತ್ಸಾಹದಿಂದ ಕೈಕೊಂಡರೆ, ಅವರ ಕೃತಿಗಳಲ್ಲಿ ಸೌಂದರ್ಯವು ಬೇರೆ ಬೇರೆ ಪ್ರಮಾಣದಿಂದ ತಾನಾಗಿಯೇ ಕಂಡುಬರುವುದು. ಹೀಗೆ ಆಟಕ್ಕೂ ಕಲಾಕೌಶಲ್ಯಕ್ಕೂ ನಿಕಟ ಸಂಬಂಧವಿದೆಯೆಂದು ತೋರದಿರದು.

**ಆಟವೂ ಕಲ್ಪಕಶಕ್ತಿಯೂ.**— ಚಿಕ್ಕಮಕ್ಕಳ ಕಲ್ಪನಾಶಕ್ತಿಯು ಅಗಾಧವಾದುದು. ಮನೆಯೊಳಗಿನ ಒಂದು ಮೂಲೆಯಲ್ಲಿ ಬಿದ್ದಿರುವ ಕೋಲನ್ನು ಎತ್ತಿಕೊಂಡು ಹುಡುಗನೊಬ್ಬನು ತನ್ನ ತೊಡೆಗಳ ನಡುವೆ ಇರಿಸಿ ಅದನ್ನು ತನ್ನ ಮೆಚ್ಚಿನ ಕುದುರೆಯನ್ನಾಗಿಸಿ ಕುಳಿತು ಕುಣಿದಾಡುವನು. ಹುಡುಗಿಯೊಬ್ಬಳಿಗೆ ಬಿರುಸಾದ ಮರದ ತುಂಡೂ ಮುದ್ದಾದ ಗೊಂಬೆಯಂತೆ ಕಾಣುವುದು. ಸೃಷ್ಟಿಯಲ್ಲಿ ಎತ್ತ ನೋಡಿದತ್ತ ಜೀವ-ಕಳೆ ತುಂಬಿತುಳುಕುವಂತೆ ಮಕ್ಕಳಿಗೆ ಭಾಸವಾಗುವುದು. ಓಡಾಡುವಾಗ

ಎಡವಿ ಬಿದ್ದಾಗ ಅಥವಾ ಯಾವುದಾದರೊಂದು ಒಡವೆಯು ಧಕ್ಕೆ ತಗಲಿ ನೋವಾದಾಗ ಮಕ್ಕಳು ಅಳಲಾರಂಭಿಸಿದರೆ, ನೆಲಕ್ಕಾಗಲಿ, ಆ ವಸ್ತುವಿಗಾಗಲಿ, ‘ ನಾವು ಹೊಡೆದೆವು ’ ಎಂದು ಹೊಡೆದಂತೆ ನಟಿಸಿದರೆ, ಅವರ ಕೋಪವು ಶಾಂತವಾಗಿ ನೋವು ಹಗುರಾಗುವುದು. ಬೀಸುವ ನಟನೆಯಲ್ಲಿದ್ದ ಆಂಗ್ಲ ಬಾಲಿಕೆಯು, ಅತಿಥಿಯೊಬ್ಬನು ಹಸ್ತಾಂದೋಲನಕ್ಕೆ ತನ್ನ ಕೈಯನ್ನು ಮುಂದೆ ಚಾಚಿದಾಗ, “ ತಡೆಯಿರಿ, ನನ್ನ ಕೈ ಹಿಟ್ಟಾಗಿದೆ ತೊಳೆದುಕೊಂಡು ಬರುವೆನು ” ಎಂದಳಂತೆ. ಇದರಿಂದ ಮಕ್ಕಳ ಕಾಲ್ಪನಿಕ ಕ್ರೀಡಾಪ್ರಪಂಚದಲ್ಲಿ ಎಷ್ಟರ ಮಟ್ಟಿಗೆ ಸತ್ಯಾಂಶವಿರುವುದು ಎಂಬುದನ್ನು ಕಾಣಬಹುದು. ತಾಯಿತಂದೆಗಳು ಮಕ್ಕಳು ಆಟವಾಡುವಾಗ ಅವರ ಉತ್ಸುಕತೆಯನ್ನು ಲೆಕ್ಕಿಸದೆ ಅವರ ಆಟಗಳ ನಿಜವಾದ ಸ್ವರೂಪವನ್ನು ಕಾಣುವಷ್ಟು ಕಾಲ್ಪನಿಕ ಶಕ್ತಿಯಿಲ್ಲದೆ “ ಆಟವನ್ನು ಬಿಟ್ಟು ಬನ್ನಿ ” ಎಂದು ಒತ್ತಾಯ ಮಾಡುವರು. ಹೀಗೆ ಮಾಡುವುದು ಮಕ್ಕಳ ದೃಷ್ಟಿಯಿಂದ ಅನ್ಯಾಯವೆನಿಸುವುದು. ಅವರು ಮುಂದೆ ಒಂದು ವೇಳೆ ಪ್ರಸಿದ್ಧ ಕಾದಂಬರಿಕಾರರು, ಕವಿಗಳು, ಚಿತ್ರಕಾರರು ಅಥವಾ ಮೇಲಾದ ಶಿಲ್ಪಿಗಳಾಗಬಹುದು. ಆದುದರಿಂದ ಅವರ ಕಾಲ್ಪನಿಕ ವಿಚಾರಶಕ್ತಿಯನ್ನು ಹತ್ತಿಕ್ಕದೆ ಪ್ರೋತ್ಸಾಹಿಸಬೇಕು. ಅವರ ಭವಿತವ್ಯದ ಗುಟ್ಟೇ ಅವರ ಕಲ್ಪನಾಶಕ್ತಿಯಲ್ಲಿ ಇರಬಹುದು ; ಅದು ಅವರ ಅತ್ಯುತ್ತಮ ಶಕ್ತಿಯ ದ್ಯೋತಕವೂ ಆಗಿರಬಹುದು. ಸತ್ಯವಿಷಯಗಳನ್ನು ಕಲಿಸುವಾಗ ಆಯಾ ವಿಷಯಗಳು ಕಲ್ಪನಾಶಕ್ತಿಯನ್ನು ಎಷ್ಟರಮಟ್ಟಿಗೆ ಜಾಗೃತಗೊಳಿಸಬಹುದೆಂಬುದನ್ನು ಶಿಕ್ಷಕರು ಗಮನಿಸಬೇಕು.

ಆಟದಲ್ಲಿ ಕಲ್ಪನಾಶಕ್ತಿಯ ಸಮಾವೇಶವಾಗಲೇಬೇಕು. ಆಟಗಳಲ್ಲಿ ತಾನೊಂದು ಪರಿಸ್ಥಿತಿಯಲ್ಲಿರುವೆನೆಂದು ಕಲ್ಪಿಸಿ ಅದಕ್ಕೆ ತಕ್ಕ ಜಾಗೃತಿಯನ್ನು ಬಾಲಕನು ಕೈಕೊಳ್ಳಬೇಕಾಗುವುದು. ಹಾಗೆ ತೀವ್ರವಾಗಿಯೂ ನಿಜವಾಗಿಯೂ ನಡೆದುಕೊಳ್ಳುವುದೇ ಬಾಲಕನ ವಿಶಿಷ್ಟ ಯೋಗ್ಯತೆಯು. ಎಷ್ಟೋ ಸಾರೆ ಮಕ್ಕಳು ಆಡುವ ವಸ್ತುಗಳೂ ಕಾಲ್ಪನಿಕವಾಗಿರುವುವು. ಒಂದು ವೇಳೆ ನಿಜವಾದ ಸಾಧನಗಳನ್ನು ಪೂರೈಸಿದರೆ ಅವುಗಳ ಮಹತ್ತ್ವವನ್ನು ಬಾಲಕರು ಲೆಕ್ಕಿಸುವುದಿಲ್ಲ. ಆಟದ

ಸಾಮಾನುಗಳ ಕಾಲ್ಪನಿಕ ಯೋಗ್ಯತೆಯೇ ಆಟಕ್ಕೆ ಮುಖ್ಯವಾದ ವಿಷಯ. ಗೊಂಬೆಯು ಜೀವಂತ ಕೂಸಾಗುವುದು; ತುತೂರಿಯು ಅಥವಾ ಹಲಗೆಯು 'ಬ್ಯಾಂಡ್' ವಾದ್ಯವಾಗುವುದು; ಕಟ್ಟಿಗೆಯ ಕುದುರೆಯು ನಿಜವಾದ ಕುದುರೆಯಾಗುವುದು. ಆಟದ ಸಾಮಾನುಗಳ ಉಪಯೋಗವು ನಿಜವಸ್ತುಗಳ ಜ್ಞಾನವನ್ನು ಮಾಡಿಕೊಡಲು ಸಹಾಯವಾಗುವುದು. ಆಟಗಳನ್ನಾಡುವಾಗ ಮಕ್ಕಳ ಭಾವಿ ಜೀವನದ ಒಲವುಗಳನ್ನಾಗಲಿ ಪ್ರವೃತ್ತಿಗಳನ್ನಾಗಲಿ ಕಂಡು ಹಿಡಿಯಬಹುದು. ಅವರ ಕಲ್ಪನಾಶಕ್ತಿಯೇ ಅವರ ಯೋಗ್ಯತೆಯನ್ನು ನಿರ್ಣಯಿಸುವ ಅಳತೆಗೋಲು.

**ಆಟವೂ ನಟನೆಯೂ.**— ಈ ವಿಷಯವನ್ನು ಕೂಲಂಕಷವಾಗಿ ವಿವೇಚಿಸದೆ ಆಟದ ವ್ಯಾಪಕ ಸ್ವರೂಪವು ಕಂಡುಬರುವಂತಿಲ್ಲ. ನಟನೆಯ ಕ್ರಿಯೆಯು ನಡೆದಾಗ ಎರಡು ವಿರೋಧಕ ಕಲ್ಪನೆಗಳ ಸಮುದಾಯಗಳ ನಡುವೆ ವಿರೋಧ ನಡೆದಂತೆ ಇದ್ದು, ಒಂದು ಸಾರೆ ಒಂದು ಮತ್ತೊಂದನ್ನು ಅವಧಾನಕ್ಷೇತ್ರದಿಂದ ಹೊರದೂಡಲು ಯತ್ನಿಸುವುದು. ದಿಲ್ಲಿಯ ಸಿಂಹಾಸನಕ್ಕೆ ತಾನೇ ಯೋಗ್ಯಬಾಧ್ಯತೆಯುಳ್ಳ ರಾಣಿಯೆಂದು ನಟಿಸುವ ದಾಸಿಯು ಮನೆಗೆಲಸಗಳನ್ನು ಮಾಡುವ ತನ್ನ ದಾಸಿಯ ನಿಜಸ್ಥಿತಿಗೂ ಭರತಭೂಮಿಯ ಸಿಂಹಾಸನದ ಬಾಧ್ಯತೆಗೂ ಇರುವ ಮಹದಂತರವನ್ನು ಲಕ್ಷ್ಯಕ್ಕೆ ತರುವುದಿಲ್ಲ. ಹಾಗೆಯೆ ಆಟದಲ್ಲಿ ನಾನಾ ರೀತಿಯಿಂದ ನಟಿಸುವ ಹುಡುಗನು ನಟನಾ-ಸಾಮ್ರಾಜ್ಯಕ್ಕೆ ವಿರೋಧವನ್ನುಂಟುಮಾಡುವ ನಿಜ ಪರಿಸ್ಥಿತಿಯನ್ನು ಗಮನಕ್ಕೆ ತರುವುದಿಲ್ಲ. "ಮಗುವು 'ಖುರ್ಚಿಯು' ದುರ್ಗವನ್ನು ಅಭಿಯೋಗಿಸಲು ಬಂದ ರಾಕ್ಷಸನೆಂದು ತಿಳಿದು, ಅದನ್ನು ಶೌರ್ಯದಿಂದ ನೆಲಕ್ಕುರುಳಿಸಬೇಕೆಂಬುವ ಈರ್ಷ್ಯೆಯಲ್ಲಿದ್ದಾಗ ಅದನ್ನು ಅತಿಥಿಯ ಉಪಯೋಗಕ್ಕಾಗಿ ಎತ್ತಿ ಒಯ್ದರೆ ಹತಾಶವಾಗುವುದಿಲ್ಲ. ಅಲ್ಲಿಯೇ ಹತ್ತಿರದಲ್ಲಿದ್ದ ಇದ್ದಲಿಯ ಬುಟ್ಟಿಯೇ ರಾಕ್ಷಸನೆಂದು ತಿಳಿದು ಅದರ ಕೂಡ ತನ್ನ ಹೋರಾಟವನ್ನು ಸಾಗಿಸುವದು. ತನ್ನ ಅಭಿಮಂತ್ರಿತ ನಂದನವನದಲ್ಲಿ ಮಧ್ಯಾಹ್ನದ ಊಟದ ಸಲುವಾಗಿ ನಿಜವಾದ ಬಟಾಟಿಗಳನ್ನು ಅಗೆದು ತೆಗೆಯುವ ತೋಟಿಗನನ್ನು ನೋಡಿದರೂ ತನ್ನ ನಟನಾಸಾಮ್ರಾಜ್ಯದಲ್ಲಿಯೆ ನಲಿಯುತ್ತ ಬೆರಗಾಗದೆ ನಿಲ್ಲುವದು."

ಬಾಲಕ-ಬಾಲಿಕೆಯರು ತಮ್ಮ ತಮ್ಮ ಮನೋರಾಜ್ಯಕ್ಕೆ ಏನಾದರೂ ವಸ್ತುಸ್ಥಿತಿಯಿಂದ ವಿರೋಧವುಂಟಾದರೆ, ತಮ್ಮ ದೃಷ್ಟಿಯಿಂದಲೇ ಅದಕ್ಕೆ ತಮಗನುಕೂಲವಾಗುವಂತೆ ಅರ್ಥವನ್ನು ಕೊಡುವರು. ಮೇಲೆ ವಿವರಿಸಿದ ದಾಸಿಯು ದಾಸಿಯಂತೆ ಮಾಡಬೇಕಾದ ಕೆಲಸಗಳೆಲ್ಲ ಸಿಂಹಾಸನಕ್ಕೆ ತನ್ನನ್ನು ಕುಳ್ಳಿರಿಸಬಾರದೆಂಬ ಕುಹಕರ ಒಳಸಂಚುಗಳೆಂದೇ ಭಾವಿಸಿ—ಅವುಗಳನ್ನು ಶೋಧಿಸಲು ಹೆಣಗುವಳು. ಆಡುವ ಮಕ್ಕಳು ನಟನೆಯ ಪ್ರಭಾವದಿಂದ ಕೆಲವು ಮಾತುಗಳನ್ನು ಆಡಿದರೆ ಅವು ಸುಳ್ಳೆಂದು ಜನರಿಗೆ ತೋರಬಹುದು. ಆದರೆ ನಟನಾಸಾಮ್ರಾಜ್ಯದಿಂದ ಹೊರಗೆಬಂದರೂ ಬಾಹ್ಯಜಗತ್ತಿನ ನಿಜಸ್ಥಿತಿಯ ಅರಿವು ಅವರಿಗೆ ಉಳಿಯುವುದಿಲ್ಲ. ನಟನೆಯ ಸಾಮರ್ಥ್ಯವೇ ಅಷ್ಟು ಪ್ರಬಲವಾಗಿದೆ. ನಟನೆಯ ಬಲವು ಒಂದು ವಾರದ ವರೆಗಾದರೂ ಉಳಿಯುವುದೆಂದು ಹೇಳುವರು. ಚಿಕ್ಕಮಕ್ಕಳ ಲೀಲೆಯ ಪ್ರಪಂಚದಲ್ಲಿ ಅನುಭವವ್ಯಾಪ್ತಿಯೂ ಬೆಳೆವಣಿಗೆಯೂ ಇವೆ. ಅಜ್ಞಾನದ ಮೂಲಕ ವಸ್ತುಗಳ ನಿಜಸ್ಥಿತಿಯನ್ನು ತಮ್ಮ ಮನೋರಾಜ್ಯದ ಆಳಿಕೆಯ ಕಟ್ಟಿನಲ್ಲಿ ತಂದು ತಮ್ಮ ಸವಿಗನಸುಗಳನ್ನು ವಾಸ್ತವವಾಗಿ ನನಸಾಗುವಂತೆ ಮಾಡಲು ದುಸ್ಸಾಧ್ಯವಾದರೆ. ಬಾಲಬಾಲಿಕೆಯರು ಅಲ್ಲಾವುದ್ದೀನನ ಮಾಯಾದೀಪದಂತಿದ್ದ ನಟನೆಯ ಮಂತ್ರಶಕ್ತಿಯನ್ನು ಉಪಯೋಗಿಸಿ ತಮ್ಮ ಬೇಡಿಕೆಗಳನ್ನು ಪೂರೈಸಿಕೊಂಡು ತಮ್ಮ ಹೃದಯದ ಆಸೆಯನ್ನೂ ತೃಷ್ಣೆಯನ್ನೂ ಸಮಾಧಾನಗೊಳಿಸುವ ಮನೋರಾಜ್ಯವನ್ನು ನಿರ್ಮಿಸುವರು.

ಹೀಗೆಂದ ಮಾತ್ರಕ್ಕೆ ಚಿಕ್ಕಮಕ್ಕಳಿಗೆ ನಿಜಪ್ರಪಂಚಕ್ಕಿಂತಲೂ ಕಲ್ಪನಾಸಾಮ್ರಾಜ್ಯವೇ ಹೆಚ್ಚಿನದೆಂದು ಅರ್ಥವಾಗುವುದಿಲ್ಲ. ಅವರು ಯಾವಾಗಲೂ ಆತ್ಮಪ್ರೌಢಿಯ ಸಲುವಾಗಿ ಹಂಬಲಿಸುತ್ತಿರುವರು. ತಮ್ಮ ಹಟವನ್ನೇ ಸಾಧಿಸಬೇಕೆಂದು ಅವರ ಹಂಬಲು. ಅವರ ಬೇಡಿಕೆಗಳು ಎಷ್ಟು ಅಶಕ್ಯವಿದ್ದರೂ ಅವುಗಳನ್ನು ಪೂರೈಸಲೇಬೇಕೆಂದು ಅವರ ಛಲ. ನಿರಾಶರಾಗಬಹುದಾದ ಪ್ರಸಂಗಗಳಲ್ಲಿ ನಟನೆಯ ಕಾಲ್ಪನಿಕವಾದ ಪೂರೈಕೆಗಳಿಂದ ಸಹ ಸಮಾಧಾನವನ್ನು ಪಡೆಯುವರು. ಅವರು ಬೆಳೆ-ಬೆಳೆದ ಹಾಗೆ ಈ ಪ್ರವೃತ್ತಿಯು ಕಡಮೆಯಾಗುತ್ತ ಹೋಗುವುದು.

ಬೇಡವಾದ ವಸ್ತುಗಳು ತಮಗೆ ಬೇಕಾದಂತೆ ಮನೋಹರವಾಗಿ ಕಾಣು ವಂತೆ ಮಾಡಿಕೊಳ್ಳುವ ಶಕ್ತಿಯು ಬಾಲ್ಯದಲ್ಲಿದೆ. ನಿಜ ಸಂಸಾರದ ನೆಳಲು ಹುಡುಗರ ಸುತ್ತಲೂ ಬೀಳತೊಡಗಿದಂತೆ ಅವರು ನಿಜಸ್ಥಿತಿ ಯನ್ನು ಸಾವಕಾಶವಾಗಿ ತಿಳಿದುಕೊಳ್ಳುವರು.

ನಟನೆಯ ಒಲವನ್ನು ದಾಟಿದ ಮೇಲೆ, ವೈಯಕ್ತಿಕ ವಿಚಾರಗಳನ್ನು ಬದಿಗಿಟ್ಟು, ಸಾಮಾಜಿಕ ಹಿತವನ್ನು ಸಾಧಿಸಬೇಕೆಂಬ ದೃಷ್ಟಿಯು ಹುಡುಗರಲ್ಲಿ ಹುಟ್ಟಿದಾಗ, ಪ್ರಪಂಚದ ಸುಸಂಸ್ಕೃತಿ, ಸಭ್ಯತೆ–ಇವುಗಳಿಗೆ ಪೋಷಕವಾಗುವ ಪ್ರವೃತ್ತಿಗಳನ್ನು ಕೈಕೊಳ್ಳುವ ಯೋಗ್ಯತೆಯನ್ನು ಕೊಡಬಲ್ಲ ವಿಷಯಗಳನ್ನು ತಮ್ಮ ಆಶೆ-ಆಕಾಂಕ್ಷೆಗಳು ಈಡೇರುವಂತೆ ನೋಡಿಕೊಳ್ಳುವುದು ಅವರಿಗೆ ಹಿತವೆನಿಸುತ್ತದೆ; ಅವರ ಇತಿಹಾಸ, ಭೂಗೋಲದ ಜ್ಞಾನವು ವಿಶಾಲದೃಷ್ಟಿಯು ರಾಜನೀತಿಗೂ, ಅರ್ಥ–ಶಾಸ್ತ್ರಕ್ಕೂ ಸಹಕಾರಿಯಾಗಬೇಕು; ಭೌತಿಕ ಶಾಸ್ತ್ರಗಳ ಅಭ್ಯಾಸವು ಸಂಸಾರದ ಸೌಕರ್ಯಗಳನ್ನು ಹೆಚ್ಚಿಸಿದ ಸಂಶೋಧಕರ ಶೋಧನೆಗಳನ್ನು ಮುಂಬರಿಸುವಂತೆ ನಡೆಯಬೇಕು; ವ್ಯಾಪಾರದ ತಂತ್ರ, ರಾಷ್ಟ್ರೀಯ ಸರಕಾರದ ಆರ್ಥಿಕಯೋಜನೆ ಮುಂತಾದುವು ವ್ಯಾವಹಾರಿಕ ಪ್ರಪಂಚಕ್ಕೆ ಸಂಬಂಧಿಸಿರಬೇಕು. ತಾರುಣ್ಯದಲ್ಲಿ ಈ ದೃಷ್ಟಿಯಿಂದ ಕೊಟ್ಟ ಶಿಕ್ಷಣವು ಹುಡುಗತನದಲ್ಲಿಯ ಆಟವಾಡುವ ಪ್ರವೃತ್ತಿಯನ್ನು ಪ್ರೋತ್ಸಾಹಿಸಿ ದಂತಾಗುವುದು. ತರುಣ-ತರುಣಿಯರು ಸಂಸಾರವೆಂಬ ಆಟದಲ್ಲಿ ಯಾವುದಾದರೊಂದು ಭೂಮಿಕೆಯನ್ನು ಯಶಸ್ವಿಯಾಗಿ ಆಚರಿಸುವಂತೆ ಮಾಡುವುದೇ ಶಿಕ್ಷಣದ ಅಂತಿಮ ಧ್ಯೇಯವು. ಈ ಧ್ಯೇಯದಲ್ಲಿ ವೃತ್ತಿ ಶಿಕ್ಷಣವೂ ಅಡಕವಾಗಿದೆಯೆಂದು ತಿಳಿಯಬೇಕು.

ಬಾಲ್ಯದಲ್ಲಿ ಪುಂಡನಾಗಿರುವ (Young Rebel) ಬಾಲಕನ ಚಟುವಟಿಕೆಗಳನ್ನು ಮೊದಲುಗೊಂಡು ವೃತ್ತಿಶಿಕ್ಷಣವನ್ನು ಶಾಂತವಾಗಿ ಪಡೆಯುತ್ತಿರುವ ತರುಣ–ತರುಣಿಯರ ಪ್ರಯತ್ನಗಳ ವರೆಗೆ ನಟನೆಯ ಪ್ರವೃತ್ತಿಯನ್ನು ವಿವೇಚಿಸಿ, ಸ್ವಯಂಸ್ಫೂರ್ತಿಯನ್ನು ಸ್ಥಿರಗೊಳಿಸುವ ಮತ್ತು ಅನುಕೂಲಗೊಳಿಸುವ ಅದರ ಸ್ವರೂಪವನ್ನು ತಿಳಿದುಕೊಂಡೆವು.

ಆದರೆ ಪ್ರಬುದ್ಧ ಸ್ತ್ರೀಪುರುಷರು ಚಿಕ್ಕವರಿಗೆ ಸುಲಭಸಾಧ್ಯವಿದ್ದ ಕಲ್ಪನಾ-ಶಕ್ತಿಯ ಸಾಹಾಯ್ಯವಿಲ್ಲದೆ ಸಂಸಾರದ ಎಡರುಗಳನ್ನು ಎದುರಿಸಬೇಕಾಗುವುದರಿಂದ ದುಃಖಭಾಗಿಗಳಾಗುವೆವೆಂದು ಮರುಗಬಹುದು. ಆದರೆ ಸುದೈವದಿಂದ ನಿಸರ್ಗದೇವಿಯು ಅಷ್ಟು ನಿರ್ದಯಳಾಗಿರುವುದಿಲ್ಲ. ಬೆಳೆಯುವ ವಯಸ್ಸಿನಲ್ಲಿ ದಯಪಾಲಿಸಿದ ನಟನೆಯ ಪ್ರವೃತ್ತಿಯನ್ನು ಪ್ರೌಢಾವಸ್ಥೆಯಲ್ಲಿಯಾದರೂ ಅವಳು ಸೆಳೆದುಕೊಂಡಿಲ್ಲ. ವಸ್ತುಸ್ಥಿತಿಯನ್ನು ಮರೆಯುವ ಶಕ್ತಿಯನ್ನು ಅನುಗ್ರಹಿಸಿ ಎಷ್ಟೋ ಅನರ್ಥಗಳಿಂದ ಮಾನವರನ್ನು ಅವಳು ಉಳಿಸಿದ್ದಾಳೆ. ಇದ್ದುದನ್ನೇ ಮುದ್ದೆಂದು ತಿಳಿದುಕೊಂಡು ಮಾನವರು ಉಲ್ಲಾಸದಿಂದ ಬಾಳುವೆಯನ್ನು ಸಾಗಿಸುವಂತೆ ಮಾಡಿದ್ದಾಳೆ. ಲೋಕಕಲ್ಯಾಣವನ್ನು ಚಿಂತಿಸುವ ಅನೇಕ ಮಹಾತ್ಮರು ಎಡರುತೊಡರುಗಳನ್ನು ಲೆಕ್ಕಿಸದೆ ಧ್ಯೇಯಕ್ಕಾಗಿ ಎಡೆಬಿಡದೆ ಯತ್ನಿಸುವಂತೆ ಅವರನ್ನು ಪ್ರೋತ್ಸಾಹಿಸಿದ್ದಾಳೆ. ನಮ್ಮ ನಿಜಸ್ಥಿತಿಯನ್ನು ಇದ್ದ ಹಾಗೆಯೆ ತಿಳಿದುಕೊಳ್ಳುವುದು ನಮ್ಮ ಕರ್ತವ್ಯವೆಂಬುದು ನಿಜ. ಆದರೂ ನಮ್ಮಲ್ಲಿಯ ದೋಷದೌರ್ಬಲ್ಯಗಳನ್ನು ಮರೆಯುವ ಶಕ್ತಿಯನ್ನು ಪ್ರಕೃತಿಮಾತೆಯು ದಯಪಾಲಿಸಿದ್ದರಿಂದ ಮತ್ತು ನಮ್ಮ ಯೋಚನೆ-ವಿಚಾರಗಳನ್ನು ಒಂದು ವಿಶಿಷ್ಟ ರೀತಿಯಿಂದ ಬಗೆಹರಿಸಿಕೊಂಡು ಮುಂದೆ ಸಾಗುವ ಶಕ್ತಿಯನ್ನಿತ್ತುದರಿಂದ ನಮ್ಮ ಹಿತವನ್ನೂ ಪರರ ಹಿತವನ್ನೂ ಸಾಧಿಸಲು ಬರುವಂತಾಗಿದೆ. ಇಷ್ಟು ಸೂಕ್ಷ್ಮವೂ ವ್ಯಾಪಕವೂ ಆದ ನೈಸರ್ಗಿಕಶಕ್ತಿಯು ಉಲ್ಲಾಸವೃತ್ತಿಯಲ್ಲಿಯೂ ವಿನೋದವೃತ್ತಿಯಲ್ಲಿಯೂ ಪರಿಣಮಿಸುವುದು. ಯಾವ ನಿಸರ್ಗದೇವಿಯಿಂದ ನಮಗೆ ಇಂತಹ ಶಕ್ತಿಗಳು ಪ್ರಾಪ್ತವಾಗಿವೆಯೋ ಆ ನಿಸರ್ಗದೇವಿಯನ್ನು ಭಗವಂತನು ಲೀಲೆಯಿಂದ ನಿರ್ಮಿಸಿರುವನೆಂಬ ಮಾತಿನಲ್ಲಿಯೂ ಕ್ರೀಡನದ ( ಲೀಲೆಯ ) ಮಹಿಮೆಯು ಮನವಾರೆ ಜಗತ್ತಿಗೆ ಸಾರಲ್ಪಟ್ಟಿದೆ ಎಂದು ಹೇಳಬಹುದು. ಭಗವಾನ್ ಶ್ರೀಕೃಷ್ಣನು ಗೀತೆಯಲ್ಲಿ ಕರ್ಮಯೋಗರಹಸ್ಯವನ್ನು ಅರ್ಜುನನಿಗೆ ಹೇಳುವಾಗ ' **ಕರ್ಮವನ್ನು ಕರ್ತವ್ಯವೆಂದೇ ಅನಾಸಕ್ತನಾಗಿ ಮಾಡು** ' ಎಂದು ಉಪದೇಶಿಸಿ " **ಬಾಳುವೆಯಲ್ಲಿ ಕೊರಗದೆ ಉಲ್ಲಾಸದಿಂದ ಬಾಳು** " ಎಂಬ

ದಿವ್ಯ ಸಂದೇಶವನ್ನು ನಮಗೆ ದಯಪಾಲಿಸಿದ್ದಾನೆ. ಈ ವಿಚಾರಗಳನ್ನೆಲ್ಲ ನಾವು ಮನನಮಾಡಿಕೊಂಡಾಗ 'ತಾಳಿದವನೇ ಬಾಳುವನು' ಎಂಬ ಮಾತಿಗಿಂತ **'ಆಟವನಾಡಿದವನೇ ಬಾಳುವನು'** ಎಂಬ **ಮಾತು** ಹೆಚ್ಚಾಗಿ ಯೋಗ್ಯವೆಂದು ಹೊಳೆಯದಿರಲಾರದು.

೧೪

# ಕ್ರೀಡನಪದ್ಧತಿಯೂ ಶಿಕ್ಷಣವೂ

ಕ್ರೀಡನವು ಜೀವನಕ್ಕೆ ಎಷ್ಟು ಅವಶ್ಯವಿದೆಯೆಂಬುದನ್ನೂ ಬಾಲಕ-ಬಾಲಿಕೆಯರ ಶಾರೀರಿಕ- ಹಾರ್ದಿಕ- ಬೌದ್ಧಿಕ- ಮಾನಸಿಕ- ವಿಕಾಸಕ್ಕೆ ಅದೆಷ್ಟು ಉಪಯುಕ್ತವಿದೆಯೆಂಬುದನ್ನೂ, ಅದರ ಸಿದ್ಧಾಂತಗಳನ್ನೂ ವಿವೇಚಿಸಿದುದಾಯಿತು. ಇನ್ನು ಅದು ಶಿಕ್ಷಣಕಾರ್ಯದಲ್ಲಿ ಎಷ್ಟರ ಮಟ್ಟಿಗೆ ನೆರವಾಗುವುದೆಂಬುದನ್ನೂ ಪ್ರತಿಯೊಬ್ಬ ಶಿಕ್ಷಕನು ಅರಿತು ಕೊಳ್ಳಬೇಕಾದದು ಆವಶ್ಯಕ. ಕ್ರೀಡನಗಳ ಮುಖಾಂತರವಾಗಿ ಕೊಡುವ ಶಿಕ್ಷಣವು ಕ್ರೀಡನಪದ್ಧತಿಯಿಂದ ಕೊಟ್ಟ ಶಿಕ್ಷಣವೆನಿಸುವುದು. ಸದ್ಯದಲ್ಲಿ ಈ ಶಿಕ್ಷಣಪದ್ಧತಿಗೆ ಶಿಕ್ಷಣಕ್ಷೇತ್ರದಲ್ಲಿ ಅತ್ಯಂತ ಶ್ರೇಷ್ಠವಾದ ಸ್ಥಾನವು ದೊರೆತಿದೆ.

ಕ್ರೀಡನ ಪದ್ಧತಿಯೆಂದರೆ ಗಂಭೀರವಾದ ಕಾರ್ಯದ ಮಟ್ಟವನ್ನು ಮನೋರಂಜನೆಯ ತರಗತಿಗೆ ಇಳಿಸುವುದಲ್ಲವೆಂದೂ ಕಠಿನವಾದ ಕಾರ್ಯಕ್ಷೇತ್ರದಲ್ಲಿ ಆನಂದದ ಸಮಾವೇಶವಾಗುವಂತೆ ಮಾಡುವುದೇ ಕ್ರೀಡನ ಪದ್ಧತಿಯ ಶಿಕ್ಷಣವೆಂದೂ ತಿಳಿದುಕೊಳ್ಳಬೇಕು. ಉಪಜೀವನದ ಸಲುವಾಗಿ ಮಾಡಲೇಬೇಕಾದ ಕಾರ್ಯವು ಕೆಲಸವೆನಿಸುವುದು ; ಕ್ರೀಡನವೆಂದರೆ ನಾವು ಮನಸ್ಸಿನಿಂದ ಮಾಡಬೇಕಾದ ಕಾರ್ಯವು.

'ಮನೋರಂಜಕ' ಕಾರ್ಯ ಮತ್ತು 'ಆನಂದದಾಯಕ' ಕಾರ್ಯ ಇವುಗಳ ನಡುವೆ ಇರುವ ಸೂಕ್ಷ್ಮಭೇದವನ್ನು ತಿಳಿದುಕೊಳ್ಳಬೇಕಾದುದು ಆವಶ್ಯಕ. 'ಆನಂದದಾಯಕ' ಕಾರ್ಯವು ಮನವನ್ನು ರಂಜಿಸಬಹುದು. ಆದರೆ 'ಮನೋರಂಜಕವಾದುದು' ಅವಶ್ಯವಾಗಿ ಆನಂದವನ್ನು ಈಯಲಿಕ್ಕಿಲ್ಲ. ಯಾವುದಾದರೊಂದು ವಿಷಯದಲ್ಲಿ ಅಭಿರುಚಿಯುಂಟಾಗುವಂತೆ ಮಾಡಬೇಕಾದರೆ ಆ ವಿಷಯವನ್ನು ಶಕ್ಯವಿದ್ದಷ್ಟು ದೃಷ್ಟಿಕೋನಗಳಿಂದ ಶಿಕ್ಷಕನು ನೋಡಲೇಬೇಕಾಗುವುದು ;

ಪಠ್ಯವಿಷಯಗಳನ್ನು ವ್ಯವಹಾರಕ್ಕೆ ಸಂಬಂಧಿಸಿ ಕಲಿಸಬೇಕಾಗುವುದು. ಶಾಲೆಯ ವಿವಿಧ ವಿಷಯಗಳನ್ನು ಕಲಿಸುವಾಗ ಈ ಉದ್ದೇಶವನ್ನು ಅವನು ತೋರಿಸಬೇಕಾಗುವುದು; ಬೇಸರುಂಟಾಗದಂತೆ ಕಲಿಸುವ ಪದ್ಧತಿಯಲ್ಲಿಯೂ ಒಮ್ಮೊಮ್ಮೆ ಬೇಸರನ್ನು ತರುವ ಭಾಗವನ್ನು ಕಲಿಸಬೇಕಾಗುವುದೆಂದು ವಿದ್ಯಾರ್ಥಿಗಳಿಗೆ ತಿಳಿಸಿಕೊಡಬೇಕಾಗುವುದು. ಬೇಸರಿಕೆಯನ್ನು ಉಂಟುಮಾಡುವ ಕಾರ್ಯಕ್ಕೂ ಅದನ್ನು ಉಂಟುಮಾಡದಕಾರ್ಯಕ್ಕೂ ಇರುವ ಸಂಬಂಧವನ್ನು ವಿದ್ಯಾರ್ಥಿಗಳಿಗೆ ತಿಳಿಸಿಕೊಟ್ಟರೆ, ವಿದ್ಯಾರ್ಥಿಗಳು ತಮ್ಮ ಜೀವನದ ದೃಷ್ಟಿಯಿಂದ ಬೇಸರುಬರುವ ಕಾರ್ಯದಲ್ಲಿಯೂ ಅಭಿರುಚಿಯನ್ನು ಹುಟ್ಟಿಸಿಕೊಳ್ಳುವ ಸಂಭವವಿದೆ.

ಮನೋರಂಜನೆಗಾಗಿ ಮತ್ತು ವಿಶ್ರಾಂತಿಗಾಗಿ ಕೈಕೊಂಡ ಆಟಗಳು ಸಂಸಾರದ ಭಾರವನ್ನೂ ಬೇಸರಿಕೆಯನ್ನೂ ಕಳೆದುಕೊಳ್ಳುವ ಉಪಾಯಗಳೆಂದು ಕಲ್ಪಿಸಿದರೆ ಕ್ರೀಡನದ ಅಪಾರ್ಥವಾಗುವುದು. ಈ ತರದ ಆಟಗಳನ್ನು ದೊಡ್ಡವರೇ ಕೈಕೊಳ್ಳಲಿ, ಹುಡುಗರೇ ಕೈಕೊಳ್ಳಲಿ, ಅವು ತಮ್ಮ ಬಾಳ್ವೆಗಾಗಿ ಯಾವಾಗಲೂ ಹೆಣಗಾಡುವ ಹಂಬಲನ್ನು ಸೂಚಿಸುತ್ತವೆ; ಜೀವನದ ಹೋರಾಟದ ಕಿಡಿಗಳು ಅವುಗಳಲ್ಲಿ ಮಿನುಗುತ್ತಿರುತ್ತವೆ. ಈ ಹೋರಾಟದ ಹಂಬಲನ್ನು ಶಾಂತಗೊಳಿಸದಿದ್ದರೆ ಆತ್ಮವು ನಾಶಹೊಂದುವುದು. ‘ ಕೆಲಸವೇ ಆಟ, ಆಟವೇ ಜೀವನ ’ ಎಂಬುದೇ ಇದರ ಧ್ಯೇಯವಾಗಿದೆ. ಕೆಲಸ, ಆಟ, ಜೀವನ ಇವು ಮೂರೂ ದತ್ತಮೂರ್ತಿಯ ತ್ರಿಮುಖಗಳಂತಿವೆ; ಒಂದನ್ನು ಬಿಟ್ಟು ಇನ್ನೊಂದು ಇಲ್ಲ. ಕೆಲಸದಲ್ಲಿ ಆಟವೂ ಇದೆ; ಜೀವನವೂ ಇದೆ. ಆಟದಲ್ಲಿ ಕೆಲಸವೂ ಇದೆ; ಜೀವನವೂ ಇದೆ. ಜೀವನದಲ್ಲಿ ಕೆಲಸವೂ ಇದೆ; ಆಟವೂ ಇದೆ. ಈ ವಿಷಯವನ್ನು ಹಿಂದಿನ ಪ್ರಕರಣದಲ್ಲಿ ಹೆಚ್ಚಾಗಿ ವಿವೇಚಿಸಲಾಗಿರುವುದರಿಂದ ಇಲ್ಲಿ ಪುನಃ ಅದನ್ನು ವಿವೇಚಿಸುವ ಅಗತ್ಯವೆನಿಸುವುದಿಲ್ಲ. ಆದರೆ, ‘ಆಟ’ ಮತ್ತು ‘ಕೆಲಸ’ ಇವು ಭಿನ್ನಯೋಗ್ಯತೆಯ ಚಟುವಟಿಕೆಗಳು ಎಂದು ತಿಳಿಯುತಿರುವ ವ್ಯವಹಾರಜ್ಞಾನಿಗಳು ಈ ಧ್ಯೇಯವನ್ನು ಸ್ವೀಕರಿಸಲು ಹಿಂಜರಿಯಬಹುದು. ಈ ಧ್ಯೇಯದಲ್ಲಿ ಮೂರು ಪ್ರಕಾರಗಳನ್ನು ನಾವು ವಿಂಗಡಿಸಬಹುದೆಂದು ತೋರುತ್ತದೆ.

(೧) ವೇಳೆಯನ್ನು ಹೇಗಾದರೂ ಕಳೆಯುವ ಹುಡುಗಾಟಿಕೆಯ ಯೋಜನೆ; (೨) ನಿಶ್ಚಿತ ಶೈಕ್ಷಣಿಕ ಧ್ಯೇಯವನ್ನಿಟ್ಟುಕೊಂಡ ಆಟ; (೩) ಮಿಗಿಲಾದ ಗಾಂಭೀರ್ಯದಿಂದ ತುಂಬಿದ ಆಟ.

ಇದೇ ಪ್ರಕಾರವಾಗಿ ಕೆಲಸದಲ್ಲಿಯೂ ಬಗೆಗಳನ್ನು ಕಲ್ಪಿಸಬಹುದು. ಎಲ್ಲ ಬಗೆಯ ಕಾರ್ಯವೂ ಕವನದಂತೆ ಸುರಮ್ಯವಾಗುವುದು ಅಶಕ್ಯ. ಒಕ್ಕಲಿಗರು ಹೊಲಗಳಲ್ಲಿ ದನಗಳನ್ನು ದುಡಿಯಿಸಿದಂತೆ ಶಿಕ್ಷಕರು ಶಾಲೆಗಳಲ್ಲಿ ವಿದ್ಯಾರ್ಥಿಗಳನ್ನು ದುಡಿಯಿಸಿದರೆ ಅವರು ಮಾಡುವ ಕೆಲಸವು ಆಡುವ ಆಟವಾದೀತೆ? ಇಲ್ಲ. ದನದಂತೆ ದುಡಿಯಬೇಕಾಗಿರುವ ಕಾರ್ಯದಲ್ಲಿ ಆನಂದ ಹುಟ್ಟುವುದು ಹೇಗೆ? ಅದು ಕವನದಂತೆ ರಮ್ಯವಾಗುವುದು ಹೇಗೆ? ಆದರೆ ಇನ್ನೊಂದು ಕಡೆಯಲ್ಲಿ ಅಂತಹ ದುಡಿತದ ಕಾರ್ಯವು ಕಾರ್ಯಕರ್ತನನ್ನು ಉದಾತ್ತಗೊಳಿಸಿ ಒಂದು ರಾಷ್ಟ್ರವನ್ನೇ ಅಥವಾ ಜಗತ್ತನ್ನೇ ಉದ್ಧರಿಸುವ ಚಟುವಟಿಕೆಯಾಗಬಹುದು.

ಆಟಗಳು ಮತ್ತು ಕೆಲಸಗಳು ಉನ್ನತಾವಸ್ಥೆಗೆ ಹೋದಾಗ ಅವುಗಳಲ್ಲಿ ಭೇದವು ಉಳಿಯುವುದಿಲ್ಲ. ಆಗ ಆಟವೇ ಕಾರ್ಯವೆಂದೂ ಕಾರ್ಯವೇ ಆಟವೆಂದೂ ಎನಿಸುವುದು. ಉತ್ತಮತರದ ಕೆಲಸವನ್ನು ಕೈಕೊಳ್ಳುವವನು ತನ್ನ ಕೆಲಸವನ್ನು ತಾನೇ ಆರಿಸಿಕೊಂಡು ಅದರ ಸಿದ್ಧಿಯ ವಿಶಿಷ್ಟವಾದ ತರಗತಿಗಳನ್ನು ಮುಂದಿಟ್ಟುಕೊಂಡಿರುವನು. ಆದುದರಿಂದ ಅವನಿಗೆ ಕೆಲಸವೇ ಆಟವಾಗಿ ಪರಿಣಮಿಸಿ, ಜಗತ್ತಿನ ಪ್ರಾರಂಭದಿಂದಲೂ ಜಗತ್ತು ತನ್ನ ದಾರಿಯನ್ನೇ ನೋಡುತ್ತಿರುವುದೆಂಬ ಭಾವನೆಯಿಂದ ಆತ್ಮಸೃಷ್ಟಿಯು ಮತ್ತು ಆತ್ಮಪ್ರಕಟನೆಯು ಈಶಸಂಕೇತದ ಸುಸಂಧಿಯನ್ನು ಪಡೆಯುವನು. 'ಆಟವೇ ಕೆಲಸ, ಕೆಲಸವೇ ಆಟ' ಎಂಬ ಪರಿಸ್ಥಿತಿಯಲ್ಲಿ ಯಾವ ದೇಶವು ಇದೆಯೊ, ಯಾವ ಶಾಲೆಯು ಇದೆಯೊ, ಅದು ತನ್ನ ಧ್ಯೇಯಸಿದ್ಧಿಯ ಪರಮಾವಧಿಯನ್ನು ಮುಟ್ಟಿದೆಯೆಂದು ಹೇಳಬಹುದು. 'ಶಿಕ್ಷಣದ ಧ್ಯೇಯವು ವ್ಯಕ್ತಿತ್ವವನ್ನು ವಿಕಾಸಗೊಳಿಸುವುದೇ' ಎಂಬ ಡಾ. ನನ್ ಇವರ ಹೇಳಿಕೆಯಲ್ಲಿಯೂ ಇದೇ ಸ್ಥಿತಿಯ ಸಮಾವೇಶವಾಗಿರುವುದು.

ಆದುದರಿಂದ ಇದೇ ತತ್ತ್ವವನ್ನು ಇಂದಿನ ಶಿಕ್ಷಣಪದ್ಧತಿಗಳು ಮಾನ್ಯ ಮಾಡಿವೆ. ಡಾ. ಮಾಂಟೇಸರಿಯು ತನ್ನ ಶಿಕ್ಷಣ ಪದ್ಧತಿಯಲ್ಲಿ ಸ್ವಯಂ ಶಿಕ್ಷಣದ ಹೊಣೆಯನ್ನು ಸಾಧ್ಯವಿದ್ದಷ್ಟು ಸಂಪೂರ್ಣವಾಗಿ ಮಗುಗಳ ಮೇಲೆಯೆ ಹಾಕಿ ಅವರ ಬೆಳೆವಣಿಗೆಗೆ ಬೇಕಾಗುವ ಬಾಹ್ಯನಿಯಂತ್ರಣ ವನ್ನು ತೀರ ಕಡಮೆ ಮಾಡಿದ್ದಾಳೆ. ಆಕೆಯ ಶಿಕ್ಷಣಕ್ರಮದಲ್ಲಿ ಬಾಲಕ ಬಾಲಿಕೆಯರು ತಮ್ಮ ತಮ್ಮ ಕೆಲಸಗಳನ್ನು ತಾವೇ ಆಯ್ದುಕೊಂಡು ತಮ್ಮ ವೇಗದಿಂದಲೇ ಪ್ರಗತಿಯನ್ನು ಪಡೆಯುತ್ತ ತಾವೇ ವಿಮರ್ಶಿಸಿ ಹೊಸ ಹಾದಿಯನ್ನು ಕಂಡುಹಿಡಿಯುವ ಜಾಣ್ಮೆಯನ್ನೂ ಸ್ವಾವಲಂಬನವನ್ನೂ ಚಿತ್ತವೃತ್ತಿಯನ್ನು ಕೇಂದ್ರೀಕರಿಸುವ ಶಕ್ತಿಯನ್ನೂ ಸಂಪಾದಿಸುವರು. ಅವರು ಅನ್ಯರ ವಿಷಯದಲ್ಲಿ ಆದರವನ್ನು ತಾಳಿ ಸ್ವಾಭಿಮಾನವನ್ನು ಕಲಿಯುವರು. ಅಲ್ಲದೆ ಇತರ ಶಾಲೆಗಳಲ್ಲಿಯ ಶಿಕ್ಷಣಪದ್ಧತಿಗೆ ನಿಲುಕದ ಪ್ರಗತಿಯನ್ನು ತೋರಿಸಿ ಹೇತುವಿನಿಂದೊಡಗೂಡಿದ ಉದ್ಯೋಗವನ್ನು ಕೈಕೊಳ್ಳುವ ಅಭ್ಯಾಸವನ್ನು ಅಥವಾ ರೂಢಿಯನ್ನು ಸಾಧಿಸಿಕೊಳ್ಳುವರು. ಈ ಶಿಕ್ಷಣಪದ್ಧತಿಯಲ್ಲಿ ನಟನೆ ( ಇಲ್ಲದುದನ್ನು ಇದೆಯೆಂದು ತಿಳಿಯು ವಿಕೆ )ಯು ಆಟಗಳಿಗೆ ಮತ್ತು ದಂತಕಥೆಗಳಿಗೆ ಆಸ್ಪದವಿಲ್ಲದಿದ್ದರೂ, 'ಆಟವೇ ಸಣ್ಣಮಕ್ಕಳಿಗೆ ಕಲಿಸುವ ಸರ್ವಮಾನ್ಯವಾದ ಶಿಕ್ಷಣ ಪದ್ಧತಿಯು' ಎಂದು ಈ ಶಿಕ್ಷಣಜ್ಞಳು ಸಿದ್ಧಗೊಳಿಸಿದ್ದಾಳೆ.

**ಪ್ರೊಫೆಸರ್ ಆರ್ಮಸ್ಟ್ರಾಂಗ್** ಇವರ '**ಶೋಧಕ ಪದ್ಧತಿ**' ಯಾದರೂ ಹುಡುಗರು ಮೂಲಸಂಶೋಧಕರಾಗುವಂತೆ ಅವರಿಗೆ ಪರಿಸ್ಥಿತಿ ಯನ್ನು ಒದಗಿಸಿಕೊಟ್ಟು ಆಟದ ತತ್ತ್ವವನ್ನೇ ಉದಾಹರಿಸಿದೆ. (ಸ್ಕೌಟ್ ಮತ್ತು ಗರ್ಲಗಾಯಿಡ್) ಬಟುಸಂಘ, ಕನ್ಯಾಸಂಘ—ಇವುಗಳಾದರೂ ನೈತಿಕಶಿಕ್ಷಣವನ್ನು ಕೊಡುವ ಕಾರ್ಯದ ಮತ್ತು ಕ್ರೀಡನತತ್ತ್ವದ ಆಧಾರದ ಮೇಲೆಯೆ ರಚಿಸಲ್ಪಟ್ಟಿವೆ; ಇನ್ನು ಉಳಿದ ಶಿಕ್ಷಣಸುಧಾರಕರೂ ಪಠ್ಯವಿಷಯಗಳಲ್ಲಿಯ ಅನೇಕ ವಿಷಯಗಳನ್ನು '**ಆಟದ ಮಾರ್ಗ**' ದಿಂದಲೇ ಕಲಿಸುವ ಹಂಚಿಕೆಗಳನ್ನು ಶೋಧಿಸತೊಡಗಿದ್ದಾರೆ. 'ಯೋಜನಾ ಪದ್ಧತಿ'ಯ ಶಿಕ್ಷಣಕ್ರಮದಲ್ಲಿಯೂ ಆಟದ ತತ್ತ್ವವೇ ಮುಖ್ಯವಾಗಿದೆ. ಇದರಲ್ಲಿಯ ವ್ಯವಹಾರವು ಮನೆಯ ವ್ಯವಹಾರಕ್ಕೂ ಇದರ ಶಿಕ್ಷಣ—

ಪದ್ಧತಿಯು ಸಾಮಾನ್ಯ ವ್ಯವಹಾರಕ್ಕೂ ಹೊಂದಿಕೊಂಡಿದೆ. ವಿದ್ಯಾರ್ಥಿಗಳು ಸ್ವತಃ ಒಂದು ವಿಶಿಷ್ಟ ಯೋಜನೆಯನ್ನು ನಿಶ್ಚಯಿಸಿ ಶಿಕ್ಷಕನ ಸಾಹಾಯ್ಯದಿಂದ ಅದನ್ನು ಪೂರ್ತಿಗೊಳಿಸುವರು. ಆ ಯೋಜನೆಯು ಆಯುಷ್ಯದಲ್ಲಿಯ ದೈನಿಕ ವ್ಯವಹಾರದೊಳಗಿನ ಒಂದು ಭಾಗವೇ ಆಗಿರುವುದು. ಅದು ಶಾಲೆಯೊಳಗೆ ನಿಶ್ಚಿತ ವೇಳೆಯಲ್ಲಿ ಮುಗಿಸಲ್ಪಡುವುದು. ಈ ಪದ್ಧತಿಯು ಅಮೇರಿಕೆಯಲ್ಲಿ ಹೆಚ್ಚಿನ ಪ್ರಶಸ್ತಿಯನ್ನು ಪಡೆದಿದೆ; ಆಟವನ್ನು ಆಡುತಿರುವಾಗಲೆ ಬಾಲಕ-ಬಾಲಿಕೆಯರು ಒಂದು ಕೆಲಸವನ್ನು ಮಾಡುವ ಶಿಕ್ಷಣವನ್ನು ಪಡೆಯುವರು. ಸದ್ಯಕ್ಕೆ ಪುಸ್ತಕಜ್ಞಾನಕ್ಕಿಂತ ಪ್ರತ್ಯಕ್ಷವಾದ ಜ್ಞಾನಕ್ಕೇ ಹೆಚ್ಚಿನ ಗಮನವನ್ನು ಕೊಡುತ್ತಿರುವರು. ಬಯಲಲ್ಲಿಯ ಶಾಲೆಗಳು, ವಿದ್ಯಾರ್ಥಿಗಳ ಪ್ರವಾಸದ ಯೋಜನೆಗಳು, ಹೊಲದಲ್ಲಿಯ ಸೃಷ್ಟಿಜ್ಞಾನದ ಪಾಠಗಳು, ಶಾಲೆಯ ತೋಟದಲ್ಲಿಯ ಕೆಲಸ–ಮುಂತಾದ ಚಟುವಟಿಕೆಗಳು, ಈ ಬಗೆಯ ಪ್ರವೃತ್ತಿಯನ್ನೇ ವ್ಯಕ್ತಗೊಳಿಸುವುವು.

ಕೆಲವು ಶಿಕ್ಷಣಸುಧಾರಕರು ಶಾಲೆಯಲ್ಲಿಯ ಆಡಳಿತೆಯ ಕ್ರಮವನ್ನೂ ಸಂವಿಧಾನವ್ಯವಸ್ಥೆಯನ್ನೂ ಹೇಗೆ ಬಲಪಡಿಸಬೇಕೆಂಬ ವಿಷಯದಲ್ಲಿ ಕ್ರಾಂತಿಕಾರಕ ವಿಚಾರಗಳನ್ನೊಳಗೊಂಡ ನಿಬಂಧಗಳನ್ನು ಬರೆದಿರುವರು. ಇಂಗ್ಲಂಡದಲ್ಲಿ **ಹೋಮರಲೇನ** ಎಂಬವನು 'ಸಣ್ಣ ಮಕ್ಕಳ ಚಿಕ್ಕರಾಜ್ಯ'ವೆಂಬ ಪ್ರಯೋಗವನ್ನು ಅಮೇರಿಕೆಯ 'ಜಾರ್ಜ ಜೂನಿಯರ್ ರಿಪಬ್ಲಿಕ್''ದ ಮಾದರಿಯ ಆಧಾರದಿಂದ ಮಾಡಿರುವನು. ಈ ಬಾಲರಾಜ್ಯದಲ್ಲಿ ಅಪರಾಧ ಮಾಡಿದ ಹದಿನಾಲ್ಕು ವರ್ಷದ ಹುಡುಗ-ಹುಡುಗಿಯರು ಇದ್ದರು. ಈ ರಾಜ್ಯವು ಬೆಳೆಯುತ್ತ ಹೋದಾಗ ಅದರಲ್ಲಿ ಕೆಲವು ನಿರಪರಾಧಿಗಳಾದ ಚಿಕ್ಕಮಕ್ಕಳು ಸೇರಿ ಉಳಿದ ವಿದ್ಯಾರ್ಥಿಗಳನ್ನು ಸುಧಾರಿಸಲು ಶಕ್ಯವಾಯಿತು. ಅಲ್ಲಿಯ ಪದ್ಧತಿಯಿಂದಲೇ ಅಲ್ಲಿ ಶಿಕ್ಷಣ ಪಡೆಯುವ ಹುಡುಗರೇ ಶೋಧಿಸಿದ ಶಿಸ್ತಿನ ನಿಯಮಗಳನ್ನೂ ಆಡಳಿತೆಯ ಕ್ರಮವನ್ನೂ ನೋಡಿ ಪ್ರೇಕ್ಷಕರು ಬೆರಗಾದರು. ಸಣ್ಣ ಮಕ್ಕಳಲ್ಲಿರುವ ಅಪರಾಧ ಮಾಡುವ ಒಲವನ್ನು ತಿದ್ದಬೇಕಾದರೆ ಹೆಚ್ಚಾಗಿ ಕಠೋರವಾದ ಶಿಕ್ಷೆಯನ್ನು ಉಪಯೋಗಿಸಬೇಕಾಗುತ್ತಿರಲಿಲ್ಲ. ಅವರಲ್ಲಿದ್ದ ಒಲವುಗಳು

ಉದಾತ್ತಧ್ಯೇಯಗಳಾಗಿ ಮಾರ್ಪಡುವಂತೆ ಮಾಡುವುದೇ ಮುಖ್ಯ ವಿಷಯವಾಗಿದ್ದಿತು.

ತಂದೆತಾಯಂದಿರಿಗೆ ನಿರಾಶೆಯನ್ನುಂಟುಮಾಡಿದ, ಲಂಡನ್ನಿನ ಸಂದಿಗೊಂದಿಗಳಲ್ಲಿರುವ ಜನರಿಗೆ ಭಯವನ್ನುಂಟುಮಾಡುವ, ಚಿಕ್ಕ ಪುಂಡನೊಬ್ಬನು ಡಾರ್ಸೆಟಶಾಯರದ ಒಂದು ಹೊಲದಲ್ಲಿ ದುಡಿಯು ತಿರುವ ಹುಡುಗರ ಸಹವಾಸದಲ್ಲಿ ಸೇರಿದರೂ, ಅವರಂತೆ ತಾನೂ ಕೆಲಸ ದಲ್ಲಿ ತೊಡಗಿದರೆ ಉಳಿದವರಿಗೆ ಕೂಲಿಯು ದೊರಕುವಂತೆ ತನಗೂ ದೊರೆಯುವಂತಿದ್ದರೂ, ಹಾಗೆಯೆ ಸೋಮಾರಿಯಾಗಿ ಉಳಿದನು. ಜೊತೆಯವರು ನೀಡಿದ ಭಿಕ್ಷೆಯಿಂದಲೇ ಜೀವಿಸುವ ಪ್ರಸಂಗವು ಇವನಿಗೆ ಒದಗಿತು. ಆದರಿಂದ ಅವನಿಗೆ ನಾಚಿಕೆ ಹುಟ್ಟಿತು. ಇದರ ಪರಿಣಾಮ ವಾಗಿ ಅವನು ಅಲ್ಲಿಯ ನಿಯಮಗಳಿಗೆ ಒಳಗಾಗಿ ಉಳಿದ ಹುಡುಗರಂತೆ ದುಡಿಯತೊಡಗಿ ಯೋಗ್ಯ ಮಾರ್ಗವನ್ನು ಹಿಡಿದನು. ಯಾರಿಗೂ ಮಣಿಯದ ಈ ಸೋಮಾರಿಯಾದ ಪುಂಡ ಹುಡುಗನು ಇಂಥ ಸಂಘದ ಲಾಭವನ್ನು ಪಡೆದು, ಉದ್ಯೋಗಿಯಾದ ಒಕ್ಕಲಿಗನಾಗಿ, ತನ್ನ ಸಮಾಜವೇ ರಚಿಸಿದ ನಿಯಮಗಳನ್ನು ಉತ್ತಮ ರೀತಿಯಿಂದ ಪಾಲಿಸತೊಡಗಿದನು. ಅವನಿಗೆ ಆಗ ತಾನೇ ಕಾರ್ಯವನ್ನು ಮಾಡತೊಡಗಿದ್ದರಿಂದ ಕೆಲಸವು ಆಟವಾಗಿ ಪರಿಣಮಿಸಿ ಅವನ ಜೀವನವನ್ನೇ ಮಾರ್ಪಡಿಸಿತು.

ಈ ರೀತಿಯಿಂದ ಮಾಂಟೇಸರಿ, ಹೋಮರಲೇನ, ಇವರ ಪದ್ಧತಿ ಗಳೂ ಶೋಧಕಪದ್ಧತಿಯೂ ಶಿಕ್ಷಣಕ್ರಮದ ಮೇಲೆ ಸಾಕಷ್ಟು ಪರಿಣಾಮ ವನ್ನು ಉಂಟುಮಾಡಿರುವವು. ಆದರೆ ಇವು ಹಳೆಯ ಪದ್ಧತಿಗಳೆಲ್ಲ ವನ್ನೂ ನಿರ್ಮೂಲಗೊಳಿಸಿವೆಯೆಂದು ಹೇಳುವುದು ಸಾಹಸದ ಮಾತೇ ಸರಿ. ಈ ಪದ್ಧತಿಗಳ ನಿರ್ಮಾಪಕರನ್ನು ನಿಂದಿಸುವುದರಲ್ಲಿಯೂ ಅವುಗಳ ವರ್ಚಸ್ಸು ತೋರತೊಡಗಿದೆ. ಈ ಪದ್ಧತಿಗಳ ಆಂದೋಲನದ ತತ್ತ್ವಗಳು ಕೆಳಗಿನಂತಿವೆ:—

೧. ತಂದೆತಾಯ್ಗಳ ಮತ್ತು ಶಿಕ್ಷಕರ ಅಧಿಕಾರದರ್ಪವು ಕಡಮೆ ಯಾಗಬೇಕು.

೨. ಹುಡುಗರ ವರ್ತನದ, ಮತ್ತು ಅಭ್ಯಾಸದಲ್ಲಿಯ ಪ್ರಗತಿಯ ಹೊಣೆಯನ್ನು ಹುಡುಗರ ಮೇಲೆಯೆ ಹಾಕಬೇಕು.

೩. ಶಿಕ್ಷಣಕ್ರಮಗಳು ವ್ಯಕ್ತಿಗಳಲ್ಲಿರುವ ಭೇದಗಳಿಗೆ ಅನುಕೂಲ ವಾಗುವಂತೆ ವ್ಯಾಪಕವಿರಬೇಕು.

೪. ಈಗಿನವುಗಳಿಗಿಂತ ಬೇರೆತರದ ಶಕ್ತಿಗಳಿಗೂ ಅಭಿರುಚಿ ಗಳಿಗೂ ಹೆಚ್ಚಿನ ಗಮನವನ್ನು ಕೊಡಬೇಕು.

ಸಂಕ್ಷೇಪವಾಗಿ ಹೇಳುವುದಾದರೆ, ಆಟದ ಮೂಲಾಧಾರವಾದ ವ್ಯಕ್ತಿಯ ಸ್ವಯಂಸ್ಫೂರ್ತಿಯ ಉಪಯೋಗವನ್ನು ಮಾಡಿಕೊಳ್ಳುವುದೇ ಈ ಆಂದೋಲನದ ಮುಖ್ಯ ಉದ್ದೇಶವಾಗಿದೆ. ಈ ವಿಷಯವನ್ನು ಇನ್ನಿಷ್ಟು ಕೂಲಂಕಷವಾಗಿ ವಿಚಾರಿಸುವುದು ಅಗತ್ಯವೆನಿಸುತ್ತದೆ. ಏಕೆಂದರೆ ಈ ಪದ್ಧತಿಗೇ ದಿನದಿನಕ್ಕೆ ಹೆಚ್ಚಿನ ಪ್ರಾಶಸ್ತ್ಯವು ಬರತೊಡಗಿದೆ.

ಬಾಲಕನು ಸುತ್ತಮುತ್ತಲಿನ ಪರಿಸ್ಥಿತಿಯನ್ನು ತನ್ನ ದೃಷ್ಟಿಯಿಂದಲೇ ನೋಡುವನು. ಅಹಂಭಾವವು ಅವನಲ್ಲಿ ತುಂಬಿತುಳುಕುವುದು. ನಿಜವಾಗಿ ನಮ್ಮೆಲ್ಲರಲ್ಲಿಯೂ ನಾವೇ ವಿಶ್ವದ ಕೇಂದ್ರವೆಂದು ತಿಳಿಯುವ ಸ್ವಭಾವವುಂಟು. ಆದರೆ ಅದನ್ನು ಸ್ವಾರ್ಥವೆಂದು ಕರೆಯುವುದು ಯೋಗ್ಯವಾಗಲಾರದು. ನಮ್ಮ ಅಹಂಭಾವವನ್ನು ಇತರರು ಮನ್ನಿಸು ವಂತೆ, ಇತರರ ಅಹಂಭಾವವನ್ನು ನಾವು ಆದರದಿಂದ ನೋಡುವೆವು. ಶಾಲೆಯಲ್ಲಿ ವಿದ್ಯಾರ್ಥಿಯು ತನ್ನ ದೃಷ್ಟಿಯಿಂದಲೇ ಕಲಿಸುವ ಪ್ರಯತ್ನ ಗಳನ್ನು ನೋಡುವುದರಿಂದ ಸ್ವಾಭಾವಿಕವಾಗಿ ಸಮಾಜದ ಬೇಡಿಕೆಗಳಿಗೆ ಆಗಲಿ, ಶಿಕ್ಷಕನ ವರ್ಚಸ್ಸಿಗಾಗಲಿ, ಬಲಿಬೀಳದಂತೆ ನಿಸರ್ಗವು ಅವನನ್ನು ರಕ್ಷಿಸುವುದು. ಶಿಕ್ಷಕರು ಮನಸ್ಸಿಗೆ ಬಂದಂತೆ ನಡೆಯಲು ಸಾಧ್ಯವಿದ್ದರೆ ವಿದ್ಯಾರ್ಥಿಗಳನ್ನೆಲ್ಲ ಮೆತ್ತನ್ನ ಮಣ್ಣಿನಂತೆ ತಮಗೆ ಬೇಕಾದ ಆದರ್ಶಕ್ಕನುಗುಣವಾಗಿ ಸಿದ್ಧಗೊಳಿಸಬಹುದಾಗಿತ್ತು. 'ಅಹಂಭಾವ'ವು ಅವರಲ್ಲಿ ಇದ್ದುದರಿಂದ ಅವರು ವಿಶಿಷ್ಟವಾದ ಪಡಿಯಚ್ಚಿನಲ್ಲಿ ಮಾರ್ಪ ಡಲು ಒಪ್ಪುವುದಿಲ್ಲ. ಶಿಕ್ಷಕನು ನಿಸ್ಸಂದೇಹವಾಗಿ ವಿದ್ಯಾರ್ಥಿಗಳ ಬೆಳೆ- ವಣಿಗೆಯನ್ನು ಮಾರ್ಪಡಿಸಬಲ್ಲನು. ಆದರೆ ಅವನು ವಿದ್ಯಾರ್ಥಿಗಳ

ಅಂತಃಸ್ವಭಾವವನ್ನು ತಿಳಿದುಕೊಳ್ಳದೆ ಹಾಗೆ ಮಾಡಲು ಶಕ್ಯವಿಲ್ಲ. ಹುಡುಗರ ಸ್ವಭಾವದ ನಿಯಮಗಳನ್ನು ಪಾಲಿಸಿದರೆ ಮಾತ್ರ ಅವರಿಗೆ ತಕ್ಕ ದೀಕ್ಷೆಯನ್ನು ಕೊಡಬಹುದು. ಅವನು "ಗೆಲ್ಲಬೇಕಾದರೆ ಬಾಗಲೇ ಬೇಕು." ಶಿಕ್ಷಕನು ಪಾಠದಲ್ಲಿ ಅಭಿರುಚಿಯನ್ನು ಹುಟ್ಟಿಸುವುದೆಂದರೆ ಬಾಲಕರ ಮನೋಭಾವಗಳನ್ನೂ ಸ್ವಭಾವದ ವೈಶಿಷ್ಟ್ಯಗಳನ್ನೂ ತಿಳಿದು ಕೊಳ್ಳಲು ಯತ್ನಿಸಿದಂತೆ. ಹಳೆಯ ಪದ್ಧತಿಯವರೂ ಸಹಸಾ ಬೇಡವಾದ ವಿಷಯಗಳಲ್ಲಿ ಆಸಕ್ತಿಯನ್ನು ಹುಟ್ಟಿಸುವುದಕ್ಕೋಸ್ಕರ ಬೆತ್ತದ ಭಯ ಮುಂತಾದವುಗಳನ್ನು ಉಪಯೋಗಿಸುತ್ತಿದ್ದರು. ಯಾವ ರೀತಿಯಿಂದ ಆದರೂ ಸರಿಯೆ, ಪಾಠದಲ್ಲಿ ಅಭಿರುಚಿಯನ್ನು ಹುಟ್ಟಿಸಲೇಬೇಕು. ಆದರೆ ಯಾವ ತರದ ಅಭಿರುಚಿಯನ್ನು ಉಂಟುಮಾಡಬೇಕೆಂಬುದು ಮುಖ್ಯ ವಾದ ವ್ಯಾವಹಾರಿಕ ಪ್ರಶ್ನೆಯಾಗಿದೆ. ಹೊಸ ಪದ್ಧತಿಯವರು ಸಹ ಕೆಲವು ಪ್ರಸಂಗಗಳಲ್ಲಿ ಯಾವುದೊಂದು ಬಗೆಯ ಬಲುಮೆಯನ್ನೆ ಉಪಯೋಗಿ ಸುವರೆಂದು ಅವರ ಮೇಲೆ ಆಕ್ಷೇಪವುಂಟು. ಒಂದು ತರದ ಅಭಿರುಚಿಗೆ ಹುಡುಗರಿಂದ ಉತ್ತೇಜನವು ದೊರೆಯದಿದ್ದರೆ ಆದಕ್ಕಿಂತ ಕಡಮೆ ತರಗತಿಯ ಅಭಿರುಚಿಯನ್ನಾದರೂ ಹುಟ್ಟಿಸಲು ಯತ್ನಿಸಬೇಕು. ಹಳೆಯ ಪದ್ಧತಿಯವನು ಅವಶ್ಯವಾಗಿ ಬೆತ್ತವನ್ನೇ ಆಶ್ರಯಿಸುತ್ತಿರಲಿಕ್ಕಿಲ್ಲ. ಅವನು ಕಠೋರನಾಗಿರಬಹುದು. ಆದರೆ ಅವನೂ ತನ್ನ ಉದ್ದೇಶವನ್ನು ಉಗ್ರ ದಂಡನೆಯನ್ನು ಉಪಯೋಗಿಸದೆ ಸಾಧಿಸಬಹುದು. ಇವರಿರ್ವರ ನಡುವಿನ ಭೇದವು ಯಾವುದರ ವಿಷಯವಾಗಿ ಅಭಿರುಚಿಯನ್ನು ವಿದ್ಯಾರ್ಥಿಗಳಲ್ಲಿ ಹುಟ್ಟಿಸಬೇಕು ಎಂಬುದನ್ನು ಕುರಿತು ಉಂಟಾಗಿದೆ. (ಗುಲಾಬಿ ಹೂವುಗಳನ್ನು ಹಾಸಿದ ದಾರಿಯನ್ನು ಇಟ್ಟುಕೊಂಡ) ಸುಗಮ ಮಾರ್ಗದ ಆಧುನಿಕರು ಹೇಗಾದರೂ ಪ್ರಯತ್ನವನ್ನು ಮಾಡಿ ವಿದ್ಯಾರ್ಥಿಗಳಿಗೆ ವಿಷಯದಲ್ಲಿಯೂ ಅದರ ಉಪಯೋಗದಲ್ಲಿಯೂ ಅಭಿರುಚಿಯನ್ನು ಹುಟ್ಟಿಸುವರು. ಆದರೆ, ಪ್ರಾಚೀನಪದ್ಧತಿಯ ಪಕ್ಷಪಾತಿಗಳು ತಮ್ಮಿಂದ ಉಂಟಾಗುವ ದಂಡನೆಯ ಇಲ್ಲವೆ ಬೇರೆ ಉಗ್ರೋಪಾಯಗಳ ಭಯವನ್ನು ತಪ್ಪಿಸಿಕೊಳ್ಳುವುದಕ್ಕಾಗಿಯೆ ವಿದ್ಯಾರ್ಥಿಗಳು ಸರ್ವ ವಿಷಯಗಳನ್ನೂ ಕಲಿಯುವಂತೆ ಒತ್ತಾಯಪಡಿಸುವರು.

ಅಂತಿಮ ದೃಷ್ಟಿಯಿಂದ ನೋಡಲಾಗಿ ಕೆಲಮಟ್ಟಿಗೆ ಇವೆರಡೂ ಪದ್ಧತಿಗಳು— ಹಳೆಯವರದು ಮತ್ತು ಆಧುನಿಕರದು— ಕೂಡಿಕೊಳ್ಳುವುವು. ಏಕೆಂದರೆ, ಪ್ರಯತ್ನಪೂರ್ವಕವಾದ ಗಮನವು ಸಹಸಾ (ಪ್ರಯತ್ನವಿಲ್ಲದೆ ಕೊಡಬಹುದಾದ) ಬರುವ ಗಮನದಿಂದ ಸಾಹಾಯ್ಯವನ್ನು ಹೊಂದದಿದ್ದರೆ, ಗೊಂದಲವೊ ಅಲಕ್ಷ್ಯವೊ ಎದುರಿಗೆ ಬಂದು ನಿಲ್ಲುವುದು. ಪ್ರಾಯೋಗಿಕ ಮಾನಸಶಾಸ್ತ್ರಜ್ಞರು ' ಶುದ್ಧ ಪ್ರಯತ್ನಗಳಿಂದ ಕೂಡಿದ ಅವಧಾನವು ಕೆಲವು ನಿಮಿಷಗಳ ವರೆಗೆ ಉಳಿಯಬಹುದು " ಎಂದು ಹೇಳುತ್ತಾರೆ. ಇಚ್ಛಾಶಕ್ತಿಯು ಕೆಲವು ವಿಷಯಗಳಲ್ಲಿ ಗಮನವನ್ನು ಪೂರೈಸಬಹುದು. ಆದರೆ ವಿಷಯದಲ್ಲಿ ಅಭಿರುಚಿಯೇ ಹುಟ್ಟದಿದ್ದರೆ ಅವಧಾನವು ಕಡಮೆಯಾಗಲಿಕ್ಕೇಬೇಕು. ಸುದೈವದಿಂದ ಮನುಷ್ಯನ ಮನಸ್ಸು ದೃಢವಾಗಿ ಒಂದು ವಿಷಯದ ಕಡೆಗೆ ಹೊರಳಿತೆಂದರೆ ಅದು ಕೂಡಲೆ ಪ್ರಯತ್ನಪೂರ್ವಕ ಗಮನವನ್ನು ಕೊಡಬಹುದಾದ ವಿಷಯದ ಸ್ವರೂಪವನ್ನು ಕಂಡುಹಿಡಿಯುವುದು. ಹಳೆಯ ಪದ್ಧತಿಯವರು ಬಹಳ ಪ್ರಯತ್ನಗಳನ್ನು ಮಾಡಹಚ್ಚಿ ಗ್ರಹಿಸಲು ದುಃಸಾಧ್ಯವಾದ ವಿಷಯಗಳನ್ನು ವಿದ್ಯಾರ್ಥಿಗಳು ಗ್ರಹಿಸುವಂತೆ ಮಾಡುತ್ತಿದ್ದರು. ಆದರೇನು? ಅದರಲ್ಲಿ ಆನಂದವಿಲ್ಲ. ' ಆನಂದವಿಲ್ಲದೆ ಲಾಭವಿಲ್ಲ ' ಎಂಬ ಗಾದೆಯ ಮಾತಿದೆ. ಇದರಲ್ಲಿ ತಥ್ಯಾಂಶವುಂಟು; ಇದರಲ್ಲಿ ಕ್ರೀಡನ ಪದ್ಧತಿಯು ಹುದುಗಿಕೊಂಡಿದೆ. ಆಧುನಿಕರು ಕೂಡ ' ಮಹಾರಾಯರೇ, ನಿಮಗೆ ರುಚಿಸುವ ವಿಷಯಗಳನ್ನು ಕಲಿಯಿರಿ ' ಎಂದು ಉಪದೇಶ ಮಾಡುವ ಸಾಹಸಕ್ಕೆ ಕೈಹಾಕುವುದಿಲ್ಲ.

ಈ ಉಪದೇಶವು ' ವಿದ್ಯಾರ್ಥಿಗಳು ತಮಗೆ ಬೇಕಾದ ವಿಷಯಗಳನ್ನು ಆರಿಸಬಹುದೋ ? ' ಎಂಬ ಪ್ರಶ್ನೆಯನ್ನು ಹುಟ್ಟಿಸುವುದು. ಸಿದ್ಧಗೊಳಿಸಿದ ವಿಷಯಪಟ್ಟಿಯಿರಬೇಕೊ, ವಿದ್ಯಾರ್ಥಿಯು ತಾನು ಕಲಿಯತಕ್ಕ ವಿಷಯಗಳನ್ನು ತಾನೇ ಆರಿಸಬೇಕೊ, ಎಂಬ ಸಮಸ್ಯೆಯುಂಟಾಗುವುದು. ಪ್ರಾಗತಿಕ ಶಿಕ್ಷಕರು ಎರಡೂ ಪದ್ಧತಿಗಳು ಇರಬೇಕೆಂದು ಅಭಿಪ್ರಾಯಪಡುತ್ತಾರೆ. ವಿದ್ಯಾರ್ಥಿಯು ಆಸ್ಥೆಯಿಂದ ಕಲಿಯಬೇಕಾದರೆ, ಕ್ರೀಡನಪದ್ಧತಿಯಿಂದ ಕಲಿಯಬೇಕಾದರೆ, ತನಗೆ ಸೇರುವ ವಿಷಯಗಳನ್ನು

ಅವನು ಆರಿಸಿಕೊಳ್ಳಬೇಕು. ಆದರೆ ಅವನ ವಿದ್ಯಾಭ್ಯಾಸವು ಒಂದೇ ಕಡೆಗೆ ಒಲಿಯಬಾರದೆಂದು ಇನ್ನು ಕೆಲವು ವಿಷಯಗಳ ಗುಂಪನ್ನು ಅವನು ಅಲಕ್ಷಿಸಬಾರದೆಂಬ ಜಾಗೃತಿಯನ್ನೂ ಕೈಕೊಳ್ಳಬೇಕು. ಒಂದು ವಿಷಯದಲ್ಲಿ ಪ್ರಗತಿಯನ್ನು ತೋರಿಸದ ಬಾಲಕನನ್ನು ಆ ವಿಷಯವನ್ನು ಬಿಟ್ಟು ಅವನಿಗೆ ಸೇರುವ ಬೇರೊಂದು ವಿಷಯವನ್ನು ತೆಗೆದುಕೊಳ್ಳುವಂತೆ ಮಾಡಬಹುದೇ? ಎಂಬ ಪ್ರಶ್ನೆಯು ಶಿಕ್ಷಕನನ್ನು ಪುನಃ ಪುನಃ ಎದುರಿಸುವುದು. ಆದರೆ ಕೆಲವು ವಿಷಯಗಳ ಗುಂಪನ್ನು ಆರಿಸಿ ತನಗೆ ಬೇಡವಾದ ವಿಷಯದಲ್ಲಿ ಸಹ ಸಾವಕಾಶವಾಗಿ ಅಭಿರುಚಿಯನ್ನು ಹುಟ್ಟಿಸಿಕೊಂಡು ವಿಶೇಷ ಪ್ರಯತ್ನವಿಲ್ಲದೆ ಅದನ್ನು ವಿದ್ಯಾರ್ಥಿಯು ಗ್ರಹಿಸಬಹುದು. ಬೇಡವಾದ ವಿಷಯದಲ್ಲಿ ಮೇಲಿನ ತರಗತಿಯನ್ನು ಮುಟ್ಟಲು ಯತ್ನಿಸುವಂತೆ ಆ ವಿದ್ಯಾರ್ಥಿಗೆ ಒತ್ತಾಯಪಡಿಸಬಾರದು.

ಹರ್ಬಾರ್ಟನ ಅನುಯಾಯಿಗಳು ಅಭಿರುಚಿಯನ್ನು ಸಾಧನವೆಂದು ತಿಳಿಯದೆ, ಧ್ಯೇಯವೆಂದೇ ತಿಳಿಯತೊಡಗಿ, ಅದರ ಮಹತ್ತ್ವವನ್ನು ಬೆಳೆಯಿಸಹತ್ತಿದರು. ಶಿಕ್ಷಣದ ಅಂತಿಮ ಧ್ಯೇಯವು ನಾನಾವಿಧದ ಅಭಿರುಚಿಗಳನ್ನು ಪೂರೈಸಿಕೊಡತಕ್ಕದ್ದೆಂದು ಮನ್ನಿಸಲಾರಂಭಿಸಿದರು. ಇಂಥ ಧ್ಯೇಯದಲ್ಲಿ ಕೇಡೂ ಸೇರಿಕೊಂಡಿರಬಹುದು. ಸುಶಿಕ್ಷಿತ ಮನುಷ್ಯನು ಎಲ್ಲ ಒಗೆಯ ಪ್ರಚೋದಕ ಶಕ್ತಿಗಳಿಗೆ ಒಳಗಾಗುವುದುಂಟು. ಆದರೆ ಆ ಶಕ್ತಿಗಳ ಯೋಗ್ಯತಾಯೋಗ್ಯತೆಗಳನ್ನು ಪರೀಕ್ಷಿಸಿ ಅವುಗಳಿಗೆ ತಕ್ಕಂತೆ ನೈತಿಕಶಿಕ್ಷಣದ ಒಲವಿನಿಂದ ಅವನು ನಡೆದುಕೊಳ್ಳುವನು.

ನೂತನ ಶಿಕ್ಷಣದ ಮುಖ್ಯ ಲಕ್ಷಣವು 'ರಸಾಸ್ವಾದನ ಪಾಠ'ದಲ್ಲಿ ಕಂಡುಬರುತ್ತದೆ. ಇದರಲ್ಲಿ ಕಲೆಯ ಕೆಲವು ಸ್ವರೂಪಗಳನ್ನು ಅಭ್ಯಸಿಸಿ ಅವುಗಳ ಸೌಂದರ್ಯವನ್ನು ಕಂಡುಹಿಡಿಯುವ ಬುದ್ಧಿಪುರಃಸರವಾದ ಪ್ರಯತ್ನವಿರುವುದು. ಕೆಲವರು ಮಕ್ಕಳ ಉದ್ರೇಕಗಳಿಗೆ ಶಿಕ್ಷಕರು ಪ್ರತ್ಯಕ್ಷವಾಗಿ ಕೊಡುವ ಆಸ್ಪದದಿಂದ ಅವರು ದಾಂಭಿಕರಾಗುವ ಭಯವಿದೆಯೆಂದು ಚಿಂತಿಸುತ್ತಾರೆ; ಆದರೆ ಸಂಗೀತದ ಸವಿಯು ತಿಳಿಯಬೇಕಾದರೆ ಯಾವುದಾದರೊಂದು ವಾದ್ಯವನ್ನು ಬಾರಿಸಲು ಹಚ್ಚಬೇಕು;

ಚಿತ್ರಕಲೆಯ ಸವಿಯನ್ನು ಅರಿಯುವುದಾದರೆ ಅವರಿಗೆ ಚಿತ್ರಗಳನ್ನು ತೆಗೆಯುಲಿಕ್ಕೂ ಅವುಗಳಿಗೆ ತಕ್ಕ ಬಣ್ಣಗಳನ್ನು ಕೊಡಲಿಕ್ಕೂ ಕಲಿಸಬೇಕು. ನೂತನ ಶಿಕ್ಷಣಪದ್ಧತಿಗಳಿಂದ ಸಿದ್ಧರಾದ ಉತ್ತಮ ವಾದ್ಯಗಾರರ ಅಥವಾ ಚಿತ್ರಕಲೆಯವರ ಉತ್ತಮ ಕಲಾಕೃತಿಗಳ ಪರಿಚಯವನ್ನು ಮಾಡಿಕೊಡಬೇಕು. ಹೀಗೆ ಎರಡು ರೀತಿಯಿಂದ ವಿದ್ಯಾರ್ಥಿಗಳು ಲಾಭವನ್ನು ಪಡೆಯುಹತ್ತುವರು; ಅವರಿಗೆ ಇವುಗಳನ್ನು ಕೇಳಿ, ನೋಡಿ, ಆನಂದವಾಗುವುದು; ಅದರಿಂದ ಅವರು ತಮ್ಮ ಕೃತಿಗಳಲ್ಲಿಯೂ ಸುಧಾರಣೆಯನ್ನು ಮಾಡಿಕೊಳ್ಳಲು ಹವಣಿಸುವರು. ಇಂತಹ ಉತ್ಕಟೇಚ್ಛೆಯಿಲ್ಲದವರು ಅಥವಾ ಕೌಶಲ್ಯವಿಲ್ಲದವರು ಅನ್ಯರಲ್ಲಿಯ ಕಲಾತ್ಮಕವಾದ ಆವಿರ್ಭಾವವನ್ನು ಕಂಡು ಸಂತೋಷಪಡುವರು.

ಅನುಕರಣವೂ ಸೂಚನೆಗಳೂ ಈ ಪ್ರಯತ್ನದಲ್ಲಿ ಬಹಳವಾಗಿ ಉಪಯುಕ್ತವಾಗುವುವು. ತಾನು ಓದುವ ಕವನದ ರಸಾಸ್ವಾದವನ್ನು ಶಿಕ್ಷಕನು ಅನುಭವಿಸಿದಂತೆ ವಿದ್ಯಾರ್ಥಿಗಳೂ ಕಾಪಟ್ಯದ, ದಾಂಭಿಕತನದ ಭಾವನೆಗಳಿಲ್ಲದೆ ಸವಿಯುವರು. ರಸಾಸ್ವಾದನದ ಪಾಠದಲ್ಲಿ ಕ್ರೀಡನ-ಪದ್ಧತಿಯು ಪ್ರತ್ಯಕ್ಷವಾಗಿಯೂ ಅಪ್ರತ್ಯಕ್ಷವಾಗಿಯೂ ಲಾಭದಾಯಕವೆಂದು ಕಂಡುಬರುತ್ತದೆ.

ಮೇಲ್ಕಾಣಿಸಿದ ವಿಚಾರಗಳನ್ನು ಗಮನಕ್ಕೆ ತಂದುಕೊಂಡು **ಕಾಲ್ಡವೆಲ್ ಕುಕ್** ಎಂಬವನು 'ಪ್ಲೇವೇ' ಎಂದರೆ '**ಕ್ರೀಡನಪದ್ಧತಿ**' ಯ ಶಿಕ್ಷಣವನ್ನು ಪ್ರಚಾರಕ್ಕೆ ತಂದನು. ಈ ಶಿಕ್ಷಣಪದ್ಧತಿಯುಳ್ಳ ಶಾಲೆಗಳಲ್ಲಿ ವಿದ್ಯಾರ್ಥಿಗಳು ಕವಿತೆಗಳನ್ನು ರಚಿಸುವರು, ನಾಟಕಗಳನ್ನು ಪ್ರಯೋಗಿಸುವರು, ವಕ್ತೃತ್ವ ಸಭೆಗಳನ್ನು ನಡೆಯಿಸುವರು. ಇವೆಲ್ಲವೂ ಆಟದ ಸ್ವರೂಪದಲ್ಲಿಯೆ ನಡೆದಿರುವುವು. ಈ ಪದ್ಧತಿಯ ಸಾಮಾನ್ಯ ಲಾಭಗಳನ್ನು ವಿಮರ್ಶಿಸಿ, ಅವುಗಳನ್ನು ಎಷ್ಟರ ಮಟ್ಟಿಗೆ ಪ್ರಾಥಮಿಕ ಶಾಲೆಗಳಲ್ಲಿ ಕಾರ್ಯರಂಗಕ್ಕೆ ತರಲು ಸಾಧ್ಯವಿದೆಯೆಂಬುದನ್ನು ನೋಡುವ.

**ಕ್ರೀಡನಪದ್ಧತಿಯ ಸಾಮಾನ್ಯ ಲಾಭಗಳು ಕೆಳಗಿನಂತಿವೆ:—**

(೧) ಶಾಲೆಯ ಮುಖ್ಯ ಧ್ಯೇಯಗಳಲ್ಲಿ ಒಂದಾದ "ವಿದ್ಯಾರ್ಥಿಗಳನ್ನು ಜೀವನದ ಮತ್ತು ಸಾಮಾಜಿಕ ಪರಿಸ್ಥಿತಿಗೆ ಹೊಂದಿಸುವಿಕೆ" ಎಂಬ ಧ್ಯೇಯವನ್ನು ಸಾಧಿಸುವುದಕ್ಕೆ ಕ್ರೀಡನಪದ್ಧತಿಯು ಸಹಾಯಕವಾಗುವುದು. ಶಾಲೆಯ ಮಕ್ಕಳು ಯಾವುದಾದರೊಂದು ಆಟವನ್ನು ಆಡುವಾಗ ಸಹಕಾರದ ಲಾಭವನ್ನೂ ಆನಂದವನ್ನೂ ಸಹಜವಾಗಿ ಸವಿಯುವರು. ಅವರು ಶಾಲೆಯಲ್ಲಿದ್ದಾಗ ಈ ಆನಂದವನ್ನು ಮೊದಲು ಮೊದಲು ಆಟಗಳಲ್ಲಿ, ಆ ಮೇಲೆ ಆಟದ ರೀತಿಯಿಂದ ಕೈಕೊಂಡ ಕೆಲಸಗಳಲ್ಲಿ ಅನುಭವಿಸಿ ಮುಂದೆ ಸಂಸಾರದಲ್ಲಿಯೂ ಸಾರ್ವಜನಿಕ ಕಾರ್ಯಗಳಲ್ಲಿಯೂ ಅನುಭವಿಸುವರು

(೨) ಬಾಲಕನು ತಾನು ಮಾಡತಕ್ಕ ಕಾರ್ಯದಲ್ಲಿ ತನ್ನ ಎಲ್ಲ ಸ್ಫೂರ್ತಿಯನ್ನು ಉಪಯೋಗಿಸಬೇಕಾದರೆ ಆಟದ ರೀತಿಯೆ ಅವನ ಮಾನಸಿಕ ವಿಕಾಸಕ್ಕೆ ಅನುಕೂಲವಿರುವುದು. ಅದರ ಸಾಹಾಯ್ಯದಿಂದ ಆತನ ಮಾನಸಿಕ, ಶಾರೀರಿಕ, ಆಧ್ಯಾತ್ಮಿಕ, ಸಾಮಾಜಿಕ ಶಕ್ತಿಗಳೆಲ್ಲವೂ ಜಾಗೃತವಾಗಿ ನಡೆಯಲಾರಂಭಿಸಿ ಸ್ವವಿಚಾರಕ್ಕೂ ಮತ್ತು ಕೃತಿಗೂ ಮೇಳವಿಲ್ಲದ ಪರಿಸ್ಥಿತಿಯಿಂದ ಅವನನ್ನು ಉಳಿಸಿ ಕಾರ್ಯದಕ್ಷನನ್ನಾಗಿ ಮಾಡುವುದು. ವಿಚಾರದಂತೆ ಕೃತಿಯು ಆಚರಣೆಯಲ್ಲಿ ಪ್ರತಿಫಲಿಸದಿದ್ದರೆ, ಪ್ರಗತಿಯ ಮಾರ್ಗವೇ ಕುಂಠಿತವಾಗುವುದು.

(೩) ಕ್ರೀಡನಪದ್ಧತಿಯು ವಿದ್ಯಾರ್ಥಿಗಳ ಉತ್ಪಾದಕಶಕ್ತಿಗಳನ್ನು ಪ್ರೋತ್ಸಾಹಿಸುತ್ತದೆ. ವಿದ್ಯಾರ್ಥಿಗಳಿಗೆ ನಿರ್ಬಂಧವಿಲ್ಲದೆ ಕಾಲ್ಪನಿಕವಾದ ಆಟಗಳನ್ನು ಆಡುವ ಸ್ವಾತಂತ್ರ್ಯವನ್ನು ಶಿಕ್ಷಕನು ಕೊಡಬೇಕು. ಮುಂದೆ ನಾಟಕಗಳನ್ನು ಅಭಿನಯಿಸುವಾಗಲು, ಸಾಹಿತ್ಯ, ಕಲೆ, ಮುಂತಾದ ವಿಷಯಗಳನ್ನು ಅಭ್ಯಸಿಸುವಾಗಲು ಹೊಸದಾರಿಯನ್ನೂ ವಿಚಾರಶಕ್ತಿಯನ್ನೂ ಅನುಮಾನಶಕ್ತಿಯನ್ನೂ ಅವರು ತೋರಿಸಬಹುದು.

**ಮಾತೃಭಾಷೆ**:— ಮಾತೃಭಾಷೆಯನ್ನು ಕಲಿಸುವ ಪದ್ಧತಿಗಳು ಅನೇಕವಾಗಿವೆ. ಅದನ್ನು ಪ್ರತ್ಯಕ್ಷ, ಅಥವಾ ಅನುವಾದಪದ್ಧತಿಯಿಂದ ಕಲಿಸಬಹುದು. ಆಯಾ ಪದ್ಧತಿಗಳಿಂದ ಕಲಿಸುವುದರಿಂದ ಸಾಕಷ್ಟು

ಲಾಭವಾಗುವುದು ನಿಜ. ಆದರೆ ಶಿಕ್ಷಕನು ಒಂದು ಸೂಚನೆಯನ್ನು ಅವಶ್ಯವಾಗಿ ನೆನಪಿಡಬೇಕು. ಕನ್ನಡವು ನಮ್ಮ ಮಾತೃಭಾಷೆ. ಆದ್ದರಿಂದ ಪ್ರತಿಯೊಬ್ಬ ವಿದ್ಯಾರ್ಥಿಯಲ್ಲಿಯೂ 'ಕನ್ನಡವು ನನ್ನ ತಾಯ್ನುಡಿ' ಎಂಬ ಭಾವವು ಜಾಗೃತವಾಗುವಂತೆ ಮಾಡಬೇಕು; ತಾಯ್ನುಡಿಯನ್ನು ಕುರಿತು ಪ್ರೇಮವನ್ನು ಹುಟ್ಟಿಸಬೇಕು; ಅದರ ಗುಣಗಳನ್ನು ಚರ್ಚಿಸುತ್ತ ಇರಬೇಕು. ಪಠ್ಯಪುಸ್ತಕಗಳಿಂದ ಮಾತೃಭಾಷೆಯ ಶಿಕ್ಷಣವು ಸಾಕಷ್ಟು ಪೂರ್ಣವಾಗುವುದಿಲ್ಲ. ಪಾಠಶಾಲೆಯಲ್ಲಿಯ ಬೇರೆ ಚಟುವಟಿಕೆಗಳಿಂದಲೂ ಭಾಷೆಯನ್ನು ಕಲಿಸಲು ಸಾಹಾಯ್ಯವು ದೊರೆಯುವುದು; ಮಾತೃಭಾಷೆಯ-ಮೇಲಿನ ಪ್ರೇಮವೂ ಅವುಗಳಿಂದ ಬೆಳೆಯುವುದು. ಉದಾಹರಣೆಗಾಗಿ, ಚಿಕ್ಕ ಚಿಕ್ಕ ಮಕ್ಕಳಿಂದ ಯೋಗ್ಯ ನಾಟಕಗಳನ್ನು ಅಭಿನಯಿಸುವುದು, ಒಡಪುಗಳಿಗೆ ಉತ್ತರಗಳನ್ನು ಕೊಡಿಸುವುದು, ಶಬ್ದಯೋಜನೆಯ ಮತ್ತು ಶಬ್ದಗಳ ಶುದ್ಧಾಶುದ್ಧತೆಯ ವಿಷಯವಾದ ಸ್ಪರ್ಧೆಗಳನ್ನೂ ಕವಿತೆಯ ಪಠನದ ಮೇಲಾಟಗಳನ್ನೂ ಏರ್ಪಡಿಸುವುದು, ಒಂದು ವಿಷಯದ ಮೇಲೆ ವಾದವಿವಾದವನ್ನು ಮಾಡಿಸುವುದು, ಒಂದು ಶಬ್ದದ ಅಂತ್ಯಾಕ್ಷರದಿಂದ ಮೊದಲುಗೊಂಡ ಇನ್ನೊಂದು ಶಬ್ದವನ್ನು ಹೇಳಿಸುವುದು, ಚಿತ್ರಗಳ ಸಾಹಾಯ್ಯದಿಂದ ಕತೆಯನ್ನು ಹೇಳಿಸುವುದು, ಗದ್ಯಪದ್ಯಗಳ ಪುಸ್ತಕಗಳಲ್ಲಿಯ ಉತ್ತಮ ವಚನಗಳನ್ನು ಬರೆಯಿಸುವುದು, ಸುಂದರವಾದ ಅಕ್ಷರಗಳ ಟಿಪ್ಪಣಿಪುಸ್ತಕಗಳನ್ನು ಪ್ರದರ್ಶಿಸುವುದು, ಮಾಸಪತ್ರಿಕೆಯನ್ನು ಹೊರಡಿಸುವುದು— ಇತ್ಯಾದಿ.

೧. **ಅಭಿನಯ.**— ಬಾಲಕರಲ್ಲಿ ಅನುಕರಣಶಕ್ತಿಯುಂಟು. ಹಿರಿಯರು ಹೇಗೆ ಮಾಡುವರೊ ಹೇಗೆ ನುಡಿಯುವರೊ ಹಾಗೆಯೆ ಅವರೂ ಮಾಡಲಾರಂಭಿಸುವರು, ನುಡಿಯತೊಡಗುವರು. ಇತರರ ನಡೆ-ನುಡಿಗಳ ಅಭಿನಯವನ್ನು ಮಾಡುವುದರಿಂದ ಅವರಿಗೆ ವಿಶೇಷವಾದ ಆನಂದವು ಉಂಟಾಗುತ್ತದೆ. ಈ ಪ್ರವೃತ್ತಿಯ ಉಪಯೋಗವನ್ನು ಶಿಕ್ಷಕರು ಚೆನ್ನಾಗಿ ಮಾಡಿಕೊಳ್ಳಬೇಕು. ಈ ಪ್ರವೃತ್ತಿಯ ದುರುಪಯೋಗವನ್ನು ಎಷ್ಟೋ ಸಲ ವಿದ್ಯಾರ್ಥಿಗಳು ಮಾಡಿಕೊಂಡು ವರ್ಗದಲ್ಲಿಯ ಶಾಂತತೆಗೆ ಭಂಗವನ್ನು ತರಬಹುದು. ಹಾಗಾಗದಂತೆ ನೋಡಿಕೊಳ್ಳುವುದು ಶಿಕ್ಷಕನ

ಕರ್ತವ್ಯವು. ಬಾಲಕರಲ್ಲಿರುವಂಥ ಸ್ವಾಭಾವಿಕವಾದ ಉತ್ಸಾಹದ ಮತ್ತು ಚಂಚಲತೆಯ ಉಪಯೋಗವನ್ನು ಯೋಗ್ಯ ರೀತಿಯಲ್ಲಿ ಮಾಡಿಕೊಳ್ಳಬೇಕು.

ಪಠ್ಯಪುಸ್ತಕಗಳಲ್ಲಿ ಸಂಭಾಷಣೆಯ ಪಾಠಗಳು ಬಂದಿದ್ದರೆ ಸಂಭಾಷಣೆಯನ್ನು ಮಾಡುವವರ ಪಾತ್ರಗಳನ್ನು ವಿದ್ಯಾರ್ಥಿಗಳಿಗೆ ಕೊಡಬೇಕು; ಅವರಿಂದ ಸಂಭಾಷಣೆಯನ್ನು ಮಾಡಿಸಬೇಕು. ಇದೂ ಒಂದು ಬಗೆಯ ಅಭಿನಯವೇ. ಕನ್ನಡದಲ್ಲಿಯ ಯೋಗ್ಯವಾದ ಏಕಾಂಕ ನಾಟಕದ ಅಥವಾ ಮಹಾನಾಟಕದ ಮನೋರಂಜಕವಾದ ದೃಶ್ಯಗಳನ್ನು ಆಯ್ದುಕೊಂಡು ವಿದ್ಯಾರ್ಥಿಗಳಿಂದ ಅಭಿನಯಿಸಬೇಕು. ಇದರಿಂದ ಅನಾಯಾಸವಾಗಿ ಭಾಷೆಯ ಜ್ಞಾನವು ಬೆಳೆಯುವುದು; ಇಂತಹ ನಾಟಕ ಕೃತಿಗಳು ಐತಿಹಾಸಿಕವಿದ್ದರೆ ಇತಿಹಾಸದ ಜ್ಞಾನವಾಗುವುದು. ಒಂದು ನೈತಿಕ ವಿಚಾರವನ್ನು ಇಲ್ಲಿ ಹೇಳುವುದು ಅಪ್ರಸ್ತುತವಾಗಲಾರದು. ಸಾಧ್ಯವಿದ್ದಮಟ್ಟಿಗೂ ದುಷ್ಟವ್ಯಕ್ತಿಯ ಪಾತ್ರದ ಅಭಿನಯಕ್ಕೆ ಶಾಲೆಗಳಲ್ಲಿ ಎಡೆಯಿರಬಾರದು.

೨. **ಒಡಪುಗಳ ಮತ್ತು ಶ್ಲೇಷಗಳ ಉಪಯೋಗ.** — ಕೆಲವು ವರ್ಷಗಳ ಹಿಂದೆ ಒಡಪುಗಳು, ಶ್ಲೇಷಗಳು, ಮೊದಲಾದುವುಗಳ ಪ್ರಚಾರವು ಬಹಳವಾಗಿದ್ದಿತು. ಈಗ ಅವುಗಳ ಉಪಯೋಗವು ಶಾಲೆಗಳಲ್ಲಿ ಬಹಳ ಕಡಮೆಯಾಗಿ ಹೋಗಿದೆ. ಅಲ್ಲಲ್ಲಿ ಜನರು ಅವುಗಳನ್ನು ತೀರ ಮರೆತು ಬಿಟ್ಟಿದ್ದಾರೆ. ಒಡಪುಗಳನ್ನು ಒಡೆಯುವುದರಿಂದ, ಗೂಢಾರ್ಥಗಳನ್ನು ಹೊರಪಡಿಸುವುದರಿಂದ ಬುದ್ಧಿವಿಕಾಸವಾಗುವುದು; ಅಲ್ಲದೆ ಭಾಷೆಯ ಜ್ಞಾನವೂ ಶಬ್ದಸಂಪತ್ತೂ ಬೆಳೆಯುವುವು. ಉದಾಹರಣಾರ್ಥವಾಗಿ—

ಮರದಾಗಮರಹುಟ್ಟಿ ಮರಚಕ್ರಕಾಯಾಗಿ ತಿನಬಾರದ ಹಣ್ಣು ಬಲುಸವಿ— ಎಂದರೇನು? 'ಮಗು' ಎಂದು ಉತ್ತರ.

ಈ ಬಗೆಯ ಸಾವಿರಾರು ಒಡಪುಗಳು ಹಿಂದಕ್ಕೆ ನಮ್ಮಲ್ಲಿ ಪ್ರಚಲಿತವಾಗಿದ್ದುವು. ಅವು ಇನ್ನೂ ಲುಪ್ತವಾಗಿರುವುದಿಲ್ಲ. ಇಂತಹ ಒಡಪುಗಳನ್ನು ಶಿಕ್ಷಕನು ಸಂಗ್ರಹಿಸಿ ವಿದ್ಯಾರ್ಥಿಗಳಿಗೆ ಕಲಿಸಬೇಕು.

ವಿದಾರ್ಥಿಗಳಲ್ಲಿ ಎರಡು ಗುಂಪುಗಳನ್ನು ಮಾಡಿ ಒಡಪುಗಳ ಮೇಲಾಟವನ್ನು ಮಾಡಿಸಬೇಕು; ಸರಿಯಾದ ಉತ್ತರವಿತ್ತವರಿಗೆ ಗುಣಗಳನ್ನು ಕೊಡಬೇಕು; ಇದರಿಂದ ಸ್ವತಃ ವಿದ್ಯಾರ್ಥಿಗಳೇ ಒಡಪುಗಳನ್ನು ಕಟ್ಟಿ ಕೇಳಲು ಆರಂಭಿಸುವರು. ಆಗ ಬಂಗಾರಕ್ಕೆ ಕುಂದಣಹಾಕಿದಂತಾಗುವುದು.

ಇದೇ ರೀತಿಯಲ್ಲಿ ಶ್ಲೇಷಾರ್ಥಗಳ ಮೇಲಾಟವನ್ನೂ ಮಾಡಿಸಬೇಕು; ಶ್ಲೇಷಾರ್ಥಗಳುಳ್ಳ ಪದ್ಯಗಳನ್ನು ಆಯ್ದು ಕಲಿಹಾಕಿ ವಿದ್ಯಾರ್ಥಿಗಳಿಗೆ ಅವುಗಳ ಸ್ವಾರಸ್ಯವನ್ನು ತಿಳಿಸಬೇಕು. ಉದಾಹರಣಾರ್ಥವಾಗಿ —

**ನಿರುತಂ ಕುಮುದಶೋಭಿ ಸೈಯುತ್ಯದಂತೆ, ವಾ**
**ನರಸೈನ್ಯದಂತೆ, ಕಮಲೋದರೋದ್ಭಾಸಿ ಭಾ**
**ಸುರಶುಕ್ಲಪಕ್ಷದಂತಹಿತಲ್ಪದಂತೆ.** ಕವಿಸೇವಿತಂ ಗಗನದಂತೆ |
**ಧರಣಿಪಾಲಯದಂತೆ, ಸುಮನೋಹರಂ** ನಿಶಾ
**ಚರವಂಶದಂತೆ ಮಾಲಾಕಾರ** ಜನದಂತೆ,
**ಹರಿಜನ್ಮಭೂಮಿ ಗೋಕುಲದಂತೆ** ವನದಂತೆ, ತತ್ಸರಃ ಕಂಗೊಳಿಸಿತಃ ||

(ಜೈಮಿನಿ ಭಾರತ ೧೫-೧೧)

**೩. ಕಂಠಪಾಠಗಳ ಸ್ಪರ್ಧೆ.**—ಪ್ರಾಥಮಿಕ ಮಾಧ್ಯಮಿಕ ವಿದ್ಯಾರ್ಥಿಗಳ ಸ್ಮರಣಶಕ್ತಿಯು ತೀಕ್ಷ್ಣವಾಗಿರುವುದಂದ ಅವರು ಕಂಠಪಾಠವನ್ನು ಚೆನ್ನಾಗಿ ಮಾಡಬಲ್ಲರು. ಆದುದರಿಂದ ವಿದ್ಯಾರ್ಥಿಗಳಿಗೆ ಪಠ್ಯಪುಸ್ತಕದಲ್ಲಿಯ ಸ್ಫೂರ್ತಿದಾಯಕ ಪದ್ಯಗಳನ್ನೂ ಗದ್ಯಭಾಗಗಳನ್ನೂ ಮುಖಪಾಠಮಾಡಿಸುವದಲ್ಲದೆ, ಸಾಹಿತ್ಯದ ಉತ್ತಮಾಂಶಗಳನ್ನು ಆಯ್ದುಕೊಂಡು ಅವರಿಂದ ಕಂಠಪಾಠವನ್ನು ಮಾಡಿಸಬೇಕು; ಕಂಠಪಾಠಗಳ ಮೇಲಾಟಗಳನ್ನೂ ಜರುಗಿಸಬೇಕು; ಇವುಗಳಿಂದ ಸಾಹಿತ್ಯಪ್ರೇಮವು ವಿದ್ಯಾರ್ಥಿಗಳಲ್ಲಿ ಚೆನ್ನಾಗಿ ವಿಕಸಿತವಾಗುವುದು.

**೪. ಚಿತ್ರಕಲೆಯ ಉಪಯೋಗ.**— ಮನುಷ್ಯನು ತನ್ನ ವಿಚಾರಗಳನ್ನು ಆಡುವ ಭಾಷೆಯ ಮುಖಾಂತರವಾಗಿ ಪ್ರಕಟಿಸುವಂತೆ ಚಿತ್ರಕಾರನು ಕಲೆಯ ಮುಖಾಂತರವಾಗಿ ಪ್ರಕಟಿಸುವನು. ಚಿತ್ರಕಲೆಯು ಕಠಿನವಾದ ವಿದ್ಯೆಯಾದರೂ ಅದರ ಪ್ರಾಥಮಿಕ ಜ್ಞಾನವನ್ನು ಎಲ್ಲರೂ

ಯತ್ನದಿಂದ ಸಂಪಾದಿಸಲು ಬರುವುದು. ಚಿತ್ರಕಲೆಯೂ (ಡ್ರಾಯಿಂಗೂ) ಭಾಷಾಶಿಕ್ಷಣದ ಒಂದು ಅಂಗವೇ ಆಗಿದೆ. ಭಾಷಾಶಿಕ್ಷಣದಲ್ಲಿ ಈ ಪದ್ಧತಿಯ ಉಪಯೋಗವು ದಿನದಿನಕ್ಕೆ ಹೆಚ್ಚಾಗತೊಡಗಿದೆ. ವಿದ್ಯಾರ್ಥಿಗಳು ಯಾವ ಪ್ರಾಣಿಯ ಬಗೆಗೆ ಓದಿರುವರೋ ಅದನ್ನು ಚಿತ್ರಿಸಲು ಹೇಳಬೇಕು; ಇಲ್ಲವೆ ಪ್ರಾಣಿಯ ಚಿತ್ರವನ್ನು ನೋಡಿ ಅದರ ಬಗೆಗೆ ಹೇಳಿ–ಹೇಳಿಸಬೇಕು; ಅದನ್ನು ವರ್ಣಿಸಬೇಕು; ವರ್ಣನೆಯನ್ನು ಬರೆಯಿಸಬೇಕು. ಈ ರೀತಿ ಮಾಡಿಸಿದರೆ ಹುಡುಗರಿಗೆ ಬಲು ಆನಂದ. ಒಂದು ಕತೆಯ ನಡುವೆ ವಸ್ತುವಿನ ಚಿತ್ರಗಳನ್ನು ಬರೆದು, ಚಿತ್ರಗಳ ಬದಲು ಶಬ್ದಗಳನ್ನು ಉಪಯೋಗಿಸಿ ಕತೆಯನ್ನು ಹೇಳುವುದಕ್ಕೆ ವಿದ್ಯಾರ್ಥಿಗಳನ್ನೇ ತೊಡಗಿಸಬೇಕು ಈ ರೀತಿಯಾಗಿ 'ಡ್ರಾಯಿಂಗಿ'ನ ಉಪಯೋಗವಾದರೆ ಮಕ್ಕಳ ಕಲಾಪ್ರೀತಿಯ ಜೊತೆಗೆ ಭಾಷೆಯ ಬೆಳವಣಿಗೆಯೂ ಆಗುವುದು.

೫. **ಆಟಗಳು.**— ಮಾತೃಭಾಷೆಯನ್ನು ಕಲಿಸುವಾಗ ಅನೇಕ ಬಗೆಯ ಆಟಗಳನ್ನು ಉಪಯೋಗಿಸಲಾಗುತ್ತದೆ. ವಿಶೇಷತಃ ಈ ಆಟಗಳನ್ನು ಪ್ರಾರಂಭದ ತರಗತಿಗಳಲ್ಲಿ ಉಪಯೋಗಿಸುತ್ತಾರೆ. ಆದರೆ ವಿದ್ಯಾರ್ಥಿಗಳಿಂದ ಎಲ್ಲ ವಿಷಯಗಳನ್ನೂ ಎಲ್ಲ ಕೆಲಸಗಳನ್ನೂ ಆಟದಿಂದ ಮಾಡಿಸಲು ಬರುವುದಿಲ್ಲೆಂಬುದನ್ನು ಮರೆಯಲಾಗದು. ಕೆಲವು ಆಟಗಳು ಶಿಕ್ಷಕನಿಗೆ ಭಾಷಾಶಿಕ್ಷಣದಲ್ಲಿ ನೆರವಾಗುವುವು :—

(೧) ಒಬ್ಬ ಮನುಷ್ಯನನ್ನಾಗಲಿ, ವಸ್ತುವನ್ನಾಗಲಿ, ವರ್ಗದಲ್ಲಿ ಶಿಕ್ಷಕನು ವರ್ಣಿಸಬೇಕು; ಮತ್ತು ವಿದ್ಯಾರ್ಥಿಗಳಿಗೆ ವರ್ಣಿತಮನುಷ್ಯನನ್ನು ಅಥವಾ ವಸ್ತುವನ್ನು ಹುಡುಕಲು ಹೇಳಬೇಕು. ಹುಡುಕುವುದು ಆದ ಬಳಿಕ ಅದನ್ನು ವರ್ಣಿಸಲು ಹೇಳಬೇಕು. ವರ್ಣನೆಯನ್ನು ಬರೆಯಿಸಿ ಅದನ್ನು ವರ್ಗದಲ್ಲಿ ಓದಿಸಬಹುದು.

(೨) ಶಿಕ್ಷಕನಾಗಲಿ, ವಿದ್ಯಾರ್ಥಿಯೊಬ್ಬನಾಗಲಿ, ಒಂದು ವಿಷಯವನ್ನು ಮನದಲ್ಲಿ ಯೋಚಿಸಬೇಕು. ಅದನ್ನು ವಿದ್ಯಾರ್ಥಿಗಳಿಗೆ ಹೇಳಲು ಹೇಳಬೇಕು;ಅದು ಸಿಕ್ಕುವ ವರೆಗೆ ಯಾರನ್ನು ಪ್ರಶ್ನಿಸಲಾಗುವುದೋ ಅವರು ತಾನು ಯೋಚಿಸಿದುದು 'ಹೌದು' 'ಅಲ್ಲ' ಎಂದಿಷ್ಟೇ ಉತ್ತರವನ್ನು

ಈಯಬೇಕು. (ಈ ಆಟವು ಮಾತೃಭಾಷೆಯನ್ನೂ ಪರಭಾಷೆಯನ್ನೂ ಕಲಿಸುವಾಗ ಹೆಚ್ಚು ಉಪಯುಕ್ತವಾಗುವುದು.)

(೩) ಒಂದು ಕತೆಯನ್ನು ಬಹಳ ಸ್ವಲ್ಪ ವಾಕ್ಯಗಳಲ್ಲಿ ಬರೆದು ವಿದ್ಯಾರ್ಥಿಗಳ ಎದುರಿನಲ್ಲಿಡಬೇಕು. ಅಥವಾ ವಿದ್ಯಾರ್ಥಿಗಳಿಗೆ ಒಂದೊಂದು ವಾಕ್ಯದ ನಡುವೆ ಸಾಕಷ್ಟು ಸ್ಥಾನವನ್ನು ಬಿಟ್ಟು ಬರೆದುಕೊಳ್ಳಲು ಹೇಳಬೇಕು. ಬಳಿಕ, ಬಿಟ್ಟ ಸ್ಥಾನವನ್ನು ಕತೆಯು ಸುಂದರವಾಗುವಂತೆ ವಾಕ್ಯಗಳಿಂದ ತುಂಬಲು ಹೇಳಬೇಕು. ಆನಂತರ ಪೂರ್ಣಸಿದ್ಧವಾದ ಕತೆಯನ್ನು ಬರೆಯಿಸಬೇಕು. ಅನ್ಯೋನ್ಯ ಸಂಬಂಧವು ಸುದೂರವಾಗಿರುವ ಶಬ್ದಗಳನ್ನು ಕೊಟ್ಟು, ಅವುಗಳಿಂದ ಒಂದು ಚಿಕ್ಕ ಕತೆಯನ್ನು ಹೆಣೆಯಲು ಸಹ ಹೇಳಬಹುದು.

(೪) ಒಂದು ವಾಕ್ಯದ ಶಬ್ದಗಳನ್ನು ವ್ಯಾಕರಣಕ್ಕೆ ಸರಿಹೋಗದ ರೀತಿಯಲ್ಲಿ ಕೊಟ್ಟು ವ್ಯಾಕರಣಕ್ಕೆ ಸರಿಯಾಗುವಂತೆ ಶುದ್ಧವಾಗಿ ಅದನ್ನು ಬರೆಯಲು ಹೇಳಬೇಕು.

(೫) ಶಬ್ದಗಳನ್ನು ಹೇಳುವ, ಅವನ್ನು ಬರೆಯುವ, ಪದ್ಧತಿಯನ್ನು ಹೇಳುವ ಮೇಲಾಟಗಳನ್ನೇರ್ಪಡಿಸಬೇಕು.

(೬) ಕೆಲವು ನಿಮಿಷಗಳಲ್ಲಿ ೫೦–೬೦ ಶಬ್ದಗಳನ್ನು ಬರೆಯಲು ಹೇಳಬೇಕು. ಉದಾಹರಣಾರ್ಥವಾಗಿ—"ಐದು ನಿಮಿಷಗಳಲ್ಲಿ ೬೦ ಶಬ್ದಗಳನ್ನು ಬರೆಯುವುದಿದೆ. ಮೊದಲನೆಯ ಶಬ್ದವು 'ಮೋಟಾರು;' ಬರೆಯಲು ಪ್ರಾರಂಭಿಸಿರಿ." ಎಂದು ಶಿಕ್ಷಕನು ಹೇಳಬೇಕು. ವಿದ್ಯಾರ್ಥಿಗಳು ನಿಶ್ಚಿತ ವೇಳೆಯಲ್ಲಿ ಅಷ್ಟು ಶಬ್ದಗಳನ್ನು ಬರೆದ ಬಳಿಕ ಅವನ್ನು ನೋಡಿ, ಅವುಗಳಿಗೆ ಗುಣಗಳನ್ನು ಕೊಡಬೇಕು. ಅಶುದ್ಧವಾಗಿ ಬರೆದ ಶಬ್ದಗಳಿಗಾಗಿ ಗುಣಗಳನ್ನು ಕಳೆಯಬೇಕು.

**೬. ಮಾಸಪತ್ರಿಕೆಗಳು.**— ವೈಯಕ್ತಿಕ, ವರ್ಗದ, ಮನೆಯ, ಶಾಲೆಯ, ಮಾಸಪತ್ರಿಕೆಯನ್ನು ಸಿದ್ಧಗೊಳಿಸುವುದೂ ಹೊರಡಿಸುವುದೂ ಆಟದ ಚಟುವಟಿಕೆಗಳೇ; ಏಕೆಂದರೆ ಮಕ್ಕಳು ಆಕರ್ಷಕವಾದ ಮುಖ-ಪತ್ರವನ್ನು ಸಿದ್ಧಗೊಳಿಸಬಹುದು; ಆನಂದದಿಂದ ಭಾವಚಿತ್ರಗಳನ್ನೂ

ರಮ್ಯದೃಶ್ಯಗಳನ್ನೂ ದೊರಕಿಸಬಹುದು; ಸ್ವತಃ ಚಿತ್ರಗಳನ್ನು ತೆಗೆಯ ಬಹುದು; ಲೇಖನಗಳನ್ನು ಬರೆಯಬಹುದು, ಕವನಗಳನ್ನು ರಚಿಸಿ ಪತ್ರಿಕೆ ಯಲ್ಲಿ ಕೊಡಬಹುದು. ಉತ್ತಮ ಬರೆಹಗಾರರು ಕೈ ಬರೆಹದ ಪ್ರತಿ ಯನ್ನು ಮುದ್ದಾದ ಅಕ್ಷರಗಳಿಂದ ಬರೆಯಬಹುದು. ಆದುದರಿಂದ ಇವು ಭಾಷೆಯ ಶಿಕ್ಷಣಕಾರ್ಯದಲ್ಲಿ ಉಪಯುಕ್ತವಾಗಿರುವುವೆಂಬುದು ನಿಸ್ಸಂದೇಹವಾದುದು. ಸ್ವಾನುಭವಕ್ಕೆ ಶಿಕ್ಷಣಕಾರ್ಯದಲ್ಲಿ ಪ್ರಧಾನ ವಾದ ಸ್ಥಾನವಿದ್ದರೆ ಈ ಪತ್ರಿಕೆಗಳಿಗೆ ಶಾಲೆಯ ಚಟುವಟಿಕೆಗಳಲ್ಲಿ ಶ್ರೇಷ್ಠ ವಾದ ಸ್ಥಾನವಿದೆ.

೭. **ಅಂಕಗಣಿತ.**—ಈ ವಿಷಯದಲ್ಲಿ ಆಟದ ತತ್ತ್ವವನ್ನು ತರಲು 'ಯೋಜನಾಪದ್ಧತಿ' (Project Method) ಯ ಮಾರ್ಗವೇ ಹೆಚ್ಚು ಉಪಯುಕ್ತವಾದುದು. ಶಾಲೆಗೆ ಉಪಯುಕ್ತವಾದ ಸಾಮಾನುಗಳ ಅಂಗಡಿಯನ್ನು ಶಾಲೆಯಲ್ಲಿ ಇರಿಸಿ, ಅದರ ಲೆಕ್ಕಪತ್ರಗಳನ್ನು ವಿದ್ಯಾರ್ಥಿ ಗಳಿಂದಲೇ ಬರೆಯಿಸಿ, ಅವರಿಗೆ ಗಣಿತವನ್ನು ಕಲಿಸುವುದು ಹೆಚ್ಚು ಸುಲಭ ವಾದ ಮಾರ್ಗವು. ಆದರೆ ನಿಜವಾಗಿಯೂ ನೋಡಿದರೆ, ಯಾವ ಯೋಜನೆಯನ್ನೇ ಕೈಕೊಳ್ಳಲಿ, ಅದು ಅಂಕಗಣಿತವನ್ನು ಕಲಿಸಿಯೆ ಕಲಿಸುವುದು. 'ಲಾಭ-ಹಾನಿ,' 'ಚಕ್ರಬಡ್ಡಿ,' 'ಶೇವು' ಮುಂತಾದುವುಗಳ ವಿಷಯವಾಗಿ ಸಂವಾದಗಳನ್ನು ಮಾಡಿಸಿಯೂ ಆ ಭಾಗಗಳನ್ನು ಕಲಿಸ ಬಹುದು.

೮. **ಇತರ ವಿಷಯಗಳು.**—ಇತಿಹಾಸ, ಭೂಗೋಲ ಮುಂತಾದ ವಿಷಯಗಳನ್ನು ಕಲಿಸುವಾಗಲೂ ಕ್ರೀಡನಪದ್ಧತಿಯನ್ನು ಉಪಯೋಗಿಸ ಬಹುದು. ಇತಿಹಾಸಕ್ಕೆ ಸಂಬಂಧಪಟ್ಟ ನಾಣ್ಯಗಳನ್ನೂ ಮುದ್ರಿಕೆ ಗಳನ್ನೂ ಚಿತ್ರಗಳನ್ನೂ ಸಂಗ್ರಹಿಸಿ ಇತಿಹಾಸವನ್ನು ಕಲಿಸಬಹುದು. ಶಾಲೆಯ ಪಟಾಂಗಣದಲ್ಲಿ ನಕಾಶೆಗಳನ್ನು ಮಾಡಿಸಿಯೂ ಕಾಗದದ ಮೇಲೆ ನಕಾಶೆಗಳನ್ನು ತೆಗೆಯಿಸಿಯೂ ಭೂಗೋಲವನ್ನು ಕಲಿಸಬಹುದು. ಅಲ್ಲದೆ ಪರೀಕ್ಷೆಯ ಪದ್ಧತಿಯಲ್ಲಿಯೂ ಈ ಪದ್ಧತಿಯನ್ನು ಉಪಯೋಗಿಸಿ ಪ್ರಶ್ನೆಗಳನ್ನು ಮಾರ್ಪಡಿಸಬಹುದು.

'ಶಿಸ್ತಿ'ಗೂ, ಶೀಲಸಂವರ್ಧನೆಗೂ, ಚಾರಿತ್ರ್ಯದ ಕ್ಷೇತ್ರದಲ್ಲಿಯೂ ಈ ಪದ್ಧತಿಯು ಉಪಯುಕ್ತವಾದುದೂ ಅತ್ಯಂತಮಹತ್ತ್ವವುಳ್ಳುದೂ ಆಗಿದೆ. ಪರಸ್ಪರಸಾಹಾಯ್ಯದ ತತ್ತ್ವವನ್ನು, ಜಗತ್ತಿನ ಮತ್ತು ನಮ್ಮ ದೇಶದ ಹಿತದ ದೃಷ್ಟಿಯಿಂದ, ಆಟದ ಬಯಲಲ್ಲಿ ಪರಿಣಾಮಕಾರಿಯಾಗುವಂತೆ ಕಲಿಸಬಹುದು. ಆಟವಾಡುವಾಗ ದಳಗಳನ್ನು ಮಾಡಿಕೊಂಡು ವಿದ್ಯಾರ್ಥಿಗಳು ಆಡುವರು. ಆಗ ಆಯಾ ದಳಗಳ ಸದಸ್ಯರು ತಮ್ಮ ವೈಯಕ್ತಿಕ ಯಶಸ್ಸಿಗೋಸ್ಕರ ಆಡದೆ ತಮ್ಮ ದಳದ ಯಶಸ್ಸಿಗಾಗಿ ಆಡುವರು. ದಳಗಳನ್ನು ನಿರ್ಮಿಸಿ ಶಿಕ್ಷಕರು ವಿದ್ಯಾರ್ಥಿಗಳನ್ನು ಆಟಗಳಲ್ಲಿ ತೊಡಗಿಸಬೇಕು. ಈ ಪದ್ಧತಿಯಲ್ಲಿ ಹುದುಗಿಕೊಂಡಿರುವ ಸಾಮೂಹಿಕ ಯಶಸ್ಸಿನ ತತ್ತ್ವವನ್ನು ಅವರಿಗೆ ತಿಳಿಸಿಕೊಟ್ಟು, ಅದನ್ನು ಜಗತ್ತಿಗೆ ಅನ್ವಯಿಸುತ್ತ ಜಾಗತಿಕ ಸಹಕಾರದ ತಿರುಳಿನ ಜ್ಞಾನವನ್ನು ವಿದ್ಯಾರ್ಥಿಗಳಿಗೆ ಮಾಡಿಕೊಡಬೇಕು. ಆಟದ ಬಯಲಿನಲ್ಲಿದ್ದ ಪರಸ್ಪರ ಸಾಹಾಯ್ಯದ ತತ್ತ್ವವು ತನ್ನ ಪರಿಮಿತ ಪರಿಧಿಯನ್ನು ಬಿಟ್ಟು ಇಡೀ ವಿಶ್ವಕ್ಕೂ ಹೇಗೆ ಹಬ್ಬುತ್ತ ಹೋಗುವುದೆಂಬುದನ್ನು ವಿದ್ಯಾರ್ಥಿಗಳಿಗೆ ಶಿಕ್ಷಕರು ಮನದಟ್ಟು ಮಾಡಿಕೊಟ್ಟರೆ ಚೆನ್ನು. ಅಲ್ಲದೆ, ಆಟಗಳು ಮುಂದಾಳುತನವನ್ನು ಬೆಳೆಯಿಸಿಕೊಳ್ಳಲು ಅನುವನ್ನು ಒದಗಿಸಿಕೊಡುವುವು; ವಿದ್ಯಾರ್ಥಿಗಳಲ್ಲಿ ಮನೋದಾರ್ಢ್ಯವನ್ನು ವಿಕಾಸಗೊಳಿಸುವುವು; 'ಮಾನವನೇ, ಮುಂದಿನ ಜೀವನದಲ್ಲಿ ಮುನ್ನುಗ್ಗಿದರೆ ಪಾರಾಗುವಿ.' ಎಂದು ಉಪದೇಶಿಸುವುವು.

ಆದುದರಿಂದ ಶಿಕ್ಷಕನು ಪಾಠದಲ್ಲಿ ಆಟದ ವೃತ್ತಿಯನ್ನು ಇಟ್ಟುಕೊಳ್ಳದೆ ಹೋದರೆ ಪ್ರತ್ಯಕ್ಷವಾದ ಆಟಗಳೂ ಕೆಲಸದಂತೆ ಬೇಸರಾಗಿ ಕಾಣಬಹುದು. ಪ್ರಸಿದ್ಧ ಮಾನಸಶಾಸ್ತ್ರಜ್ಞರಾದ ಮ್ಯಾಕ್ಡೂಗಲ್ ಅವರು ಆಟದ ವಿಷಯವಾಗಿ ಹೀಗೆ ತಮ್ಮ ವಿಚಾರವನ್ನು ವ್ಯಕ್ತಮಾಡಿರುವರು. "ಮನುಷ್ಯರಲ್ಲಿ ನವನಿರ್ಮಾಣದ ಯಾವ ಒಂದು ಪ್ರವೃತ್ತಿಯು ಇದೆಯೊ ಅದಕ್ಕೆ ವ್ಯಕ್ತಸ್ವರೂಪವನ್ನು ಕೊಡಲು ಕಲಾ-ವಿಲಾಸ ಮೊದಲಾದ ಅನೇಕ ಮಾರ್ಗಗಳು ಇವೆ. ಅವುಗಳಲ್ಲಿ ಆಟವೂ ಒಂದು ಮಾರ್ಗವಾಗಿದೆ. ಆಟದ ಚಟುವಟಿಕೆಗಳಲ್ಲಿ ಆಟಗಾರರಿಗೆ ತಮ್ಮ ಸತ್ತ್ವವನ್ನು ವೆಚ್ಚಮಾಡಬೇಕಾಗುತ್ತದೆ; ತಮ್ಮ ಕೃತಿಯು ಸುಂದರವಾಗುವಂತೆ ಮಾಡುವ

ಧ್ಯೇಯವನ್ನು ಸಾಧಿಸಬೇಕಾಗಿರುತ್ತದೆ. ಆಟದಲ್ಲಿ ಇದು ನಿರಪೇಕ್ಷವಾದ ಆನಂದದ ಸಲುವಾಗಿ ಇರುವುದೆಂದು ತೋರುತ್ತದೆ." "ಆಟವು ಮುಂದಿನ ಜೀವನದ ಪೂರ್ವಸಿದ್ಧತೆಯು" ಎಂದು ಕಾರ್ಲಗ್ರೂಸನು ಎನ್ನುತ್ತಾನೆ. ಈ ಮಹನೀಯರ ಈ ನುಡಿಗಳು ಕ್ರೀಡನಪದ್ಧತಿಯ ಉಪಯುಕ್ತತೆಯನ್ನು ಕಾಣದವರ ಕಣ್ಣುಗಳಿಗೆ ಅಂಜನವನ್ನು ಹಚ್ಚದೆ ಇರಲಾರವು. ಇದೇನೇ ಇದ್ದರೂ ಈ ಪದ್ಧತಿಗೆ ಶಾಲೆಗಳಲ್ಲಿ ಸ್ಥಾನವು ದೊರೆತರೆ, ವಿದ್ಯಾರ್ಥಿಗಳ ಐಚ್ಛಿಕ ಅವಧಾನವು ವಿಷಯಗಳ ಕಡೆಗೆ ಅಂಟಿ ಕೊಳ್ಳುವುದು; ಪಠ್ಯ ವಿಷಯಗಳಲ್ಲಿ ಪ್ರೇಮವು ಹುಟ್ಟುವುದು; ನಿಜವಾದ ಜ್ಞಾನಲಾಲಸೆಯು ಬೆಳೆಯತೊಡಗುವುದು. ಶಿಕ್ಷಕನು ತನ್ನ ಸರ್ವ ಶಕ್ತಿಯನ್ನು ಉಪಯೋಗಿಸಿ ವಿದ್ಯಾರ್ಥಿಗಳ ಜ್ಞಾನಭಾಂಡಾರವನ್ನು ಬೆಳೆಯಿಸುವನು. ಈ ಪದ್ಧತಿಯಿಂದ ಆಗುವ ಅನೇಕ ಶೈಕ್ಷಣಿಕ ಲಾಭಗಳು ಶಿಕ್ಷಣವನ್ನು ಸುಗಮವನ್ನಾಗಿ ಮಾಡುವುವು.

೧೫

## ಶಿಕ್ಷಣವು ಕಲೆಯೊ ಶಾಸ್ತ್ರವೊ ?

ಶಿಕ್ಷಣವಿಷಯವನ್ನು ಆಳವಾಗಿ ಅಭ್ಯಾಸಮಾಡಿದವರಿಗೆ ಶಿಕ್ಷಣವು ಕಲೆಯೊ ಅಥವಾ ಶಾಸ್ತ್ರವೊ ಎಂಬ ಪ್ರಶ್ನೆಯು ಹೊಳೆಯದೆ ಇರಲಾರದು. ಶಾಸ್ತ್ರ ಮತ್ತು ಕಲೆ ಇವುಗಳ ನಡುವೆ ಇರುವ ಸಂಬಂಧವನ್ನು ಅರಿತುಕೊಳ್ಳುವುದು ಅವಶ್ಯ. ಸಾಮಾನ್ಯವಾಗಿ ಕೆಲವರು ಶಾಸ್ತ್ರಕ್ಕೆ ಪ್ರಾಶಸ್ತ್ಯವನ್ನು ಕೊಟ್ಟು ಕಲೆಯ ಬಗೆಗೆ ಅನಾದರವನ್ನು ತೋರಿಸುವರು. ಕಲೆಯು ಹೊಸತಾದ ಪ್ರಗತಿಯ ಸಲುವಾಗಿ ಹೆಣಗಾಡದೆ, ಸಾಂಪ್ರದಾಯಿಕವಾಗಿ ನಡೆದುಬಂದ ಪದ್ಧತಿಯಂತೆ ತನ್ನ ಕಾರ್ಯವನ್ನು ಸಾಗಿಸಿ, ಕೃತಕೃತ್ಯವಾಗುತ್ತದೆಂದು ಅವರ ಅಭಿಪ್ರಾಯ. ಆದರೆ ಕಲೆಯ ಉದ್ದೇಶವು "ತಾನು ಕಲೆಯೆಂಬುದನ್ನು ಸಂಪೂರ್ಣವಾಗಿ ಕಾಣಗೊಡದೆ ಇರುವುದು" ಇದ್ದುದರಿಂದ, ಕಲೆಯೊಂದು ಸ್ವಾಭಾವಿಕ ದೃಶ್ಯವಾಗಿ ಪರಿಣಮಿಸಿ ಜನರ ಹೃದಯದಲ್ಲಿ ಸಂತೋಷವನ್ನು ಬೀರಿ ತನ್ನ ಹಿರಿಮೆಯನ್ನು ಎತ್ತಿಹಿಡಿಯುವುದು. ಸಂಗೀತವಿಶಾರದನು ತನ್ನ ಕಲೆಯ ಪ್ರಭಾವದಿಂದ ಜನರು ಮೈಮರೆಯುವಂತೆ ಮಾಡುವನು; ಆದರೆ ಕೇವಲವಾಗಿ ಸಂಗೀತಶಾಸ್ತ್ರದ ಅಭ್ಯಾಸವನ್ನು ಮಾಡಿದವನು, ಆಯಾ ರಾಗಗಳ ವರ್ಜ್ಯಸ್ವರಗಳನ್ನಾಗಲಿ ಪಾಲಿಸತಕ್ಕ ನಿಯಮಗಳನ್ನಾಗಲಿ ಮುಟ್ಟತಕ್ಕ ಮಟ್ಟಗಳನ್ನಾಗಲಿ ಶಾಸ್ತ್ರೋಕ್ತರೀತಿಯಿಂದ ತಿಳಿಸಿಕೊಟ್ಟಾಗ್ಯೂ, ಸಂಗೀತ ಕಲೆಯಲ್ಲಿ ನಿಪುಣನಾದವನು ಶ್ರೋತೃವೃಂದವನ್ನು ತಲೆದೂಗಿಸುವಂತೆ, ಸಂತೋಷಗೊಳಿಸಲಾರನು. ಶ್ರೀಮಾನ್ ಅ. ನ. ಕೃಷ್ಣರಾಯರು ಬರೆದ "ಸಂಧ್ಯಾರಾಗ"ವೆಂಬ ಕಾದಂಬರಿಯಲ್ಲಿಯ ಸಂಗೀತಕಲಾಪ್ರೇಮಿಯಾದ ಲಕ್ಷ್ಮಣನು ಕಲೆಯ ಪರಿಪೂರ್ಣತೆಯನ್ನು ಪಡೆಯಲು ಮೊಟ್ಟಮೊದಲು ಸಂಗೀತವಿದ್ವಾನ್ ಅನಂತಾಚಾರ್ಯರ ಸಂದರ್ಶನಕ್ಕೆ ಹೋದಾಗ ಅವರು :— "ಲಕ್ಷ್ಮಣಾ, ನಿನ್ನಲ್ಲಿ ಕಲೆಯ ಭಾಂಡಾರವಿದೆ. ನಾನು ಒಂದು ಕ್ರಮ ತೋರಿಸಿ ಶಾಸ್ತ್ರದ ಪರಿಚಯ ಮಾಡಿಕೊಡ

ಬೇಕಾಗಿದೆ ಅಷ್ಟೇ. ಕಲಿಯುವವರೆಲ್ಲರಿಗೂ ಶಾಸ್ತ್ರ ಬರತ್ತೆ. „ಅದು ಬುದ್ಧಿಗೋಚರ; ಆದರೆ ಕಲೆ ಬರುವದಿಲ್ಲ; ಅದು ಚಿತ್ತವೇದ್ಯ" ಎಂದು ಹೇಳಿದರು. ಮುಂದೆ ಕೆಲವು ಕಾಲದ ಮೇಲೆ ಲಕ್ಷ್ಮಣನು ದಕ್ಷಿಣಾದಿ ಸಂಗೀತದಲ್ಲಿ ಪ್ರಸಿದ್ಧರಾದ ತಂಜಾವೂರ ಕೃಷ್ಣಯ್ಯರ್ ಅವರಲ್ಲಿ ಶಿಷ್ಯನಾಗಲು ಹೋದಾಗ ಅವನು ಹಾಡಿದುದನ್ನು ಕೇಳಿ ಆ ಗುರುಗಳು ಕೆಳಗಿನ ಉದ್ಗಾರವನ್ನು ತೆಗೆದರು:— "ನೀನು ಶಿಷ್ಯನಾಗಿ ಬಂದದ್ದು ನನ್ನ ಭಾಗ್ಯವಪ್ಪಾ. ನಿನ್ನ ವಿದ್ಯೆಯು ದೈವಿಕವಾದದ್ದು. ಸಂಗೀತಶಾಸ್ತ್ರ ವಿದ್ಯೆಯನ್ನು ಹೇಳಿಕೊಡುತ್ತೆ; ಅದು ನಿಜವಾದ ವಿದ್ಯೆಯಲ್ಲ; ವಿದ್ಯೆಯು ಹೃದಯದಿಂದ ಬರಬೇಕು, ಹೃದಯಕ್ಕೆ ಸೇರಬೇಕು." ಈ ಉದಾಹರಣೆಯ ಮೇಲಿಂದ ಕಲೆಗೆ ಎಷ್ಟು ಮಹತ್ತ್ವ ವಿದೆಯೆಂಬುದು ಕಂಡುಬರುವುದು.

ಕಲೆಯು ಅಂತಃಕರಣದ ಧರ್ಮವನ್ನನುಸರಿಸುತ್ತದೆ. ಅತ್ಯುಚ್ಚ ರಸನಿಮಿಷಗಳು ಬಂದಾಗ ಕವಿಯು ಮೈಮರೆತು ತಲ್ಲೀನನಾಗಿ ಉಲಿಯ ತೊಡಗುವನು. ಆ ಭಾವತಂದ್ರೆಯು ಸರಿದುಹೋದಮೇಲೆ, ಬುದ್ಧಿಯು ಆ ಉಲಿತದ ರೀತಿಯನ್ನು ವಿವೇಚಿಸಿ ಅದರಲ್ಲೊಂದು ಕ್ರಮವನ್ನು ಹುಡುಕತೊಡಗುವುದು. ಆ ರಸಮುಹೂರ್ತದಲ್ಲಿ ಹೊರಹೊಮ್ಮಿದ ವಾಣಿಯು ಬುದ್ಧಿಯ ಮಟ್ಟವನ್ನು ಮೀರಿದ್ದರೂ ಯುಕ್ತಿಯುಕ್ತವಾದ ಕ್ರಮಬದ್ಧವಾದ ತನ್ನದೊಂದು ನಿರ್ದಿಷ್ಟ ತರ್ಕರೀತಿಯನ್ನು ಅದು ಸ್ವಯಂಭುವಾಗಿ, ಸಹಜವಾಗಿ, ಅನುಸರಿಸಿರುತ್ತದೆಯೆಂಬುದು ಕಂಡು ಬರುವುದು. ಎಂದರೆ, ನಮ್ಮ ಸಾಮಾನ್ಯ ವಿವೇಚನಾಶಕ್ತಿಯು ಹೆಜ್ಜೆ ಹೆಜ್ಜೆಗೆ ತನ್ನ ಮಾರ್ಗವನ್ನು ಅಳೆಯುತ್ತ ಸಾಗುವುದನ್ನೆ ನೈಜವಾದ ಕಲಾಸ್ಫೂರ್ತಿಯು ತೀವ್ರಗೊಳಿಸಿ, ತ್ವರಿತಗೊಳಿಸಿ, ನಿಮಿಷಾರ್ಧದಲ್ಲಿ ತನ್ನ ಗುರಿಯನ್ನು ತಲುಪಿಬಿಡುತ್ತದೆ. ಕಲೆಯು ಕ್ರಮವನ್ನು ಬಿಟ್ಟಿರುವು ದಿಲ್ಲ; ಆದರೆ ಸಾಮಾನ್ಯವಾಗಿ ನಾವು ಕ್ರಮವೆಂದು ಕರೆಯುವುದು ನೂರ್ಮಡಿ ವೇಗವನ್ನು ಹೊಂದಿರುವುದರಿಂದ, ನಮ್ಮ ಸ್ಥೂಲದೃಷ್ಟಿಗೆ ಆ ಕ್ರಮವು ಕಾಣದೆಹೋಗುವುದು. ಮಲ್ಲಿಗೆಯ ಅರಳು ಕಂಡಾಗ ನಮಗೆಷ್ಟು ಆಮೋದ? ಆದರೆ ಬೇರಿನಲ್ಲಿಯ ರಸವು ಪರಿಪಾಕಗೊಂಡು

ಬಳ್ಳಿಯಲ್ಲಿ ಹರಿದಾಡಿ ಹೂವಾಗಿ ಮೆರೆಯುವ ವರೆಗೆ ಅದು ತನ್ನ ಜೀವನಧರ್ಮವನ್ನು ಪೂರ್ಣವಾಗಿ ಪರಿಪಾಲಿಸಲೇಬೇಕಷ್ಟೇ. ಆ ಜೀವನಧರ್ಮದ ವಿವರವಿವರವಾದ ಪರಿಜ್ಞಾನವನ್ನು ಮಾಡಿಕೊಳ್ಳಲು ನಾವು ನಡೆಯಿಸುವ ಪ್ರಯತ್ನಕ್ಕೇ ಶಾಸ್ತ್ರವೆಂದು ಹೆಸರು. ಅಂತಃಕರಣದ ಸಹಜಧರ್ಮವನ್ನನುಸರಿಸಿಯೆ ಕಲಾಭಿವ್ಯಕ್ತಿಯಾಗುತ್ತಿದ್ದರೂ, ಅದು ಬುದ್ಧಿಯನ್ನು ಅಲ್ಲಗಳೆಯುವುದಿಲ್ಲ. ಅದೇಕೆ? ಬುದ್ಧಿಯ ಪರಮಪಾಕವೆ ಮೈವೆತ್ತ ಕಲಾಧಿದೇವತೆಯಾಗಿ ಬೆಳಗುವುದು. ಸಾರಾಂಶವೆಂದರೆ, **ಕಲೆಯು ಸಹಜಸಿದ್ಧಿಯಾಗಿದ್ದರೆ, ಅದರ ತಂತ್ರ ( Technique)ದ ವಿವರಣೆಯ ಪ್ರಯತ್ನವೆ ಶಾಸ್ತ್ರವೆನಿಸುವುದು.**

ಆದರೆ, ತದ್ವಿರುದ್ಧವಾಗಿ ಕೆಲವು ಸಂಪ್ರದಾಯಪ್ರಿಯರು ಶಾಸ್ತ್ರ ವಿಲ್ಲದೆ ಕಲೆಗೆ ಕಳೆಯು ಎಂದೂ ಬರಲಾರದೆಂದು ಪ್ರತಿಪಾದಿಸುವರು. ಚಿತ್ರಗಾರನು ಯಾವುದೋ ಒಂದು ಕೈಚಳಕದಿಂದ ಉತ್ತಮ ದೃಶ್ಯವನ್ನು ಚಿತ್ರಿಸಬಲ್ಲವನಾಗಿದ್ದರೂ ಅವನ ಕೃತಿಗೆ ಶಾಸ್ತ್ರದ ಆಧಾರವಿಲ್ಲದ್ದರಿಂದ, ಅಸ್ತಿವಾರ ಹಾಕದೆ ಇದ್ದ ಕಟ್ಟಡವು ತಾನಾಗಿಯೇ ಕುಸಿದುಬೀಳುವಂತೆ, ಅವನ ಚಿತ್ರದ ಯೋಗ್ಯತೆಯು ಸಹಸಾ ಕಡಮೆಯಾಗುವುದು. ಸಾಮಾನ್ಯ ಬಡಿಗನು ಕೆತ್ತನೆಯ ಕೆಲಸದಲ್ಲಾಗಲಿ ಸುಳಿಗಳನ್ನು ಚಿತ್ರಿಸುವುದ ರಲ್ಲಾಗಲಿ ತನ್ನ ನೈಪುಣ್ಯವನ್ನು ನಾನಾರೀತಿಯಿಂದ ತೋರಿಸಿದಾಗ್ಯೂ ಅಂಥವನ ಕೃತಿಗಳು ಶಾಂತಿನಿಕೇತನದ ಕಲಾಭವನ ಮುಂತಾದ ಕಲಾಶಿಕ್ಷಣ ಕೇಂದ್ರಗಳಲ್ಲಿ ಶ್ರೀ. ನಂದಲಾಲ ಬಸು ಮೊದಲಾದ ತಜ್ಞರ ಕೈಯಲ್ಲಿ ಅದೇ ವಿಷಯಗಳನ್ನು ಸಶಾಸ್ತ್ರವಾಗಿ ಅಭ್ಯಸಿಸಿ ಚಿತ್ರಶಾಸ್ತ್ರ-ಪಾರಂಗತನಾದವನ ಕೃತಿಗಳನ್ನು ಸರಿಗಟ್ಟಲಾರವು. ಎಲ್ಲ **ವ್ಯವಹಾರ ಗಳೂ ಉದ್ಯೋಗವೃತ್ತಿಗಳೂ ಶಾಸ್ತ್ರವನ್ನೇ ಅವಲಂಬಿಸಿಕೊಂಡಿವೆ. ಶಾಸ್ತ್ರದ ಬೆಂಬಲವಿಲ್ಲದೆ ಅವು ಪ್ರಗತಿಯ ಹೆಜ್ಜೆಯನ್ನು ಎಂದೂ ಇಡಲಾರವು.**

ಇವೆರಡೂ ತೀವ್ರ ಅಭಿಪ್ರಾಯಗಳು ಸಾವಿರಾರು ವರ್ಷಗಳಿಂದ ಪ್ರಕಟವಾಗುತ್ತಿದ್ದು ಕಲೆ ಮತ್ತು ಶಾಸ್ತ್ರ ಇವುಗಳ ದೃಷ್ಟಿಕೋನಗಳು ಬೇರೆಬೇರೆಯಾಗಿರಬೇಕೆಂಬ ಮಾತನು ಸೂಚಿಸುತ್ತವೆ. ಇಂಗ್ಲಂಡಿನಲ್ಲಿ

ಔದ್ಯೋಗಿಕ ಕ್ರಾಂತಿಯಾಗುವುದಕ್ಕಿಂತ ಮೊದಲು ಕೃತಿಪಾಟವಕ್ಕಿಂತ ಶಾಸ್ತ್ರಕ್ಕೇ ಹೆಚ್ಚು ಮರ್ಯಾದೆಯನ್ನು ಕೊಡುತ್ತಿದ್ದರು. ಇತ್ತೀಚೆಗೆ ಶಾಸ್ತ್ರೀಯ ದೃಷ್ಟಿಯ ಪ್ರಾಬಲ್ಯವು ಹೆಚ್ಚಾದಂತೆ ಸಿದ್ಧಾಂತವಾದಿಗಿಂತ ವ್ಯವಹಾರಚತುರನಿಗೆ ಹೆಚ್ಚು ಮಹತ್ತ್ವವು ಬರಹತ್ತಿತು. ವ್ಯವಹಾರ ಚತುರನು ತನ್ನ ಕಾರ್ಯದಲ್ಲಿ ಬಿಡಿಸಲಸಮರ್ಥನಾದ ಎಷ್ಟೋ ಸಮಸ್ಯೆ ಗಳನ್ನು ಸಿದ್ಧಾಂತವಾದಿಯು ಅವನಿಗೆ ಅನುಕೂಲವಾಗುವಂತೆ ಬಿಡಿಸಿ ಸಹಕಾರವನ್ನು ಕೊಡುವ ರೂಢಿಯು ಬಂದಿತು. ಒಟ್ಟಿನಲ್ಲಿ ಶಾಸ್ತ್ರಾಭಿಜ್ಞನು ಕಲೆಯ ಸಾಹಾಯ್ಯವಿಲ್ಲದೆ ತನ್ನ ಶಾಸ್ತ್ರದ ಲಾಭವನ್ನು ಜನರಿಗೆ ತಾನು ನೆನೆದಷ್ಟು ಪರಿಣಾಮಕಾರಿಯಾಗಿ ಕೊಡಲಾರನು. ಕಲಾಭಿಜ್ಞನಿಗೆ ಶಾಸ್ತ್ರದ ಜ್ಞಾನವಾದರೆ ಬಂಗಾರಕ್ಕೆ ಕುಂದಣವಿಟ್ಟಂತಾಗಿ ಅವನ ಕಲೆಯು ಪರಿಪೂರ್ಣತೆಯನ್ನು ಪಡೆದು ಜನರ ಹೃದಯದ ಮೇಲೆ ತನ್ನ ಸ್ವಾಮಿತ್ವವನ್ನು ಪ್ರಸ್ಥಾಪಿಸುವುದು.

ಶಿಕ್ಷಣವನ್ನು ಈ ಅಳತೆಗೋಲಿನಿಂದ ಅಳೆದರೆ, ಡಾಕ್ಟರ ಫಿಚ್ಚರು ಹೇಳಿದಂತೆ "ಶಿಕ್ಷಣವು ಶಾಸ್ತ್ರವೂ ಕಲೆಯೂ ಆಗಿದೆ"ಯೆಂದು ಕಂಡು ಬರುವುದು. "ನಿರ್ದಿಷ್ಟ ಕಾರ್ಯವನ್ನು ಯಶಸ್ವಿಯನ್ನಾಗಿ ಮಾಡಲು ಬಯಸುವುದರಿಂದ ಅದು ಕಲೆಯು. ತಾನು ಉಪಯೋಗಿಸುವ ನಿಯಮ ಗಳಿಗೆ ಸ್ವಾಭಾವಿಕ ಆಧಾರವನ್ನು ಹುಡುಕಲು ಬಯಸುವುದರಿಂದ ಅದು ಶಾಸ್ತ್ರವು" ಎಂದು ಗೋಚರವಾಗುವುದು.

ಶಿಕ್ಷಕನು ಅಭ್ಯಾಸದ ವಿಷಯಗಳನ್ನು ಕಲಿಯುವಾಗ ಕೆಳಗಿನ ಮಾತುಗಳನ್ನು ಕುರಿತು ವಿಚಾರಿಸಬೇಕಾಗುವುದು. ವಿದ್ಯಾರ್ಥಿಗಳ ಶಾರೀರಿಕ, ಸಾಮಾಜಿಕ ಸ್ಥಿತಿ, ಪೂರ್ವಜ್ಞಾನ ಅಥವಾ ಸಿದ್ಧಿ. ಪಾಠ ಗಳನ್ನು ಎಲ್ಲ ತರದ ಹುಡುಗರಿಗೆ ತಿಳಿಯುವಂತೆ, ಅವರಿಗೆ ಬೇಸರು ಬರದಂತೆ, ಶಿಕ್ಷಕನ ವಿಷಯಕ್ಕಾಗಲಿ ಪಠ್ಯವಿಷಯದ ಬಗೆಗಾಗಲಿ ಅನಾದರ ಹುಟ್ಟದಂತೆ, ಕಲಿಸಬೇಕಾಗುವುದು. ಕಲಿಯತಕ್ಕ ವಿಷಯಗಳ ಬಗ್ಗೆ ವಿದ್ಯಾರ್ಥಿಗಳಲ್ಲಿ ಆದರ ಹಾಗೂ ಅಭಿರುಚಿ ಹುಟ್ಟುವಂತೆ ಶಿಕ್ಷಣವು ನಡೆಯದಿದ್ದರೆ ಅದು ಯಶಸ್ವಿಯಾಗದು. ಇವೆಲ್ಲ ಉದ್ದೇಶಗಳು

ಸಾಧ್ಯವಾಗಬೇಕಾದರೆ ಮೇಲಾದ ಯುಕ್ತಿಯೂ ಕಾರ್ಯಪಟುತ್ವವೂ ಬೇಕು. ಆದುದರಿಂದ ಶಿಕ್ಷಣವು ಕಲೆಯೆನಿಸುವುದು.

ಶಿಕ್ಷಣವನ್ನು ಯಶಸ್ವಿಯಾಗಿ ಸಾಗಿಸಬೇಕಾದರೆ, ಅಸಾಧಾರಣ ಮೇಧಾವಿಯಾದ ಶಿಕ್ಷಕನನ್ನುಳಿದು, ಎಲ್ಲ ಶಿಕ್ಷಕರು ಸಾಮಾನ್ಯ ಮನುಷ್ಯನ ಮತ್ತು ವಿಶೇಷವಾಗಿ ಮಕ್ಕಳ ಮನಸ್ಸಿನ ವ್ಯಾಪಾರಗಳನ್ನು ಅರಿತುಕೊಳ್ಳಬೇಕಾಗುವುದು. ಶೈಕ್ಷಣಿಕ ಮಾನಸಶಾಸ್ತ್ರವನ್ನೂ ಶಾಸ್ತ್ರೀಯ ಶೋಧನೆಗಳಿಂದ ನಿರ್ದಿಷ್ಟಗೊಳಿಸಿದ ಆಧುನಿಕ ಶಿಕ್ಷಣಪದ್ಧತಿಗಳನ್ನೂ ಅಭ್ಯಸಿಸಬೇಕಾಗುತ್ತದೆ. ಹೊಸದೊಂದು ಶಿಕ್ಷಣಕ್ರಮವನ್ನಾಗಲಿ, ಪಠ್ಯವಿಷಯಗಳ ವ್ಯವಸ್ಥೆಯನ್ನಾಗಲಿ, ಕಲ್ಪಿಸಬೇಕಾದರೆ ಅವನು ಶಿಕ್ಷಣದ ಐತಿಹಾಸಿಕ ಜ್ಞಾನವನ್ನು ಪಡೆದಿರಬೇಕು. ಇವೆಲ್ಲ ವಿಷಯಗಳ ಪರಿಚಯವು ಶಿಕ್ಷಣಕಲೆಯ ತಳಹದಿಯಾಗಿರುವುದರಿಂದ ಶಿಕ್ಷಣವು ಶಾಸ್ತ್ರವೆಂದು ಗಣಿಸಲ್ಪಡುವುದು.

ಕೆಲವು ತಜ್ಞರು ಶಿಕ್ಷಣವು ಶಾಸ್ತ್ರದ ಮಟ್ಟಕ್ಕೆ ತಲುಪಬಹುದಾದ ಆಶೆಯಿದೆಯೆಂದು ಅಭಿಪ್ರಾಯಪಡುವರು. ಶಾಸ್ತ್ರದಲ್ಲಿ ಹೊಸ ಶೋಧಗಳಾದಂತೆ, ಹೊಸ ದೃಷ್ಟಿಕೋನಗಳನ್ನು ಕಲ್ಪಿಸಿದಂತೆ, ಅದರ ಬೆಳವಣಿಗೆಯು ಕ್ರಮವಾಗಿ ಸಾಗುತ್ತ ಹೋಗುವುದು. ಕಲೆಗೆ ಮಾತ್ರ ಪರಿಪೂರ್ಣತೆಯ ಒಂದು ಅವಸ್ಥೆ ಇದೆ. ಆದುದರಿಂದ ಶಿಕ್ಷಣದ ಪರಿಪೂರ್ಣತೆಯನ್ನು ಸಾಧಿಸಯತ್ನಿಸುವವರು ಶಿಕ್ಷಣಶಾಸ್ತ್ರವನ್ನು ಆಳವಾಗಿ ಅಭ್ಯಾಸಮಾಡಬೇಕು. ಒಟ್ಟಿನಲ್ಲಿ ಕಲೆಗೆ ಶಾಸ್ತ್ರದ ತಳಹದಿ ಇರಬೇಕೆಂದು ಎಲ್ಲರೂ ಒಪ್ಪುವರು.

ಆದರೆ ಕಲೆಗೂ ಶಾಸ್ತ್ರಕ್ಕೂ ನಡುವೆ ಕಾಣುವ ಪರಸ್ಪರ ವಿರೋಧವು ಈಗಿನದಲ್ಲ. ಅದು ಬಹಳ ದಿನಗಳಿಂದ ನಡೆದುಬಂದಿದೆ. ಅದು ಕೇವಲ ಶಿಕ್ಷಣಶಾಸ್ತ್ರದಲ್ಲಿಯಷ್ಟೇ ಕಂಡುಬರುವುದಿಲ್ಲ. ಜೀವನದ ಎಲ್ಲ ಕ್ಷೇತ್ರಗಳಲ್ಲೂ ಈಗ ತಲೆದೋರುತ್ತಲಿದೆ. ವ್ಯವಹಾರಚತುರನು ವಿಚಾರವಂತನನ್ನು ಕನಸಿಗನೆಂದೂ ಜ್ಞಾನದುರ್ವಿದಗ್ಧನೆಂದೂ ಜರೆದರೆ, ವಿಚಾರವಂತನು ವ್ಯವಹಾರಚತುರನನ್ನು ಕೇವಲವಾಗಿ ಕಾಯಕದವನೆಂದೂ

ಹೆಬ್ಬೊಟ್ಟಿನ ಗುರುತು ಹಾಕುವ ಅಲ್ಪಜ್ಞನೆಂದೂ ಹಿಂದಿನವರು ಮಾಡಿದಂತೆ ಕಣ್ಣುಮುಚ್ಚಿ ಮಾಡುವ ಪರಂಪರಾನುಯಾಯಿಯೆಂದೂ ತಿರಸ್ಕಾರದ ದೃಷ್ಟಿಯಿಂದ ನೋಡುವನು. ಈ ಎರಡು ತೀಕ್ಷ್ಣ ವಿಚಾರಧಾರೆಗಳು ಹಿಂದೆಯೂ ಇದ್ದುವು, ಈಗಲೂ ಇವೆ. ಕಲೋಪಾಸಕರೂ ಶಾಸ್ತ್ರವಿಶಾರದರೂ ಪರಸ್ಪರರಿಗೆ ಆಡಬಾರದ ಮಾತುಗಳನ್ನು ಆಡಿರುತ್ತಾರೆ. ಆದರೆ ನಿಜವಾಗಿ ನೋಡಿದರೆ, ಇವೆರಡೂ ತಪ್ಪಿನ ವಿಚಾರಧಾರೆಗಳಾಗಿವೆ. ಇವೆರಡರ ನಡುವೆ ಸತ್ಯದ ನಿಲುವಿದೆ. ಕೆಲವು ತೀವ್ರವಾದಿಗಳು ಶಿಕ್ಷಣವನ್ನು ಪ್ರಾಯೋಗಿಕ ಮಾನಸಶಾಸ್ತ್ರದ ಒಂದು ಶಾಖೆಯನ್ನಾಗಿ ಮಾಡಬಯಸುತ್ತಾರೆ; ಮತ್ತು ಅದರ ವ್ಯವಹಾರವನ್ನು ಶಾಸ್ತ್ರೀಯ ಸಿದ್ಧಾಂತಗಳೆಂದು ಕರೆಯಲ್ಪಡುವ ಯಾಂತ್ರಿಕ ಪ್ರಯೋಗದ ಮಟ್ಟಕ್ಕೆ ಇಳಿಸಲಿಚ್ಛಿಸುತ್ತಾರೆ. ಕೆಲವು ತೀವ್ರವಾದಿಗಳು ಶಿಕ್ಷಣವನ್ನು ಕುರಿತು ಇರುವ ಎಲ್ಲ ಪುಸ್ತಕಗಳ ಹೋಳಿಯನ್ನು ಮಾಡಬೇಕೆನ್ನುತ್ತಾರೆ. ಈ ಎರಡೂ ವಿರೋಧಗಳನ್ನು ಹೋಗಲಾಡಿಸಿ ಎರಡನ್ನೂ ಒಂದುಗೂಡಿಸುವ ಪ್ರಯತ್ನಮಾಡುವುದು ಲಾಭಕಾರಿಯಾಗುವುದು. ಏಕೆಂದರೆ ಅದರಿಂದ ಶಾಸ್ತ್ರ ಮತ್ತು ಕಲೆಯ ನಡುವೆ, ವಿಚಾರ ಮತ್ತು ವ್ಯವಹಾರದ ನಡುವೆ, ನಿಜವಾದ ಸಂಬಂಧವನ್ನು ತರಲು ಸಹಾಯವಾಗುವುದು.

ಆದರೆ "ಕೃತಿಗಿಂತ ವಿಚಾರ ಶ್ರೇಷ್ಠ, ಕೆಲಸಗಾರನಿಗಿಂತ ವಿಚಾರವಂತನು ಶ್ರೇಷ್ಠ." ಎಂದು ಪ್ರಾಚೀನಕಾಲದಿಂದಲೂ ನಡೆದುಬಂದ ವಾದಕ್ಕೆ ಈಗಲೂ ಆಹ್ವಾನವಿಲ್ಲದೆ ಇಲ್ಲ. ಈ ಆಹ್ವಾನವು ಆಧುನಿಕ ವಿಜ್ಞಾನದ ಪ್ರೇರಣೆಯಿಂದಲೇ ಬಂದುದು. ಗ್ರೀಕರ ತರುವಾಯದ ಉಚ್ಚ ಜ್ಞಾನವಿಭಾಗಗಳಲ್ಲೆಲ್ಲ ಶಾಸ್ತ್ರವು (ವಿಜ್ಞಾನವು) ಸಂಪೂರ್ಣ ಪರಿವರ್ತನೆಯನ್ನುಂಟುಮಾಡಿದೆ. ಏಕೆಂದರೆ, ಪ್ರತ್ಯಕ್ಷಾನುಭವವೇ ಆಧುನಿಕ ಶಾಸ್ತ್ರದ ಜೀವ-ಜೀವಾಳ. ವಿಚಾರ-ವ್ಯವಹಾರಗಳ ನಡುವೆ ಸಾಮಿಪ್ಯವನ್ನುಂಟುಮಾಡುವುದೇ ಆ ಅನುಭವದ ಗುರಿ. ಈ ವಿಚಾರ-ವ್ಯವಹಾರಗಳ ಸಂಲಗ್ನತೆಯು ಔದ್ಯೋಗಿಕವಾದ ಕ್ರಾಂತಿಯಿಂದ ಉಂಟಾಯಿತು. ಶಾಸ್ತ್ರೀಯ ಶೋಧನೆಗಳಿಗೆ ಅನುಸರಿಸಿಯೆ ಕೃತಿಗಳು

ಸಾಗತೊಡಗಿದುವು. ಈಗಿನ ಕಾಲದ ಉದ್ಯೋಗಗಳು ಶಾಸ್ತ್ರದ ಆಧಾರದ ಮೇಲೆ ನಿಂತಿವೆ; ವ್ಯವಹಾರವು ವಿಚಾರದಿಂದ ವ್ಯಾಪಿಸಲ್ಪಟ್ಟಿದೆ.

ವಿಚಾರಶೀಲ ಮನುಷ್ಯನ ಮತ್ತು ಕೃತಿನಿಪುಣನ, ವಿಚಾರವಂತನ ಮತ್ತು ಕಾರ್ಯಮಾಡುವವನ, ಅಥವಾ ಶಾರೀರಿಕ ಶ್ರಮಮಾಡುವವನ, ನಡುವೆ ಇದ್ದ ತಪ್ಪುತಿಳಿವಳಿಕೆಯ ತೀಕ್ಷ್ಣತೆಯು ಇದೀಗ ಕಡಮೆ ಯಾಗಿದೆ. ಈ ಬದಲಾವಣೆಯು ಆಧುನಿಕ ಶಾಸ್ತ್ರೀಯ ಪದ್ಧತಿಯು ಸಾರಭೂತವಾದ ವಿಚಾರ-ವ್ಯವಹಾರಗಳ ಆಂತರಿಕ— ಸಂಘಟನೆಯ ಪರಿಣಾಮವಾಗಿದೆ. ವಿಚಾರವಂತನು ಮತ್ತು ವ್ಯವಹಾರಚತುರನು ಇಬ್ಬರೂ ಪರಸ್ಪರರನ್ನು ಸಹಾನುಭೂತಿಯಿಂದ ನೋಡತೊಡಗಿದ್ದಾರೆ; ಅವರಲ್ಲಿದ್ದ ತೀಕ್ಷ್ಣ ವಿರೋಧವು ಕಡಮೆಯಾಗಿದೆ.

ಆದರೂ ಶಿಕ್ಷಣಶಾಸ್ತ್ರದಲ್ಲಿ ಇದ್ದಷ್ಟು ಅವಿಶ್ವಾಸವು ಇನ್ನಾವ ವ್ಯಾವಹಾರಿಕವಾದ ಮತ್ತು ವಿಚಾರಯುಕ್ತವಾದ ಕ್ಷೇತ್ರದಲ್ಲಿಯೂ ಇಲ್ಲ. ಶಿಕ್ಷಣಶಾಸ್ತ್ರಜ್ಞನ ಮತ್ತು ಶಿಕ್ಷಣಕಾರ್ಯದಲ್ಲಿ ತೊಡಗಿದ ಮನುಷ್ಯನ ನಡುವೆ ಸರಿಯಾದ ತಿಳಿವಳಿಕೆಯ ಅಭಾವವು ಇದ್ದೇ ಇದೆ. 'ಇದು ಏಕೆ ?' ಎಂಬ ಪ್ರಯೋಗಕಾರನ ಪ್ರಶ್ನೆಗೆ ಶಾಸ್ತ್ರಜ್ಞನು ಉತ್ತರ ವನ್ನೀಯಬೇಕು. ಪ್ರಯೋಗಕಾರನ ದೃಷ್ಟಿಯಲ್ಲಿ ಶಾಸ್ತ್ರಜ್ಞನು ಕಲ್ಪನಾ ಸಾಮ್ರಾಜ್ಯದಲ್ಲಿಯೆ ಲೋಲಾಡುವವನಾಗಿದ್ದಾನೆ. ಆದರೆ ತಾನು ಮಾತ್ರ ಎರಡೂ ಕಾರ್ಯಗಳನ್ನು ಮಾಡುತ್ತಿದ್ದಾನೆ. ತನ್ನ ವ್ಯವಹಾರ ವನ್ನೂ ಸಾಗಿಸುತ್ತಿದ್ದಾನೆ, ವಿಚಾರವನ್ನೂ ಮಾಡುತ್ತಿದ್ದಾನೆ. ಶಿಕ್ಷಣ ಕಾರ್ಯದಲ್ಲಿ ಉದ್ಭವಿಸುವ ಪ್ರಶ್ನೆಗಳಿಗೆ ವ್ಯಾವಹಾರಿಕ ಉತ್ತರವೀಯಲು ಪ್ರಯತ್ನಮಾಡುವಂಥ ಶಿಕ್ಷಣಶಾಸ್ತ್ರವೇ ಒಳ್ಳೆಯದು ಎಂದು ಹೇಳ ಬಹುದು. ಎಂದರೆ, ಶಿಕ್ಷಣಶಾಸ್ತ್ರಜ್ಞನು ಶಿಕ್ಷಣಕಾರ್ಯದಲ್ಲಿ ತೊಡಗಿ ದವನಿಗೆ ಒದಗುವ ಪ್ರಶ್ನೆಗಳನ್ನು ಸಮಾಧಾನಕರವಾಗಿ ಬಿಡಿಸಿದರೆ ಮಾತ್ರ ಅವನ ಉಪಯೋಗವು ಸರಿಯಾಗಿ ಆಗುವುದು.

ಅಮೇರಿಕೆಯಲ್ಲಿ ಈಗ ಶಿಕ್ಷಣವು ಶಾಸ್ತ್ರವೆಂದು ಅಭ್ಯಸಿಸಲ್ಪಡುತ್ತಿದೆ. ಶಿಕ್ಷಣಶಾಸ್ತ್ರಜ್ಞನಿಗೆ ಅಲ್ಲಿ ಆದರ, ಸನ್ಮಾನ. ಅಲ್ಲಿ ಅವನಿಗೆ ಸಿಗುವಷ್ಟು

ಮಾನಸನ್ಮಾನಗಳು ಇಂಗ್ಲಂಡಿನ ಶಿಕ್ಷಣಕ್ಷೇತ್ರದಲ್ಲಿ ದೊರೆಯಲಾರವು. ಇಂಗ್ಲಿಷರು ಸಂಪ್ರದಾಯಪ್ರಿಯರು. ಅವರು ಶಿಕ್ಷಣಕಲೆಗೆ ಹೆಚ್ಚು ಪ್ರಾಧಾನ್ಯವನ್ನು ಕೊಡುವರು. ಹಿಂದುಸ್ತಾನವು ಶಿಕ್ಷಣಕಲೆ ಮತ್ತು ಶಿಕ್ಷಣಶಾಸ್ತ್ರ ಇವೆರಡನ್ನೂ ಆಳವಾಗಿ ಅಭ್ಯಾಸಮಾಡಿದವನಿಗೆ ಸನ್ಮಾನ ವಿತ್ತು ಜಗತ್ತಿಗೆ ಒಂದು ಹೊಸತಾದ ಪಾಠವನ್ನು ಹಾಕಿಕೊಡಲು ಪ್ರಯತ್ನಿಸುತ್ತಿದೆ. ವರ್ಧಾ-ಶಿಕ್ಷಣಯೋಜನೆಯೂ ವಿದ್ಯಾಮಂದಿರಶಿಕ್ಷಣ ಯೋಜನೆಯೂ ಶಿಕ್ಷಣಶಾಸ್ತ್ರ ಮತ್ತು ಶಿಕ್ಷಣಕಲೆ ಇವೆರಡರ ಸಂಯೋಗದ ಸುಂದರ ದೃಷ್ಟಾಂತಗಳಾಗಿವೆ.

ಶಿಕ್ಷಣವು ಕಲೆಯೂ ಅಹುದು, ಶಾಸ್ತ್ರವೂ ಅಹುದು; ಆದರೆ ಶಾಸ್ತ್ರಕ್ಕಿಂತಲೂ ಹೆಚ್ಚಾಗಿ ಕಲೆಯು ಅಹುದು. **ಕಲೆಯು ಅಂತಃಕರಣದ ಧರ್ಮವನ್ನು ಅನುಸರಿಸುವುದು. ಕಲೆಯ ಸಹಜ ಅಭಿವ್ಯಕ್ತಿಯು ಕಾಲದಲ್ಲಿ ತಾನು ನಡೆದ ಹಾದಿಯು ಗೊತ್ತಾಗುವುದಿಲ್ಲ. ಬುದ್ಧಿಯು ಆದನ್ನು ಅಳೆಯುವುದು; ಅದೇ ಶಾಸ್ತ್ರ.** ಹೀಗೆ ಕಲಾ-ಶಾಸ್ತ್ರಗಳು ಅನ್ಯೋನ್ಯವಾಗಿ ಆಶ್ರಯಹೊಂದಿವೆ. ಶಿಕ್ಷಣಪ್ರೇಮಿಗಳು ಇವೆರಡೂ ಸ್ವರೂಪಗಳಿಗೆ ಸಾಕಷ್ಟು ಗಮನವನ್ನು ಕೊಟ್ಟರೆ ಶಿಕ್ಷಣಕಾರ್ಯವು ಯಶಸ್ವಿಯಾಗುವುದೆಂಬುದರಲ್ಲಿ ಸಂದೇಹವಿಲ್ಲ.

# ಪರಿಶಿಷ್ಟ ೧

## ಹಿಂದುಸ್ತಾನದಲ್ಲಿಯ ಪ್ರಾಥಮಿಕ ಶಿಕ್ಷಣದ ಕುಂದುಕೊರತೆಗಳು

ನಮ್ಮ ದೇಶದ ಸದ್ಯದ ಪ್ರಾಥಮಿಕ ಶಿಕ್ಷಣದಲ್ಲಿ ಹಲವು ಕುಂದುಕೊರತೆಗಳು ಇವೆ. ಆ ಕುಂದುಕೊರತೆಗಳು ಯಾವುವು ಎಂಬುದನ್ನು **ವ್ಯಾಕಿ** ಎಂಬ ಶಿಕ್ಷಣಜ್ಞರು ಹುಡುಕಿ ತೆಗೆದಿದ್ದಾರೆ. ಅವರು ಪಂಜಾಬ ಪ್ರಾಂತದಲ್ಲಿಯ ಪ್ರಾಥಮಿಕ ಶಿಕ್ಷಣದ ಕುಂದುಕೊರತೆಗಳನ್ನು ಕೆಳಗೆ ಕೊಟ್ಟ ಮೇರೆಗೆ ತೋರಿಸಿದ್ದಾರೆ. ಅವು ಪಂಜಾಬದವು ಅಷ್ಟೇ ಅಲ್ಲ, ಇಡಿಯ ಹಿಂದುಸ್ತಾನದ ಪ್ರಾಥಮಿಕ ಶಿಕ್ಷಣದ ಲೋಪದೋಷಗಳಾಗಿವೆಯೆಂದು ಹೇಳಿದರೆ, ಅವು ಕರ್ನಾಟಕದ ಪ್ರಾಥಮಿಕ ಶಿಕ್ಷಣದಲ್ಲಿಯೂ ಇವೆಯೆಂದು ಬೇರೆ ಹೇಳಬೇಕಾದುದಿಲ್ಲ. ಅವುಗಳಲ್ಲಿಯ ವ್ಯತ್ಯಾಸಗಳು ಅತ್ಯಲ್ಪವಾಗಿವೆ. ಆದರೆ ಅವೇ ಹೆಚ್ಚಾಗಿ ನಮ್ಮ ನಾಡಿನ ಪ್ರಾಥಮಿಕ ಶಿಕ್ಷಣ ಕ್ಷೇತ್ರದಲ್ಲಿಯೂ ಇವೆ. ಅವನ್ನು ನಮ್ಮ ಪ್ರಾಥಮಿಕ ಶಿಕ್ಷಕರು ಹೋಗಲಾಡಿಸಲು ಯತ್ನಿಸುವುದರಿಂದಲೇ ಶಿಕ್ಷಣದಲ್ಲಿ ತಕ್ಕ ಸುಧಾರಣೆಯನ್ನು ಮಾಡಿದಂತಾಗುವುದು. ಆಗುವ ಹಾನಿಯುನ್ನು, ಆಗದಂತೆ ಮಾಡುವುದೂ ಲಾಭವೆಂದೆನಿಸುವುದು. ಆದುದರಿಂದ, ಈ ಕುಂದುಕೊರತೆಗಳ ಅಭ್ಯಾಸವನ್ನು ಆಳವಾಗಿಮಾಡಿ, ಪ್ರಾಥಮಿಕ ಶಾಲೆಗಳ ಶಿಕ್ಷಕರು ಅವನ್ನು ಹೋಗಲಾಡಿಸಲು ಮನಮುಟ್ಟಿ ದುಡಿಯುವುದು ಅವರ ಆದ್ಯಕರ್ತವ್ಯವಾಗಿದೆ.

### ಶೈಕ್ಷಣಿಕ ಇತಿಹಾಸ ಮತ್ತು ಸದ್ಯದ ರೂಢಿ ಇವುಗಳ ಸಾಹಾಯ್ಯದಿಂದ ಕಂಡುಹಿಡಿದುದು.

೧. ಅರಣ್ಯ, ಆಶ್ರಮ, ಜೀವನದ ಧ್ಯೇಯ ಮುಂತಾದ ಆಯಾ ದೇಶ-ಕಾಲಗಳ ಸ್ಥಿತಿಗಳಿಗೆ ಅನುಕೂಲವಿದ್ದ ಪದ್ಧತಿಗಳು ಹಿಂದುಸ್ತಾನಕ್ಕೆ ಯೋಗ್ಯವಾಗಬಹುದೋ ಇಲ್ಲವೋ ಎಂಬುದನ್ನು ವಿಚಾರಿಸದೆ ಆಂಗ್ಲ ಶಿಕ್ಷಣಪದ್ಧತಿಯನ್ನು ಸ್ವೀಕರಿಸಿದುದು.

೨. ಪ್ರಾಥಮಿಕ ಶಿಕ್ಷಣದ ಮೇಲೆ ಉಚ್ಚ ಶಿಕ್ಷಣವು ತನ್ನ ಪ್ರಭಾವವನ್ನು ಬೀರಿದುದು. ಪ್ರಾಥಮಿಕ ಶಾಲೆಗಳ ಪಠ್ಯಕ್ರಮವು ಮಾಧ್ಯಮಿಕ ಶಾಲೆಗಳಿಗೆ ಅನುಕೂಲವಾಗುವಂತೆ ನಿರ್ಧರಿಸಲ್ಪಡುತ್ತಿತ್ತು. ಆದ್ದರಿಂದ ಕೆಲವು ಸುಶಿಕ್ಷಿತ ಜನರು ಸಾಮಾನ್ಯವಾಗಿ ತಮ್ಮ ರಾಷ್ಟ್ರೀಯ ಭಾವನೆಯನ್ನು ಕಳೆದುಕೊಂಡು ಈ ದೇಶದ ಆದರ್ಶಗಳ ವಿಷಯವಾಗಿಯಾಗಲಿ ಬೇಡಿಕೆಗಳ ವಿಷಯವಾಗಿಯಾಗಲಿ ಸಹಾನುಭೂತಿಯನ್ನು ತೋರಲಿಲ್ಲ.

೩. ಪರಿಣಾಮಕಾರಿಯಾದ ಶಿಕ್ಷಣ ಮತ್ತು ವಿದ್ಯಾರ್ಥಿಗಳ ನಿಜವಾದ ಬೆಳೆವಣಿಗೆ—ಇವುಗಳ ಕಡೆಗೆ ಸಾಕಷ್ಟು ಗಮನವನ್ನು ಪೂರೈಸದೆ ಆಡಳಿತೆಯ ಸೌಕರ್ಯಕ್ಕೂ ಒಂದೇ ತರದ ಪ್ರಗತಿಯ ತರಗತಿಗೆ ಮುಟ್ಟುವ (Standardisation) ಆವಶ್ಯಕತೆಗೂ ಹೆಚ್ಚಿನ ಮಹತ್ತ್ವವನ್ನು ಕೊಟ್ಟರು.

೪. ಶಿಕ್ಷಣದ ವಿಸ್ತಾರದ ಹಾಗೂ ಬೆಳೆವಣಿಗೆಯ ಬಗೆಗೆ ನಿಶ್ಚಿತವಾದ ಧೋರಣೆಯ ಅಭಾವ. ಪಠ್ಯಕ್ರಮವು ಪ್ರಸಂಗಾನುಸಾರವಾಗಿ ಆರಿಸಲ್ಪಟ್ಟು, ವಿಷಯಗಳನ್ನು ಅವಶ್ಯಬಿದ್ದಾಗ ಜೋಡಿಸತೊಡಗಿ, ಪಠ್ಯಕ್ರಮವು ಭಾರವಾದಾಗ ಅವುಗಳನ್ನು ತ್ಯಜಿಸಿದರು.

೫. ಪ್ರಾಥಮಿಕ ಶಿಕ್ಷಣವು ಓದು, ಬರೆಹ, ಲೆಕ್ಕ ಮತ್ತು ಸಂಗತಿಗಳನ್ನು ಕಲೆಹಾಕಲು ಓದುವುದು—ಇವುಗಳಿಗೆ ಮಾತ್ರ ಸಂಬಂಧಿಸಿ ಹಗುರಾಗುವಂತೆ ಮಾಡಿದ ಯತ್ನವು ವಿದ್ಯಾರ್ಥಿಯ ಶಿಕ್ಷಣಕಾರ್ಯವನ್ನು ನಿಜವಾಗಿ ಸುಲಭವಾಗುವಂತೆ ಮಾಡಿಲ್ಲ.

೬. ಶಿಕ್ಷಣದ ಬಾಹ್ಯ ಉಪಾಧಿಗಳಿಗೆ ಮತ್ತು ತೋರಿಕೆಗಳಿಗೆ ಅನಾವಶ್ಯಕ ಮಹತ್ತ್ವವನ್ನು ಕೊಟ್ಟಿರುವುದು. ಉದಾ : ಒಂದೇ ದೃಷ್ಟಿಯಿಂದ ಗೊತ್ತುಪಡಿಸಿದ ಶಾಲೆಯ ಸಲಕರಣೆಗಳು, ಪರೀಕ್ಷೆಗಳು, ಪ್ರಶಸ್ತಿಪತ್ರಗಳು.

೭. ಸರಕಾರದ ಉದ್ಯೋಗ, ಗುಮಾಸ್ತಗಿರಿ, ( Clerkship ) ಉಚ್ಚ ಶಿಕ್ಷಣ ಮುಂತಾದ ವಿಶಿಷ್ಟಧ್ಯೇಯಗಳನ್ನು ಸಾಧಿಸಬೇಕೆಂತಲೇ ಗೊತ್ತುಪಡಿಸಿದ ಸಂಕುಚಿತ ಪಠ್ಯಕ್ರಮವು.

೮. ತಾಳಿಲ್ಲದ ಧ್ಯೇಯಗಳ ಮೂಲಕವಾಗಿ ವಿದ್ಯಾರ್ಥಿಗಳ ವ್ಯಕ್ತಿತ್ವವನ್ನು ಅಸ್ತವ್ಯಸ್ತವನ್ನಾಗಿ ಮಾಡುವ ದ್ವಿಮುಖಧೋರಣ ಸಮನ್ವಯವಿಲ್ಲದ ಪೌರ್ವಾತ್ಯ ಪಾಶ್ಚಾತ್ಯ ಶೈಕ್ಷಣಿಕ ಪದ್ಧತಿಗಳ ಸಮಕಾಲೀನ ಅವಲಂಬನೆ, ಸಾಹಿತ್ಯಶಿಕ್ಷಣದ ಮತ್ತು ವೃತ್ತಿಶಿಕ್ಷಣದ ಸ್ವರೂಪಗಳನ್ನು ಪ್ರತ್ಯೇಕಿಸುವುದು, ಮುಂತಾದುದು.

## ೨. ಪರಿಸ್ಥಿತಿಯ ನಿರೀಕ್ಷಣೆಯ ಸಾಹಾಯ್ಯದಿಂದ ಕಂಡುಹಿಡಿದ ನ್ಯೂನತೆಗಳು

೯. ವ್ಯಾವಹಾರಿಕ ಅನುಭವಕ್ಕೆ ನಿಲುಕದ ಅಥವಾ ಮೇಳಕೂಡದ ಪಠ್ಯವಿಷಯಗಳು. ವಿಷಯವನ್ನು ಏಕೆ ಕಲಿಯಬೇಕು ಮತ್ತು ಅದರ ಉಪಯೋಗವನ್ನು ಯಾವಾಗ ಮತ್ತು ಹೇಗೆ ಮಾಡಬೇಕೆಂದು ಬಾಲಕರಿಗೆ ತಿಳಿಯುತ್ತಿರಲಿಲ್ಲ. ಪಠ್ಯಪುಸ್ತಕಗಳಿಗೆ ಮತ್ತು ಕ್ರಮವಾಗಿ ಕಲಿಯತಕ್ಕ ವಿಷಯಗಳಿಗೆ ಹೆಚ್ಚು ಪ್ರಾಶಸ್ತ್ಯವನ್ನು ಕೊಡುತ್ತಿರುವರು. ಆದುದರಿಂದ ವಿದ್ಯಾರ್ಥಿಗಳ ಜೀವನದಲ್ಲಿಯ ಪ್ರತ್ಯಕ್ಷ ಸನ್ನಿವೇಶಗಳಿಗೆ ಮತ್ತು ಸಮಾಜದಲ್ಲಿ ನಿತ್ಯ ದೊರಕಬಹುದಾದ ಅನುಭವಗಳಿಗೆ ಪ್ರಾಶಸ್ತ್ಯವು ದೊರೆಯುವುದಿಲ್ಲ.

೧೦. ಜನಾಂಗದ ಆಶೆ, ಆಕಾಂಕ್ಷೆ, ಸಂಸ್ಕೃತಿ, ವ್ಯಾವಹಾರಿಕ ಭಾಷೆ, ಸಂಪ್ರದಾಯಗಳು, ಸಾಮಾಜಿಕ ಸಂಸ್ಕಾರ ಮುಂತಾದುವುಗಳಿಗೆ ಸಾಕಷ್ಟು ಮಹತ್ತ್ವವನ್ನು ಕೊಡದೆ ಇದ್ದುದು. ಈ ತರಹದ ಅನಾದರದಿಂದ ಆತ್ಮಪ್ರಕಟನೆ, ಆವಿರ್ಭಾವ, ಉತ್ಪಾದಕಶಕ್ತಿ– ಇವು ತಲೆದೋರದೆ ಈ ದೇಶದಲ್ಲಿಯ ಜೀವನದ ಸ್ವಾರಸ್ಯವು ಕುಗ್ಗಿಹೋಗಿದೆ.

೧೧. ಈ ದೇಶದ ಜೀವನದ ಸ್ವತಂತ್ರ–ಸಂಪೂರ್ಣ–ಅಸ್ತಿತ್ವಕ್ಕೆ ಸಂಬಂಧಿಸಿದ, ಮತ್ತು ಮಹತ್ತ್ವವುಳ್ಳ ಪರಿಣಾಮವನ್ನುಂಟುಮಾಡುವ, ಸಾಮಾಜಿಕ, ಶಾಸ್ತ್ರೀಯ, ಜಾಗತಿಕ, ಘಟನೆಗಳನ್ನು ದುರ್ಲಕ್ಷಿಸಿದುದು.

೧೨. ಈ ದೇಶದಲ್ಲಿ ನೆಲೆಗೊಂಡ ಲಿಂಗ, ಜಾತಿ, ಧರ್ಮ, ಆರ್ಥಿಕ ಸ್ಥಿತಿ ಮುಂತಾದ ವಿಚಾರಗಳಿಗೆ ಮನಸೋತು ( ತಲೆವಾಗಿ ) ಶೈಕ್ಷಣಿಕ

ಸಂಧಿಗಳನ್ನು ಹೆಚ್ಚು ಕಡಿಮೆ ಮಾಡುವುದರಿಂದ ಮನೆ, ಸಮಾಜ, ದೇಶಗಳಲ್ಲಿ ಸ್ಥಿರವಾದ ಸಾಮಾಜಿಕ ನೀಚೋಚ್ಚ ಭಾವನೆಗಳಾಗಿ, ಭೇದಗಳುಂಟಾಗಿ ದೇಶದ ಸಾಮಾಜಿಕ, ಪೌರನೀತಿಯ, ರಾಜಕೀಯ ಪ್ರಗತಿಯು ಕುಂಠಿತವಾಗುವುದು.

೧೩. ಆಯಾ ಸಮಾಜಗಳಿಂದ ಬಂದ ವಿದ್ಯಾರ್ಥಿಗಳು ತಮ್ಮ ತಮ್ಮ ಸಮಾಜಗಳಿಗೆ ಸುಖ, ಆರೋಗ್ಯ, ಉತ್ಕರ್ಷ,ಇವನ್ನುಂಟುಮಾಡುವ ಶೈಕ್ಷಣಿಕ ಸ್ವರೂಪದ ಕಡೆಗೆ ತೋರಿಸಿದ ಅನಾದರ.

## ೩. ಆಧುನಿಕ ಶೈಕ್ಷಣಿಕ ಸಿದ್ಧಾಂತಗಳ ದೃಷ್ಟಿಯಿಂದ ಗೊತ್ತುಪಡಿಸಿದ ದೋಷಗಳು.

೧೪. ನಿಷೇಧಾತ್ಮಕ, ಪ್ರಗತಿವಿರೋಧಕ ಧೋರಣೆಯಿಂದ ಕೈಕೊಂಡ ಸಂಶೋಧನ; ಪ್ರತ್ಯಕ್ಷ ಕಾರ್ಯಕ್ಷೇತ್ರದಲ್ಲಿಯ ಪ್ರಯೋಗಗಳ ಅಭಾವ; ನಿರ್ಜೀವವಾದ ಅಥವಾ ನೀರಸವಾದ ಏಕರೂಪತೆ, ( Uniformity ) ನಿಯಮ ನಿರ್ಬಂಧಗಳ ಸಾಮಾನ್ಯಮಾನ್ಯತೆ ( Conformity )ಗಳಿಗೆ ಅವಾಸ್ತವವಾದ ಮಹತ್ತ್ವವನ್ನು ಕೊಡುವಿಕೆ.

೧೫. ಶಿಕ್ಷಕನ ಪ್ರಾಧಾನ್ಯವನ್ನು ಪ್ರೋತ್ಸಾಹಿಸಿ ಬಾಲಕರ ವೈಯಕ್ತಿಕತೆಯನ್ನು ಹತ್ತಿಕ್ಕುವ ಅತಿಕಠೋರವೂ ತಾಂತ್ರಿಕವೂ ಆದ ಬಿಗುವಿನಿಂದ ಕೂಡಿದ ಶಿಸ್ತು.

೧೬. ಬಾಹ್ಯಜಗತ್ತಿನ ಪರಿಸ್ಥಿತಿಯ, ಮತ್ತು ವರ್ಗದಲ್ಲಿಯ ಸಾಮಾಜಿಕ ಜೀವನದ, ಸಂಧಿಗಳ ಬಗೆಗೆ ಸಾಕಷ್ಟು ಗಮನವನ್ನು ಕೊಡದಿರುವುದು.

೧೭. ಬಾಲಕರ ಧ್ಯೇಯವನ್ನೂ ಅಮೂಲ್ಯವಾದ ಸೂಚನೆಗಳನ್ನೂ ತುಚ್ಛೀಕರಿಸುವುದು.

೧೮. ಜೀವನದ ತೊಡಕುಗಳನ್ನು ಬಿಡಿಸುವ ಯೋಗ್ಯತೆಯನ್ನೂ ಸಾಮಾಜಿಕ ಆದರ್ಶ, ರೂಢಿ, ಧ್ಯೇಯಗಳನ್ನೂ, ಉತ್ಪಾದಕ ವಿಚಾರಗಳ ಪ್ರಕಟನೆಯನ್ನೂ ಪ್ರೋತ್ಸಾಹಿಸದೆ, ಆಸಕ್ತಿಯಿಲ್ಲದ ಪುನರಾವೃತ್ತಿ,

ತಾಂತ್ರಿಕಕಾರ್ಯಗಳ ಆವೃತ್ತಿ, ಕಂಠಪಾಠ–ಇವುಗಳಿಗೆ ಪ್ರಾಶಸ್ತ್ಯವನ್ನು ಕೊಡುವುದು.

೧೯. ಸಂಸ್ಕರಣಪದ್ಧತಿಯನ್ನು ಅನುಸರಿಸದೆ ಕೇವಲ ಪೃಥಕ್ಕರಣ ಪದ್ಧತಿಯನ್ನು ಶಿಕ್ಷಣಕಾರ್ಯದಲ್ಲಿ ಉಪಯೋಗಿಸುವುದು.

೨೦. ಪಠ್ಯವಿಷಯಕ್ರಮ, ತಾಂತ್ರಿಕ ಶಿಕ್ಷಣಪದ್ಧತಿ, ಬಿಗುವಿನ ಕಟ್ಟುನಿಟ್ಟು, ಮುಂತಾದುವುಗಳಿಗೆ ಹೆಚ್ಚಿನ ಮಹತ್ತ್ವವನ್ನು ಕೊಟ್ಟು ವಿದ್ಯಾರ್ಥಿಗಳ ಶೀಲಸಂವರ್ಧನವನ್ನು ದುರ್ಲಕ್ಷಿಸುವುದು.

# ಮುಖ್ಯ ಆಧಾರಗ್ರಂಥಗಳು

## BOOKS CONSULTED

1. The New Teaching. by Sir John Adams M.A. BSC. LTD.

2. Modern Developments in Educational practice. -Do.-

3 The Teacher's Many Parts. -Do.-

4. Education: its data and first principles. Dr. T. P. Nunn

5. Modern Education. T. Raymont M.A.

6. Principles of Education. -Do.-

7. The Progressive School. W. M. Ryburn M. A.

8. Human Nature and Education. A. S. Woodburne

9. The Play Way in Education. by Dr. H. Caldwell Cook

10. Education and Psychology by Dr. Bhairavnath Jha
( Hindi Edition ) B.ED. Edin )

---

